ಪಿಎಚ್.ಡಿ. ಪ್ರಬಂಧಮಾಲೆ : ೩.



# ಡೆಪ್ಯೂಟಿ ಚೆನ್ನಬಸಪ್ಪನವರು

## [ಜೀವನ ಮತ್ತು ಸಾಧನೆ]

ಡಾ. ಬಾಳಣ್ಣ ಸೀಗೀಹಳ್ಳಿ
ಪ್ರಾಧ್ಯಾಪಕರು,
ಜೆ.ಎಸ್.ಎಸ್.ಕಾಲೇಜು, ವಿದ್ಯಾಗಿರಿ, ಧಾರವಾಡ

ವೀರಶೈವ ಅಧ್ಯಯನ ಅಕಾಡೆಮಿ,
ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

Deputy Channabasappanavaru - Jeevana mattu Sadhane — Thesis Written in Kannada by Dr. Balanna Shigihalli, M.A., Ph.D., Lecturer, J.S.S. College, Dharwad. Published by Veerashaiva Adhyayana Academy, Shri Naganuru Rudrakshimath Belgaum, Karnataka, INDIA. Printed by AKHIL GRAPHICS, Jayanagar, Dharwad - 580 001. Pages : 148 + xi

ಪ್ರಥಮ ಮುದ್ರಣ : ಡಿಸೆಂಬರ ೧೯೯೩



ಪ್ರತಿಗಳು : ೧೦೦೦

ಬೆಲೆ : ರೂ. ೧೨೫.೦೦

ಪ್ರಕಾಶಕರು :

ವೀರಶೈವ ಅಧ್ಯಯನ ಅಕಾಡೆಮಿ,
ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.



ಮುದ್ರಕರು :

ಅಖಿಲ ಗ್ರಾಫಿಕ್ಸ್
ಜಯನಗರ, ಸಪ್ತಾಪೂರ ಲಾಸ್ಟ ಕ್ರಾಸ್,
ಧಾರವಾಡ - ೫೮೦೦೦೧.



ಧಾರವಾಡ ಟ್ರೇನಿಂಗ್ ಕಾಲೇಜಿನ ಎದುರಿಗೆ ಪ್ರತಿಷ್ಠಾಪಿತವಾಗಿರುವ
ಡೆಪ್ಯೂಟಿ ಚೆನ್ನಬಸಪ್ಪನವರ ಕಂಚಿನ ಪ್ರತಿಮೆ

# ಪ್ರಕಾಶಕರ ಮಾತು

"ವೀರಶೈವ ಅಧ್ಯಯನ ಅಕಾಡೆಮಿ" ಉನ್ನತ ಆದರ್ಶಗಳನ್ನು ಕಣ್ಮುಂದೆ ಕಟ್ಟಿಕೊಂಡು ತಲೆಯೆತ್ತಿದ ಒಂದು ಸಾಂಸ್ಕೃತಿಕ ಸಂಸ್ಥೆ. ವೀರಶೈವಕ್ಕೆ ಸಂಬಂಧಪಟ್ಟ ಸಾಹಿತ್ಯ, ಕಲೆ, ಧರ್ಮ, ಸಮಾಜ, ಸಂಸ್ಕೃತಿಗಳ ಅಧ್ಯಯನ ಮತ್ತು ಪ್ರಸಾರ ಕಾರ್ಯಗಳನ್ನು ಅನುಷ್ಠಾನಗೊಳಿಸಲಿರುವ ಇದು, ಬೆಳಗಾವಿಯ ನಾಗನೂರು ರುದ್ರಾಕ್ಷಿಮಠದ ಒಂದು ಅಂಗಸಂಸ್ಥೆ.

ಅಡವಿಯಲ್ಲಿಯ ಆಶ್ರಮ ಬೇರೆ, ಊರಲ್ಲಿಯ ಮಠ ಬೇರೆ. ಒಂದರ ಗುರಿ ಆತ್ಮ ಕಲ್ಯಾಣ, ಇನ್ನೊಂದರ ಗುರಿ ಆತ್ಮಕಲ್ಯಾಣದೊಂದಿಗೆ ಸಮಾಜಕಲ್ಯಾಣ. ಹೀಗಾಗಿ ಮಠವೆನ್ನುವುದು ಧರ್ಮದೊಂದಿಗೆ ಸಮಾಜದ ಆರೋಗ್ಯಕ್ಕೆ ಅವಶ್ಯವಾಗಿರುವ ಶಿಕ್ಷಣಪ್ರಸಾರ, ಸಾಹಿತ್ಯಸೃಷ್ಟಿ, ನ್ಯಾಯಪರಿಪಾಲನೆ, ಔಷಧೋಪಚಾರ, ವೃತ್ತಿಶಿಕ್ಷಣ, ಕಲಾಪೋಷಣೆ, ಸಂಸ್ಕೃತಿಸಂವರ್ಧನೆ ಇತ್ಯಾದಿ ಚಟುವಟಿಕೆಗಳಿಗೆ ಚ್ಯುತಿಬಾರದಂತೆ ನೋಡಿಕೊಳ್ಳುವ ಒಂದು ಸಾಮಾಜಿಕ ಸಂಸ್ಥೆ. ಆಂಗ್ಲ ಆಡಳಿತ ಪದ್ಧತಿ ಕಾರಣವಾಗಿ ಇತ್ತೀಚಿನ ದಿನಗಳಲ್ಲಿ ನ್ಯಾಯ, ಶಿಕ್ಷಣ, ಔಷಧೋಪಚಾರ ಇತ್ಯಾದಿ ಚಟುವಟಿಕೆಗಳನ್ನು ಒಂದೊಂದಾಗಿ ಸರಕಾರ ವಹಿಸಿಕೊಂಡ ಕಾರಣ, ಮಠ ಧಾರ್ಮಿಕ ಚಟುವಟಿಕೆಗಳಿಗೆ ಮಾತ್ರ ಸೀಮಿತವಾಯಿತು. ಹೀಗಿದ್ದೂ 'ಜಂಗಮದಾಸೋಹ' ತತ್ವದ ವೀರಶೈವಮಠಗಳು ಧಾರ್ಮಿಕತೆಯೊಂದಿಗೆ ಸಮಾಜಕಲ್ಯಾಣದ ಭಾಗವಾಗಿರುವ ಪ್ರಸಾದನಿಲಯ, ಶಿಕ್ಷಣಸಂಸ್ಥೆ, ಸಾಹಿತ್ಯಪ್ರಕಾಶನ ಮೊದಲಾದ ಚಟುವಟಿಕೆಗಳನ್ನು ಮುನ್ನಡೆಸುತ್ತ ಬಂದುದು 'ಮಠತತ್ವ'ವನ್ನು ಒಂದು ಮಿತಿಯಲ್ಲಾದರೂ ಪಾಲಿಸುತ್ತಲಿರುವುದರ ದ್ಯೋತಕವೆನಿಸಿದೆ. ಇದಕ್ಕೆ ಒಂದು ಅರ್ಥಪೂರ್ಣ ನಿದರ್ಶನ, ಬೆಳಗಾವಿಯ ನಾಗನೂರು ರುದ್ರಾಕ್ಷಿಮಠ.

ಬೆಳಗಾವಿ ಇಂದು ಕರ್ನಾಟಕದ ಒಂದು ದೊಡ್ಡ ನಗರ. ಇಲ್ಲಿಯ ನಾಗನೂರು ರುದ್ರಾಕ್ಷಿಮಠ ಸಹಜವಾಗಿಯೇ ಕರ್ನಾಟಕ-ಮಹಾರಾಷ್ಟ್ರ ಎರಡೂ ಪ್ರಾಂತಗಳ 'ವೀರಶೈವ ರಾಯಭಾರಿ' ಎಂಬಂತೆ ದುಡಿಯಬೇಕಾಗುತ್ತದೆ, ದುಡಿಯುತ್ತ ಬಂದಿದೆ. ಈಗ ಈ ದುಡಿಮೆಯನ್ನು ಇನ್ನೂ ವಿಸ್ತಾರಗೊಳಿಸುವ, ಆಧುನಿಕಗೊಳಿಸುವ ಉದ್ದೇಶದಿಂದ 'ವೀರಶೈವ ಅಧ್ಯಯನ ಅಕಾಡೆಮಿ' ಶ್ರೀಮಠದ ಅಂಗವಾಗಿ ಅನುಷ್ಠಾನಕ್ಕೆ ಬರುತ್ತಲಿದ್ದು, ಅದರ ಗೊತ್ತು ಗುರಿಗಳು ಹೀಗಿವೆ:

೧. 'ವೀರಶೈವ ಪ್ರಾಚೀನಸಾಹಿತ್ಯಮಾಲೆ', 'ವೀರಶೈವ ಆಧುನಿಕ ಸಾಹಿತ್ಯಮಾಲೆ', 'ವೀರಶೈವ ಅನುವಾದ ಸಾಹಿತ್ಯಮಾಲೆ', 'ವೀರಶೈವ ಜನಪ್ರಿಯ ಸಾಹಿತ್ಯಮಾಲೆ', 'ಪಿಎಚ್.ಡಿ. ಪ್ರಬಂಧಮಾಲೆ' – ಹೀಗೆ ಗ್ರಂಥ ಪ್ರಕಟಣೆಗಾಗಿ ಐದು ಮಾಲೆಗಳನ್ನು ಅಸ್ತಿತ್ವಕ್ಕೆ ತರುವುದು.

೨. ವಿಶೇಷೋಪನ್ಯಾಸ, ವಿಚಾರಸಂಕಿರಣ, ಕಾರ್ಯಶಿಬಿರ, ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸುವ ಮೂಲಕ ವೀರಶೈವ ಸಾಮಾಜಿಕ, ಧಾರ್ಮಿಕ, ಐತಿಹಾಸಿಕ, ಶೈಕ್ಷಣಿಕ ಕ್ಷೇತ್ರಗಳನ್ನು ವಿದ್ವಾಂಸರ ಚಿಂತನೆಗೆ ಒಳಪಡಿಸುವುದು.

೩. ನಾಟಕ, ನರ್ತನ, ಸಂಗೀತ, ಚಿತ್ರ, ಶಿಲ್ಪ ಮಾಧ್ಯಮಗಳನ್ನು ವೀರಶೈವ ಪ್ರಸಾರಕ್ಕಾಗಿ ಬಳಸಿಕೊಳ್ಳುವುದು.

೪. ಆಧುನಿಕ ಪ್ರಸಾರಮಾಧ್ಯಮಗಳಾದ ವಿಡಿಯೋ ಚಿತ್ರೀಕರಣ, ಧ್ವನಿಸುರುಳಿ ಇತ್ಯಾದಿಗಳ ಮೂಲಕ ವೀರಶೈವ ಸಂಸ್ಕೃತಿಯನ್ನು ಸಂಗ್ರಹಿಸುವುದು, ಸಂರಕ್ಷಿಸುವುದು ಮತ್ತು ಪ್ರಸಾರಗೊಳಿಸುವುದು.

೫. ಗ್ರಂಥಾಲಯ, ವಸ್ತುಪ್ರದರ್ಶನಾಲಯ, ಹಸ್ತಪ್ರತಿ ಗ್ರಂಥಾಲಯ ಮೊದಲಾದವುಗಳನ್ನು ಸ್ಥಾಪಿಸುವುದು.

೬. ಸಮಾಜಕ್ಕೆ ಅಪಾರ ಸೇವೆ ಸಲ್ಲಿಸಿರುವ, ತಮ್ಮ ಸಾಧನೆಯಿಂದ ಗಣ್ಯಸ್ಥಾನ ಪಡೆದಿರುವ ವ್ಯಕ್ತಿಗಳನ್ನು ಗುರುತಿಸಿ, ಗೌರವಿಸುವುದು.

— ಹೀಗೆ ಬಿಚ್ಚಿಕೊಂಡಿರುವ ಹಲವು ಯೋಜನೆಗಳಲ್ಲಿ ಮುನ್ನಡೆಯ ಬಯಸಿದೆ 'ವೀರಶೈವ ಅಧ್ಯಯನ ಅಕಾಡೆಮಿ'.

'ಪಿಎಚ್.ಡಿ. ಪ್ರಬಂಧಮಾಲೆ'ಯು ಶ್ರಮ-ಶ್ರದ್ಧೆಗಳಿಂದ ವಿದ್ವಾಂಸರು ರೂಪಿಸಿದ ಪಿಎಚ್.ಡಿ. ಪ್ರಬಂಧಗಳ ಪ್ರಕಟಣೆಗೆ ಮೀಸಲಾಗಿದೆ. ಇತ್ತೀಚಿನ ದಿನಗಳಲ್ಲಿ ಆರ್ಥಿಕ ತೊಂದರೆಯಿಂದಾಗಿ ಉತ್ತಮೋತ್ತಮ ಪಿಎಚ್.ಡಿ. ಪ್ರಬಂಧಗಳು ಪ್ರಕಟವಾಗದೆ ಉಳಿದಿವೆ. ಇದರಿಂದ ವೀರಶೈವ ವಿದ್ಯಾರ್ಥಿಗಳಿಗೂ, ವೀರಶೈವ ವಿಷಯಕ್ಕೂ ಅನ್ಯಾಯವಾಗುತ್ತಲಿದೆ. ಇದನ್ನು ತಪ್ಪಿಸುವ ಉದ್ದೇಶದಿಂದ 'ಪಿಎಚ್.ಡಿ. ಪ್ರಬಂಧಮಾಲೆ' ಹೆಸರಿನ ಒಂದು ಮಾಲೆಯನ್ನೇ ಇಲ್ಲವೆ ವೀರಶೈವ ವಿಷಯವನ್ನು ಕುರಿತು ಯಾವುದೇ ವಿದ್ಯಾರ್ಥಿ ರಚಿಸಿದ ಉತ್ತಮ ಪ್ರಬಂಧಗಳ ಪ್ರಕಟಣೆಗೆ ಇಲ್ಲಿ ಅವಕಾಶವಿದೆ.

ಈಗ ಈ ಮಾಲೆಯ ಆಶ್ರಯದಲ್ಲಿ ಡಾ. ಬಾಳಣ್ಣ ಸೀಗೀಹಳ್ಳಿಯವರ "ಡೆಪ್ಯೂಟಿ ಚೆನ್ನಬಸಪ್ಪನವರು - ಜೀವನ ಮತ್ತು ಸಾಧನೆ" ಹೆಸರಿನ ಪ್ರಬಂಧವನ್ನು ಪ್ರಕಟಿಸುತ್ತಿದ್ದೇವೆ. ಆಧುನಿಕ ಕನ್ನಡ ಭಾಷಾ ಚಳುವಳಿಯ ಇತಿಹಾಸದಲ್ಲಿ ಡೆಪ್ಯೂಟಿ ಚೆನ್ನಬಸಪ್ಪನವರು ಪ್ರಥಮ ಯುಗಪುರುಷ, ಪ್ರಥಮ ಶಕಪುರುಷ. ಈ ಮಹತ್ವದ ವ್ಯಕ್ತಿಯನ್ನು, ಈ ಕಾಲಘಟ್ಟದ ಕನ್ನಡ ಚಳುವಳಿಯನ್ನು ಕುರಿತ ಸಮಗ್ರ ಅಧ್ಯಯನವಿದು. ಗಾಢವಾದ ಕ್ಷೇತ್ರಾಧ್ಯಯನ, ಸಾಹಿತ್ಯ ಅಧ್ಯಯನಗಳ ಫಲವಾದ ಈ ಬೆಲೆಯುಳ್ಳ ಕೃತಿಯನ್ನು ಡಾ. ಎಸ್.ಎಸ್. ಕೋತಿನ ಅವರ ಮಾರ್ಗದರ್ಶನದಲ್ಲಿ ರಚಿಸಿದವರು, ಧಾರವಾಡದ ಜೆ.ಎಸ್‌ಎಸ್. ಕಾಲೇಜಿನ ಕನ್ನಡ ಅಧ್ಯಾಪಕರಾದ ಡಾ. ಬಾಳಣ್ಣ ಸೀಗೀಹಳ್ಳಿಯವರು. ತಮ್ಮ ಈ ಕೃತಿಯನ್ನು ಪ್ರಕಟಿಸಲು ಅನುಮತಿ ನೀಡಿದ ಇವರಿಗೂ, ಇದು ಬೆಳಕಿಗೆ ಬರುವುದಕ್ಕೆ ನೆರವಾದ ಎಲ್ಲ ಮಹನೀಯರಿಗೂ ನಾವು ಕೃತಜ್ಞರಾಗಿದ್ದೇವೆ.

ಬೆಳಗಾವಿ.

ಪ್ರಕಾಶಕರು
ವೀರಶೈವ ಅಧ್ಯಯನ ಅಕಾಡೆಮಿ

# ಮುನ್ನುಡಿ

'ಡೆಪ್ಯೂಟಿ ಚೆನ್ನಬಸಪ್ಪನವರು - ಜೀವನ ಮತ್ತು ಸಾಧನೆ' ನನ್ನ ಮಾರ್ಗದರ್ಶನದಲ್ಲಿ ರೂಪಗೊಂಡ ಡಾ. ಬಾಳಣ್ಣ ಸೀಗೀಹಳ್ಳಿಯವರ ಪಿಎಚ್.ಡಿ. ಮಹಾಪ್ರಬಂಧ. ಕನ್ನಡ ನಾಡು-ನುಡಿ, ಸಾಹಿತ್ಯ-ಸಂಸ್ಕೃತಿಯ ಬಗೆಗೆ ಮೊದಲಿನಿಂದಲೂ ಗಂಭೀರ ಕಳಕಳಿ, ಅಭಿಮಾನ-ಆಸಕ್ತಿಗಳನ್ನು ಬೆಳಸಿಕೊಂಡು ಬಂದ ಸೀಗಿಹಳ್ಳಿಯವರ ಸುದೀರ್ಘಕಾಲದ ಪ್ರಾಮಾಣಿಕ ಪರಿಶ್ರಮದ ಫಲವಾಗಿ ಹುಟ್ಟಿಕೊಂಡ ಈ ಕೃತಿ, ನಾಡಿನ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಅತ್ಯಂತ ಮೌಲಿಕವಾದುದು. ಅಂತೆಯೇ ಮುನ್ನುಡಿಯನ್ನು ಬರೆಯುವಲ್ಲಿ ತುಂಬ ಅಭಿಮಾನ ಹಾಗೂ ಸಂತೋಷವನ್ನು ಅನುಭವಿಸುತ್ತಿದ್ದೇನೆ.

ಸಾಹಿತ್ಯ-ಸಂಶೋಧನೆಯೊಡನೆ ಡಾ. ಸೀಗಿಹಳ್ಳಿಯವರು ಇಟ್ಟುಕೊಂಡ ಸಂಬಂಧ ಹೊಸದೇನೂ ಅಲ್ಲ. ಅವರು ಪಿಎಚ್.ಡಿ. ಅಧ್ಯಯನವನ್ನು ಕೈಕೊಳ್ಳುವ ಪೂರ್ವದಲ್ಲಿಯೇ ಹಲವು ಬಗೆಯ ಸಾಂಸ್ಕೃತಿಕ ಹವ್ಯಾಸ ಹಾಗೂ ಆಸಕ್ತಿಗಳನ್ನು ಹಚ್ಚಿಕೊಂಡವರು; ಕಿತ್ತೂರಿನ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಹೊಸದರಲ್ಲಿಯೇ ಹಲವಾರು ವಿಚಾರಸಂಕಿರಣಗಳಲ್ಲಿ ಶ್ರದ್ಧೆಯಿಂದ ಭಾಗವಹಿಸಿದವರು; ಸಂಕಿರಣಗಳನ್ನು ಸಂಘಟಿಸಿದವರು; ವಿಮರ್ಶಾತ್ಮಕ ಲೇಖನಗಳನ್ನು ಬರೆದು ಆ ಭಾಗದಲ್ಲಿ ಆಗಲೇ ಹೆಸರು ಮಾಡಿದವರು; ಸಾಲದೆನ್ನುವಂತೆ ಹವ್ಯಾಸಿ ಹಾಗೂ ಜನಪದ ರಂಗ ಚಟುವಟಿಕೆಗಳಲ್ಲಿ ಎದ್ದು ಕಂಡವರು. ಮುಂದೆ ಧಾರವಾಡದ ಜೆ.ಎಸ್.ಎಸ್. ಕಾಲೇಜಿಗೆ ಅಧ್ಯಾಪಕರಾಗಿ ಬಂದಮೇಲೆ ಬೆಳೆಯುವ ಅವರ ವ್ಯಕ್ತಿತ್ವಕ್ಕೆ ಮತ್ತಿಷ್ಟು ಇಂಬು ದೊರೆತಂತಾಯಿತು; ಪರಿಣಾಮವಾಗಿ ಮಹತ್ವದ ಸಂಶೋಧನೆ ಕೈಕೊಳ್ಳಲು ಅನುಕೂಲವೂ ಆಯಿತು.

ಇಂಥ ಬಹುಮುಖಿ ಪ್ರತಿಭೆಯ ಉತ್ಸಾಹಿಯೊಬ್ಬ ಪಿಎಚ್.ಡಿ. ಅಧ್ಯಯನಕ್ಕೆ ಮಾರ್ಗದರ್ಶನ ಬಯಸಿ ಬಂದಾಗ, ವಿಷಯದ ಆಯ್ಕೆಯೇ ಒಂದು ಸಮಸ್ಯೆಯಾಗಿ, ನನಗೆ ಒಂದು ಬಗೆಯ ಗೊಂದಲ ತಲೆದೋರಿತು. ವಿಷಯದ ಆಯ್ಕೆ ಕುರಿತಂತೆ ನಾನು ಏನೇನೋ ಲೆಕ್ಕಾಚಾರದಲ್ಲಿದ್ದಾಗ ಡಾ. ಎಂ.ಎಂ. ಕಲಬುರ್ಗಿಯವರು 'ಡೆಪ್ಯೂಟಿ ಚೆನ್ನಬಸಪ್ಪನವರ ಜೀವನ ಮತ್ತು ಸಾಧನೆ'ಯತ್ತ ನಮ್ಮಿಬ್ಬರ ಗಮನ ಸೆಳೆದರು. ಅದರ ಅಗತ್ಯವನ್ನು ಮತ್ತು ಮಹತ್ವವನ್ನು ಬಿಂಬಿಸಿದರು. ನಾನು ತುಂಬ ಪ್ರಭಾವಿತನಾದೆ; ಶ್ರೀ ಸೀಗೀಹಳ್ಳಿಯವರೂ ಕೂಡ.

ವರ್ತಮಾನ ಹಾಗೂ ಭವಿಷ್ಯದ ಬಗೆಗಿನ ಎಲ್ಲ ಭರವಸೆಗಳನ್ನು ಕಳೆದುಕೊಂಡು ನಿರ್ಜೀವವಾಗಿ ಬಿದ್ದಿದ್ದ ನಾಡಿನ, ಅದರಲ್ಲೂ ಉತ್ತರ ಕರ್ನಾಟಕದ ಕಣ್ಣುತೆರೆಯಿಸಿ, ಅದರ ಬದುಕಿಗೆ, ಸಂಸ್ಕೃತಿಗೆ ಒಂದು ಭವಿಷ್ಯವನ್ನು ರೂಪಿಸಿಕೊಟ್ಟ ಡೆಪ್ಯೂಟಿ ಚೆನ್ನಬಸಪ್ಪನವರಂಥ ಹಿರಿಯ ತಲೆಮಾರಿನ ಮಹಾಚೇತನವನ್ನು ಕುರಿತು ನಮ್ಮ ಸಂಶೋಧನೆಯ ಗಮನ ಹರಿಯದೇ ಹೋದರೆ, ನಮ್ಮ ನಾಡಿನ ಸಂಸ್ಕೃತಿಯ ದೃಷ್ಟಿಯಿಂದ ಅದಕ್ಕಿಂತಲೂ ಮಿಗಿಲಾದ ಉಪೇಕ್ಷೆ, ಅಪಚಾರ ಮತ್ತೊಂದಿಲ್ಲ ಎನಿಸಿತು. ಈ ಹಿನ್ನೆಲೆಯಲ್ಲಿ ನೋಡಿದಾಗಲಂತೂ

ಡಾ.ಸೀಗೀಹಳ್ಳಿಯವರ ಈ ಕೃತಿ ಇನ್ನೂ ಹೆಚ್ಚು ಮೌಲಿಕವಾಗಿ ಕಾಣಿಸಿಕೊಳ್ಳುತ್ತದೆ. ಅಲ್ಲದೆ ಕರ್ನಾಟಕ ವಿಶ್ವವಿದ್ಯಾಲಯವು ಪಿಎಚ್.ಡಿ. ಪದವಿಯನ್ನು ಪ್ರದಾನಮಾಡಿದ ಅತ್ಯಲ್ಪ ಕಾಲದಲ್ಲಿಯೇ ಅದು ಪ್ರಕಟವಾಗಿ ಹೊರಬರುತ್ತಿರುವದು ನಮ್ಮ ನಾಡಿನ ಅರಿವು ಕಣ್ತೆರೆದುದರ ಸಂಕೇತವೆಂದೂ ನಾನು ತಿಳಿದಿದ್ದೇನೆ.

ಡೆಪ್ಯೂಟಿ ಚೆನ್ನಬಸಪ್ಪನವರ ಬಗ್ಗೆ ಸಂಶೋಧನೆ ಎಂದರೆ ಕರ್ನಾಟಕದ ಒಂದು ಕಾಲಘಟ್ಟದ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಸಂಶೋಧನೆಯೇ ಹೊರತು ಬೇರೆಯಲ್ಲ. ಘೋರ ಪರಿಶ್ರಮದಿಂದ ಸತ್ವವನ್ನು ಆರ್ಜಿಸಿಕೊಂಡು, ಅದನ್ನು ತನ್ನ ಪರಿಸರಕ್ಕೆ, ಸಮಾಜಕ್ಕೆ ಧಾರೆಯರೆಯುವುದೇ ಬದುಕಿನ ಪರಿಪೂರ್ಣತೆ ಮತ್ತು ಸಾರ್ಥಕತೆ ಎಂದು ಹೇಳುವುದಾದರೆ ಅಂಥ ಪರಿಪೂರ್ಣ, ಸಾರ್ಥಕ ಬದುಕನ್ನು ಬದುಕಿದ ಶ್ರೇಯಸ್ಸು ಡೆಪ್ಯೂಟಿ ಚೆನ್ನಬಸಪ್ಪನವರದು. ಉಸಿರುಗಟ್ಟುವ ಉರಿಉರಿ ವಾತಾವರಣದಲ್ಲಿ ಎಲ್ಲ ಅಭಾವ-ಆತಂಕಗಳ ಮಧ್ಯದಲ್ಲಿಯೇ ಆಶ್ಚರ್ಯಕರವಾಗಿ ಬೆಳೆದುನಿಂತ ಸತ್ವ ಅವರದು. ಶಿಕ್ಷಣಕ್ಕಾಗಿ, ಆ ಮೂಲಕ ಸಾಹಿತ್ಯ-ಸಂಸ್ಕೃತಿಗಾಗಿ ತಮ್ಮನ್ನೇ ತಾವು ನಿರ್ವಂಚನೆಯಿಂದ, ನಿರ್ದಾಕ್ಷಿಣ್ಯದಿಂದ ಸಮರ್ಪಿಸಿಕೊಂಡದ್ದೇ ಅಲ್ಲದೆ, ತಮ್ಮ ಕೌಟುಂಬಿಕ ಬದುಕಿನ ನೆಮ್ಮದಿಯನ್ನೇ ಪಣಕ್ಕಿಟ್ಟು, ಧೀರಸಂಕಲ್ಪದಿಂದ ಹೋರಾಡಿದವರು, ಚೆನ್ನಬಸಪ್ಪನವರು. ಹಾಗೆಂದೇ ಅವರ ಸಾಧನೆಯ ಒಂದೊಂದು ಹೆಜ್ಜೆಯ ಹಿಂದೆಯೂ ಒಂದೊಂದು ರೋಮಾಂಚನಕಾರಿಯಾದ ಕಥೆ ಅಡಗಿದೆ. ಇಂಥ ಮಹಾವ್ಯಕ್ತಿಯ ಜೀವನ ಹಾಗೂ ಸಾಧನೆಯನ್ನು ಕುರಿತು ಸಂಶೋಧನೆಯನ್ನು ಕೈಕೊಳ್ಳುವ ವ್ಯಕ್ತಿಗೆ ವಿಶೇಷ ಸಂಸ್ಕಾರ, ಕಳಕಳಿ, ಕಾಳಜಿ ಹಾಗೂ ಜವಾಬ್ದಾರಿ ಇರಬೇಕಾದದ್ದು ಅನಿವಾರ್ಯ. ಡಾ.ಸೀಗೀಹಳ್ಳಿಯವರು ಅಂಥ ಸಾಮರ್ಥ್ಯವನ್ನು ಪ್ರಬಂಧದುದ್ದಕ್ಕೂ ಪ್ರದರ್ಶಿಸುತ್ತ ಬಂದಿರುವದನ್ನು ಯಾರಾದರೂ ಗುರುತಿಸಬಹುದಾಗಿದೆ.

ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ, ಡೆಪ್ಯೂಟಿ ಚೆನ್ನಬಸಪ್ಪನವರಂಥ ಹಿರಿಯ ಸಮಾಜಜೀವಿಯನ್ನು ಕುರಿತು ಸಂಶೋಧನೆ ನಡೆಸುವುದಾಗಲಿ, ಸಾಮಗ್ರಿಯನ್ನು ಸಂಗ್ರಹಿಸುವುದಾಗಲಿ ಇನ್ನಾವುದೇ ಕವಿ, ಕೃತಿ, ಕಲಾವಿದರನ್ನು ಕುರಿತು ನಡೆಸುವ ಸಂಶೋಧನೆಗಿಂತ ತುಂಬ ಕಷ್ಟದ್ದಾಗಿರುತ್ತದೆ. ಯಾವುದೇ ಸಮಾಜ ತನ್ನ ನಾಡಿನ ಕವಿ-ಕಲಾವಿದರನ್ನು ನೆನಪಿಡುವಂತೆ, ಅವರ ಬಗೆಗೆ ಆಸಕ್ತಿಯನ್ನು ತೋರುವಂತೆ, ತನ್ನ ಶಿಕ್ಷಣ, ಸಾಂಸ್ಕೃತಿಕ ವ್ಯಕ್ತಿಗಳನ್ನು ನೆನಪಿನಲ್ಲಿಡುವದು ಮತ್ತು ಆಸಕ್ತಿಯನ್ನು ತೋರುವದು ತೀರ ವಿರಳ. ಹಾಗೆ ನಾಡಿಗಾಗಿ ಜೀವ ತೇದ ವ್ಯಕ್ತಿಗಳು ಸಮಾಜದ ಮರೆವಿನಲ್ಲಿ ಮುಳುಗಿಹೋಗುವುದೇ ಹೆಚ್ಚು. ಅಂಥ ಚೇತನಗಳ ಋಣವನ್ನು ಉಣ್ಣುತ್ತಿರುವಾಗಲೇ ಅವರನ್ನು ಮರೆತು ಬಿಡುವುದು ನಮ್ಮ ಸಾಮಾಜಿಕ ಸಂದರ್ಭದಲ್ಲಿ ಒಂದು ಆಶ್ಚರ್ಯಕರವಾದ ದುರಂತ. "ಊರು ಉಪಕಾರ ಅರಿಯದು, ಹೆಣ ಸಿಂಗಾರ ಅರಿಯದು" ಎಂಬ ನಾಣ್ಣುಡಿಯ ಹಿಂದಿನ ಅನುಭವವೂ ಅದನ್ನೇ ಹೇಳುವಂತಹದು. ನಮ್ಮ ಜನ ಅಂಥವರ ಬದುಕನ್ನು ಪುರಾಣ ಮಾಡಿಯಾರೇ ಹೊರತು ಚರಿತ್ರೆಯನ್ನಾಗಿ ಸ್ವೀಕರಿಸುವುದಿಲ್ಲ. ಇದರಿಂದಾಗಿ ಒಬ್ಬ ಕವಿ, ಕಲಾವಿದನ ಬಗೆಗೆ ದಾಖಲೆಗಳು, ವಿವರಗಳು ಉಳಿದುಕೊಂಡು ಬರುವಷ್ಟು ಒಬ್ಬ ಶೈಕ್ಷಣಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ವ್ಯಕ್ತಿಯ ಬಗೆಗೆ ಉಳಿದುಕೊಂಡು ಬರುವುದಿಲ್ಲ. ಇದರಿಂದಾಗಿ ಇಂಥ ಮಹನೀಯರನ್ನು ಕುರಿತು ನಡೆಸುವ ಸಂಶೋಧನೆ ಸಂಶೋಧಕರಿಗೊಂದು ಸವಾಲಾಗಿ ಕಾಡುತ್ತದೆ. ಇಂಥ ಅನುಭವ ಸೀಗೀಹಳ್ಳಿಯವರಿಗೆ ಹೊಸದಲ್ಲ. ಆದರೆ ಆ ಎಲ್ಲ ಸವಾಲುಗಳನ್ನು ಇವರು ತುಂಬ ತಾಳ್ಮೆಯಿಂದ ಎದುರಿಸಿದ್ದಾರೆ. ಅವಿಶ್ರಾಂತ ಕ್ಷೇತ್ರಕಾರ್ಯದಿಂದ, ಸಂದರ್ಶನಗಳಿಂದ,

ಸಂಬಂಧಿಸಿದ ಸಂಘ-ಸಂಸ್ಥೆಗಳನ್ನು ಮೊರೆಹೊಗುವ ಮೂಲಕ ಸಂಗ್ರಹಿಸಿದ ದಾಖಲೆಗಳಿಂದ ಸಮಸ್ಯೆಯನ್ನು ನಿವಾರಿಸಿಕೊಳ್ಳುವ ದಿಸೆಯಲ್ಲಿ ಹೆಣಗಿದ್ದಾರೆ.

ಪ್ರಬಂಧದ ಒಟ್ಟು ವಿಷಯವನ್ನು ೧. ಅಧ್ಯಯನದ ಅಗತ್ಯ-ಆಕರ-ಸ್ವರೂಪ, ೨.ಸಮಕಾಲೀನ ಪರಿಸರ – ಒಂದು ನೋಟ, ೩. ಚೆನ್ನಬಸಪ್ಪನವರ ಜೀವನ, ೪.ಚೆನ್ನಬಸಪ್ಪನವರ ಕಾರ್ಯ ಮತ್ತು ಸಾಧನೆ, ೫. ಚೆನ್ನಬಸಪ್ಪನವರ ಬರವಣಿಗೆ, ಅವರು ಕಟ್ಟಿದ ಕನ್ನಡ ಬಳಗ, ೬. ಚೆನ್ನಬಸಪ್ಪನವರನ್ನು ಕುರಿತ ಸಾಹಿತ್ಯ, ೭. ಚೆನ್ನಬಸಪ್ಪನವರ ವ್ಯಕ್ತಿತ್ವ-ಧೋರಣೆ – ಹೀಗೆ ಏಳು ಅಧ್ಯಾಯಗಳಲ್ಲಿ ವಿಷಯವನ್ನು ವಿಂಗಡಿಸಿಕೊಂಡು, ಮೂಲ ಸತ್ಯದ ಯಾವ ಅಂಶವೂ ನುಸುಳಿಕೊಂಡು ಹೋಗದಂತೆ ತುಂಬ ಕಾಳಜಿ ವಹಿಸಿದ್ದಾರೆ. ವಿಷಯ ನಿರೂಪಣೆಯಲ್ಲಿ ತಾದಾತ್ಮ್ಯವನ್ನು ಸಾಧಿಸಿಯೂ, ಅದರಲ್ಲಿಯೇ ತೇಲಿಹೋಗದೆ ಅದನ್ನು ತಮ್ಮ ನಿಯಂತ್ರಣಕ್ಕೆ ತೆಗೆದುಕೊಳ್ಳುತ್ತ ಹೋಗಿರುವುದು ಇಲ್ಲಿಯ ಒಂದು ವಿಶೇಷ.

ಒಟ್ಟಿನಲ್ಲಿ ಈ ಕೃತಿ ಡಾ. ಸೀಗೀಹಳ್ಳಿಯವರ ಕಳಕಳಿಯ ಪರಿಶ್ರಮಕ್ಕೆ, ಅವರ ಸಾಂಸ್ಕೃತಿಕ ಕಾಳಜಿಗೆ, ಶಾಸ್ತ್ರೀಯ ಪ್ರಜ್ಞೆಗೆ, ಸೂಕ್ಷ್ಮ ಒಳನೋಟಕ್ಕೆ, ಭಾಷಾಶೈಲಿಯ ಹದಗಾರಿಕೆಗೆ ಮತ್ತು ಸಂಶೋಧನಪ್ರತಿಭೆಗೆ ಬೆರಳಿಟ್ಟು ಹೇಳಬಹುದಾದ ನಿದರ್ಶನವಾಗಿದೆ ಮಾತ್ರವಲ್ಲ; ನಮ್ಮ ನಾಡಿನ ಒಂದು ಕಾಲಘಟ್ಟದ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದಲೂ ಒಂದು ಅತ್ಯಮೂಲ್ಯವಾದ ಕೊಡುಗೆಯಾಗಿದೆ ಎಂದು ಮತ್ತೆ ಮತ್ತೆ ಹೇಳಬೇಕೆನಿಸುತ್ತದೆ.

ಈ ಎಲ್ಲ ಕಾರಣಗಳಿಂದಾಗಿ ಡಾ. ಸೀಗಿಹಳ್ಳಿಯವರನ್ನು ಹಾಗೂ ಈ ಗ್ರಂಥವನ್ನು ಪ್ರಕಟಿಸಲು ಮುಂದಾದ ಬೆಳಗಾವಿಯ ಶ್ರೀ ನಾಗನೂರು ರುದ್ರಾಕ್ಷಿಮಠದ ವೀರಶೈವ ಅಕಾಡೆಮಿಯನ್ನು ತುಂಬು ಹೃದಯದಿಂದ ಅಭಿನಂದಿಸುತ್ತೇನೆ.

ಕನ್ನಡ ಅಧ್ಯಯನಪೀಠ

ಡಾ. ಎಸ್.ಎಸ್. ಕೋತಿನ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

# ಅರಿಕೆ

'ಕನ್ನಡದ ಹುಲಿ' ಎಂದೇ ಪ್ರಸಿದ್ಧರಾಗಿರುವ ಡೆಪ್ಯೂಟಿ ಚೆನ್ನಬಸಪ್ಪನವರನ್ನು ಕುರಿತು ನಾನು ಪಿಎಚ್.ಡಿ. ಅಧ್ಯಯನ ಪ್ರಾರಂಭಿಸಿದ್ದು ೧೯೮೫ರಲ್ಲಿ; ಅದು ಸಾಕಾರಗೊಂಡದ್ದು ೧೯೯೨ರ ಜೂನದಲ್ಲಿ. ಈ ಕಾಲಾವಧಿಯಲ್ಲಿ ಹಲವಾರು ಕಡೆ ಕ್ಷೇತ್ರಕಾರ್ಯ ಕೈಕೊಂಡು, ಸಾಧ್ಯವಿದ್ದಷ್ಟೂ ಮೂಲ ದಾಖಲೆಗಳೊಂದಿಗೆ 'ಡೆಪ್ಯೂಟಿ ಚೆನ್ನಬಸಪ್ಪನವರು – ಜೀವನ ಮತ್ತು ಸಾಧನೆ' ಎಂಬ ಈ ಸಂಶೋಧನ ಪ್ರಬಂಧವನ್ನು ಸಿದ್ಧಪಡಿಸಿದ ತೃಪ್ತಿ ನನಗಿದೆ. ಈ ಸಂಶೋಧನ ಕಾರ್ಯದಲ್ಲಿ ನನಗೆ ಹಲವು ರೀತಿಯಿಂದ ಸಹಾಯ ಸಹಕಾರಗಳನ್ನು ನೀಡಿ ನೆರವಾದ ಮಹನೀಯರನ್ನೂ, ಸ್ನೇಹಿತರನ್ನೂ, ಹಿತೈಷಿಗಳನ್ನೂ ನೆನೆಯುವದು ನನ್ನ ಕರ್ತವ್ಯವಾಗಿದೆ.

ಚರಿತ್ರೆಯ ನಿರ್ಮಾಪಕನೊಬ್ಬನನ್ನು ಕುರಿತು ಸಂಶೋಧನೆ ಕೈಕೊಳ್ಳುವ ನನ್ನ ಬಲವಾದ ಆಸೆಯನ್ನು ವಿದ್ಯಾಗುರುಗಳೂ ಕನ್ನಡ ಅಧ್ಯಯನಪೀಠದ ಹಿರಿಯ ಪ್ರಾಧ್ಯಾಪಕರೂ ಆಗಿರುವ ಡಾ. ಎಂ.ಎಂ. ಕಲಬುರ್ಗಿಯವರ ಮುಂದೆ ಹೇಳಿಕೊಂಡಾಗ, ಈ ವಿಷಯವನ್ನು ಸೂಚಿಸಿ, ಕಾರ್ಯಪ್ರವೃತ್ತವಾಗುವಂತೆ ಪ್ರೇರೇಪಿಸಿದುದಲ್ಲದೆ, ಸಂಶೋಧನೆಯ ಶಿಸ್ತನ್ನು ಮೈಗೂಡಿಸಿಕೊಳ್ಳುವಂತೆ ನೋಡಿಕೊಂಡು, ಬೆಳಗಾವಿಯ ನಾಗನೂರು ಶ್ರೀಗಳವರ ಮಠದಿಂದ ಪ್ರಕಟಗೊಳ್ಳಲು ಒತ್ತಾಸೆ ತಂದು, ತಮ್ಮ ಹತ್ತು ಹಲವು ಕೆಲಸಗಳ ಮಧ್ಯೆಯೂ ಅದಕ್ಕೊಂದು ವ್ಯವಸ್ಥಿತ ರೂಪುಕೊಟ್ಟವರು ಅವರೇ. ಅವರ ಕಣ್ಣರಿಕೆಯಲ್ಲಿ ಕೆಲಸ ಮಾಡುವುದೆಂದರೆ ಒಂದು ಹೆಮ್ಮೆಯ ವಿಷಯ. ಈ ಕೃತಿ ಪ್ರಕಟಣೆಯ ಸಂದರ್ಭದಲ್ಲಿ ಆ ಭಾಗ್ಯ ನನ್ನದಾಗಿತ್ತೆಂಬುದನ್ನು ಹೇಳಿಕೊಳ್ಳುವುದೇ ನನಗೆ ಅತ್ಯಂತ ಗೌರವದ ಸಂಗತಿಯಾಗಿದೆ. ಅಲ್ಲದೆ ಹಲವಾರು ಹೊಸ ವಿಷಯಗಳ ಕಡೆಗೆ ಗಮನ ಸೆಳೆದು, ಅವು ಈ ಕೃತಿಯಲ್ಲಿ ಅಧಿಕೃತವಾಗಿ ದಾಖಲಾಗುವಂತೆ ನೋಡಿಕೊಂಡು, ಉದ್ದಕ್ಕೂ ಅನನ್ಯ ಆಸ್ಥೆವಹಿಸಿದ್ದನ್ನು ನಾನೆಂದೂ ಮರೆಯಲಾರೆ. ಅವರಿಗೆ ನನ್ನ ಪ್ರಣಾಮಗಳು.

ಈ ಸಂಶೋಧನೆಗೆ ತಮ್ಮ ಮಾರ್ಗದರ್ಶನದಲ್ಲಿ ಅವಕಾಶ ಮಾಡಿಕೊಟ್ಟವರು ಡಾ. ಎಸ್.ಎಸ್. ಕೋತಿನ ಅವರು. ಎಡೆಬಿಡದೆ ಕಾಡುತ್ತಿದ್ದ ತಮ್ಮ ಅನಾರೋಗ್ಯದ ಮಧ್ಯೆಯೂ ಸಂದೇಹಗಳಿಗೆ ಪರಿಹಾರ ನೀಡುತ್ತ, ಬರವಣಿಗೆಯನ್ನು ಪರಿಷ್ಕರಿಸುತ್ತ ನನ್ನ ಈ ಪ್ರಬಂಧ ಹೆಚ್ಚು ಅಧಿಕೃತವೂ, ಸಮರ್ಪಕವೂ ಆಗುವಂತೆ ನೋಡಿಕೊಂಡು, ಎಲ್ಲ ನಿಟ್ಟನಿಂದಲೂ ನೆರವಾದ ಅವರನ್ನು ಅತ್ಯಂತ ಗೌರವದಿಂದ ಸ್ಮರಿಸುತ್ತೇನೆ.

ಚೆನ್ನಬಸಪ್ಪನವರು ಮರಾಠಿಯಲ್ಲಿ ಬರೆದಿರುವ 'ಸಮೀಕರಣ ಸಂಗ್ರಹ' ಹೆಸರಿನ ಬೀಜಗಣಿತವನ್ನು ಪುಣೆಯ ಗ್ರಂಥಾಲಯದಿಂದ ದೊರಕಿಸಿಕೊಟ್ಟು, ಇತರ ಉಪಯುಕ್ತ ಮಾಹಿತಿ ನೀಡಿ, ಶೈಕ್ಷಣಿಕ ಇತಿಹಾಸಕ್ಕೆ ಸಂಬಂಧಪಟ್ಟ ತಮ್ಮ ಹಸ್ತಪ್ರತಿಯ ಕಟ್ಟನ್ನೂ ಒದಗಿಸಿದ ಡಾ. ಶ್ರೀನಿವಾಸ ಹಾವನೂರ ಅವರನ್ನೂ, ಫ.ಗು.ಹಳಕಟ್ಟಿಯವರು ಸಂಪಾದಿಸಿದ 'ಕೈ.ವಾ.ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆ' ಹಾಗೂ ಡೆಪ್ಯೂಟಿಯವರೇ ಬರೆದಿರುವ 'ಕನ್ನಡ

ಅಂಕಗಣಿತ ಭಾಗ-೨'ನ್ನು ಒದಗಿಸಿಕೊಟ್ಟ ಎಸ್.ಬಿ.ಹಳಕಟ್ಟಿಯವರನ್ನೂ ಕೃತಜ್ಞತೆಯಿಂದ ನೆನೆಯುತ್ತೇನೆ.

ಧಾರವಾಡದ ಟ್ರೇನಿಂಗ್ ಕಾಲೇಜಿಗೆ ವಿಷಯ ಸಂಗ್ರಹಕ್ಕಾಗಿ ಹೋದಾಗಲೆಲ್ಲ ಅಲ್ಲಿಯ ದಾಖಲೆಗಳನ್ನು ನನಗೆ ನೀಡಿ, ಎಳ್ಳಷ್ಟೂ ಬೇಸರಿಸದೆ ಚರ್ಚೆಗೆ ಮುಕ್ತ ಅವಕಾಶ ಮಾಡಿಕೊಟ್ಟು, ಆತ್ಮೀಯ ಸಹಕಾರ ನೀಡಿದ ಶ್ರೀ ರಾಮಚಂದ್ರ ಪಾಟೀಲ ಹಾಗೂ ಶ್ರೀ ಶಿವಶಂಕರ ಹಿರೇಮಠ ಅವರಿಗೂ ನನ್ನ ಅನಂತ ವಂದನೆಗಳು ಸಲ್ಲುತ್ತವೆ.

ಪ್ರಸ್ತುತ ಸಂಶೋಧನಕಾರ್ಯದ ಪ್ರಗತಿಯನ್ನು ಆಗಾಗ ವಿಚಾರಿಸುತ್ತ, ಇಂಗ್ಲೀಷ, ಮರಾಠಿ ಮೂಲದ ಕೆಲವು ದಾಖಲೆಗಳನ್ನು ಅರ್ಥೈಸಿಕೊಳ್ಳಲು ನನಗೆ ನೆರವಾದ ಪ್ರೊ. ಎಚ್.ವಿ.ನಾಗೇಶ, ಡಾ. ಎಸ್.ಪಿ.ಪಾಟೀಲ, ಪ್ರೊ. ಎ.ಕೆ. ಆನಂದರಾಯನವರ, ಶ್ರೀಕಾಂತ ಪಾಟೀಲ ಅವರ ಸಾಹಾಯವನ್ನೂ ಸ್ಮರಿಸುತ್ತೇನೆ. ಅದೇ ರೀತಿ ನಿರಂತರ ಉತ್ಸಾಹವನ್ನು ತುಂಬುತ್ತ ನನ್ನ ಕಾರ್ಯದ ಬಗ್ಗೆ ಮೆಚ್ಚುಗೆ ಸೂಚಿಸುವ ಮೂಲಕ ಪ್ರೋತ್ಸಾಹಿಸಿದ ಪ್ರಿನ್ಸಿಪಾಲ ನ. ವಜ್ರಕುಮಾರ, ಡಾ. ಗುರುಲಿಂಗ ಕಾಪಸೆ, ಡಾ. ಬಿ.ವಿ.ಮಲ್ಲಾಪೂರ, ಪ್ರೊ. ಬಿ.ವಿ. ಗುಂಜೆಟ್ಟಿ, ಡಾ. ಪಿ.ಎಸ್. ಹಳಿಯಾಳ, ಡಾ. ಬಿ.ಆರ್. ಹಿರೇಮಠ, ಡಾ. ವೀರಣ್ಣ ರಾಜೂರ, ಡಾ. ಎ. ಮುರಿಗೆಪ್ಪ ಅವರಿಗೆ ಅನಂತ ಧನ್ಯವಾದಗಳು.

ಹಿತೈಷಿಗಳಾದ ಪ್ರೊ. ಅಜಿತಪ್ರಸಾದ, ಡಾ. ಬಿ.ಯಶೋವರ್ಮ, ಪ್ರೊ. ಸುಕನ್ಯಾ ಮಾರುತಿ, ಪ್ರೊ. ಶಿವಾನಂದ ಗಾಳಿ, ಪ್ರೊ. ಎಲ್.ಎಚ್. ಬಜಂತ್ರಿ, ಲಚ್ಚಣ್ಣ ಆಕಳವಾಡಿ, ಪ್ರೊ.ಶಶಿಕಲಾ ಪಾಟೀಲ, ಬಸವರಾಜ ಹೂಗಾರ, ಅನಿಲ ಧಾರವಾಡಕರ, ಪ್ರೊ. ಜಿನದತ್ತ ಹಡಗಲಿ, ಪ್ರೊ. ಎಂ.ಡಿ. ವಕ್ಕುಂದ, ವಿನಯಾ ವಕ್ಕುಂದ, ಸಿದ್ದನಗೌಡ ಪಾಟೀಲ, ಬಸವರಾಜ ಸಿಂಧೆ, ರಾಮಚಂದ್ರ ಕಿತ್ತೂರ, ವಿರೂಪಾಕ್ಷ ನಾಯಕ, ಡಿ.ಬಿ. ಹಿರೇಮಠ, ವ್ಹಿ.ಎಸ್. ಮುಪ್ಪಯ್ಯನವರಮಠ, ಪ್ರೊ. ಕೆ.ಎಸ್. ಸವದಿ, ಬಸವರಾಜ ಕರಕರಡ್ಡಿ - ಮುಂತಾದ ಆತ್ಮೀಯರಿಗೆಲ್ಲ ಋಣಿಯಾಗಿದ್ದೇನೆ.

ಬೆಳಗಾವಿಯ ನಾಗನೂರುಮಠದ ವೀರಶೈವ ಅಧ್ಯಯನ ಅಕಾಡೆಮಿಯ ಮೂಲಕ ಈ ಮಹಾಪ್ರಬಂಧ ಪ್ರಕಟವಾಗುತ್ತಿರುವುದು ನನಗೆ ಧನ್ಯತೆಯನ್ನುಂಟುಮಾಡಿದೆ. ಪಿಎಚ್.ಡಿ. ಪ್ರಬಂಧದಂಥ ಪ್ರೌಢ ಮತ್ತು ಮಹತ್ವದ ಕೃತಿಗಳನ್ನು ಪ್ರಕಟಿಸಲು ವೀರಶೈವಮಠಗಳು ಮುಂದಾಗಿರುವುದು ಕನ್ನಡ ಸಂಸ್ಕೃತಿಯನ್ನು ಕಟ್ಟುವ ಕೆಲಸವೆಂದೇ ಹೇಳಬೇಕು. ಶ್ರೀ ಮಠದ ವೀರಶೈವ ಅಧ್ಯಯನ ಅಕಾಡೆಮಿ ಈ ದಿಸೆಯಲ್ಲಿ ಪ್ರಗತಿಪರ ಹೆಜ್ಜೆಹಾಕುತ್ತಲಿದ್ದು, ನನ್ನ ಈ ಕೃತಿಗೂ ಅಲ್ಲಿ ಅವಕಾಶ ಕಲ್ಪಿಸಿಕೊಟ್ಟ ಪೂಜ್ಯರಾದ ಶ್ರೀ ಶಿವಬಸವ ಮಹಾಸ್ವಾಮಿಗಳವರಿಗೂ, ಶ್ರೀ ಸಿದ್ಧರಾಮ ಸ್ವಾಮಿಗಳವರಿಗೂ ನನ್ನ ಭಕ್ತಿಪೂರ್ವಕ ಪ್ರಣಾಮಗಳು ಸಲ್ಲುತ್ತವೆ.

ಧಾರವಾಡ

ದಿನಾಂಕ: ೧.೧೨.೧೯೯೩

— ಡಾ. ಬಾಳಣ್ಣ ಸೀಗೀಹಳ್ಳಿ

## ಪರಿವಿಡಿ

## ಅಧ್ಯಯನದ ಅಗತ್ಯ – ಆಕರ – ಸ್ವರೂಪ

ವಿಭಿನ್ನ ಸಂಸ್ಕೃತಿಯ ಹಿನ್ನೆಲೆಯುಳ್ಳ ಅನೇಕ ಜನ ರಾಜರು ಕನ್ನಡನಾಡನ್ನು ಆಳಿ, ಈ ನಾಡಿನ ಮೈಮನಗಳಲ್ಲಿ ತಮ್ಮ ಸಂಸ್ಕೃತಿಯ ಕುರುಹುಗಳನ್ನು ಬೆರೆಸಿ ಹೋದದ್ದು ಐತಿಹಾಸಿಕ ಸತ್ಯ. ಇವರಲ್ಲಿ ಪೇಶ್ವೆಯರ ಆಳಿಕೆಯ ಕಾರಣವಾಗಿ ಈ ನಾಡಿನ ದಿಕ್ಕೇ ಬದಲಾಯಿತು. ಅವರ ದಾಳಿ ಕೇವಲ ರಾಜ್ಯವಿಸ್ತರಣೆಗೆ ಮಾತ್ರ ಸೀಮಿತವಾದದ್ದಾಗಿರಲಿಲ್ಲ. ಅದು ಕನ್ನಡಿಗರ ಸಾಂಸ್ಕೃತಿಕ ಬದುಕಿನ ಬೇರುಗಳನ್ನೇ ಅಲ್ಲಾಡಿಸಿಬಿಟ್ಟಿತು. ಅವರ ದಾಳಿಯ ಪರಿಣಾಮ ಎಷ್ಟೊಂದು ಗಂಡಾಂತರಕಾರಿಯಾಗಿ ಪರಿಣಮಿಸಿತೆಂದರೆ, ಅದು ಈ ನಾಡನ್ನು 'ದಕ್ಷಿಣ ಮಹಾರಾಷ್ಟ್ರ'ವಾಗಿ ಪರಿವರ್ತಿಸಿತು. ತಮ್ಮ ಸಂಸ್ಕೃತಿಯನ್ನೇ ಮರೆತು ಕನ್ನಡಿಗರು ತಮಗರಿಯದಂತೆ ಮರಾಠಿ ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳುತ್ತ ಅದರಲ್ಲಿಯೇ ಕರಗಿಹೋಗತೊಡಗಿದ್ದರು. ಕಲೆ, ಸಾಹಿತ್ಯ, ಭಾಷೆ, ಶಿಕ್ಷಣ, ಆಡಳಿತ, ವಾಣಿಜ್ಯ – ಹೀಗೆ ಬದುಕಿನ ಎಲ್ಲ ರಂಗಗಳಿಗೂ ಈ ಅನ್ಯಭಾಷೆ-ಸಂಸ್ಕೃತಿಗಳ ಅಟ್ಟಹಾಸ ವಿಸ್ತರಿಸಿಕೊಂಡು ದೈತ್ಯಾಕಾರವಾಗಿ ಬೆಳೆಯುವಲ್ಲಿ, ಪ್ರಜ್ಞಾವಂತ ಕನ್ನಡಿಗರು ಕಂಗೆಟ್ಟು ಚಡಪಡಿಸುವ ವಾತಾವರಣ ನಿರ್ಮಾಣವಾಯಿತು. ಇಂಥ ಕತ್ತಲೆಯ ಸನ್ನಿವೇಶದಲ್ಲಿ ಕನ್ನಡಿಗರ ಪಾಲಿಗೆ ಬೆಳಕಿನ ಕಿರಣವಾಗಿ ಮೂಡಿಬಂದವರು, ಡೆಪ್ಯೂಟಿ ಚೆನ್ನಬಸಪ್ಪನವರು.

ಧಾರವಾಡದಲ್ಲಿ ಹುಟ್ಟಿ, ಪುಣೆಯಲ್ಲಿ ಎಂಜಿನೀಯರಿಂಗ್ ಓದಿ, ತಿರುಗಿ ಧಾರವಾಡಕ್ಕೆ ಬಂದ ಚೆನ್ನಬಸಪ್ಪನವರು; ಕನ್ನಡನಾಡಿನಲ್ಲಿ ಕನ್ನಡಿಗರಿಗೆ ಬಂದೊದಗಿದ ದುರವಸ್ಥೆಯನ್ನು ಕಂಡು ತಪ್ತರಾದರು. ಮರಾಠಿಗರ ನಾಡು-ನುಡಿ-ಸಂಸ್ಕೃತಿಗಳ ಬಗೆಗಿನ ಸ್ವಾಭಿಮಾನವನ್ನು ಕಣ್ಣಾರೆ ಕಂಡಿದ್ದ ಅವರು, ತಾಯ್ನೆಲದಲ್ಲಿ ಮಾತ್ರ ತನ್ನ ಜನರು ಪರಿಸ್ಥಿತಿಯ ಕೈಗೊಂಬೆಗಳಾಗಿ ತಮ್ಮ ನಾಡು-ನುಡಿ-ಸಂಸ್ಕೃತಿಗಳ ಬಗ್ಗೆ ತಳೆದಿದ್ದ ಉಪೇಕ್ಷೆ ಡೆಪ್ಯೂಟಿಯವರ ಮನಸ್ಸನ್ನು ಸಂಪೂರ್ಣ ಗಾಸಿಗೊಳಿಸಿತು. ಈ ಸಾಂಸ್ಕೃತಿಕ ಪತನವನ್ನು ಏನಾದರೂ ಮಾಡಿ ತಡೆದು, ನಾಡವರಲ್ಲಿ 'ಆತ್ಮಪ್ರಜ್ಞೆ'ಯ ಜಾಗೃತಿ ಮೂಡಿಸಿ, ಚಲನೆ ಕಳೆದುಕೊಂಡಿದ್ದ 'ಪರಂಪರೆ'ಯ ಹರಿಕಾರರಾಗುವುದರ ಅಗತ್ಯವನ್ನು ಅವರು ಕಂಡುಕೊಂಡರು. ಅದೇ ವೇಳೆಗೆ 'ಶಿಕ್ಷಣಕ್ಷೇತ್ರ' ಅವರ ಕೈವಶವಾದದ್ದು; ಚೆನ್ನಬಸಪ್ಪನವರ ಭವಿತವ್ಯವನ್ನಷ್ಟೇ ಅಲ್ಲ, ಅಖಂಡ ಕನ್ನಡನಾಡಿನ ಭವಿತವ್ಯವನ್ನೂ ನಿಶ್ಚಯಿಸಿದಂತಾಯಿತು. ಅವರು ನಾರ್ಮಲ್‌ಸ್ಕೂಲಿನ ಮುಖ್ಯಸ್ಥರಾಗಿ ಕಾರ್ಯಾರಂಭ ಮಾಡಿದ್ದೇ ತಡ, ಅನ್ಯ ಭಾಷೆ-ಸಂಸ್ಕೃತಿಗಳ ವ್ಯಾಮೋಹಕ್ಕೆ ಬಲಿಬಿದ್ದು ನೆಲಕಚ್ಚಿ ಹೋಗಿದ್ದ ಈ ನಾಡಿನ ಸಾಂಸ್ಕೃತಿಕ ಬದುಕಿಗೆ ಮತ್ತೆ ಸಂವೇದನೆಯ ಅನುಭವ ಪ್ರಾಪ್ತವಾಯಿತು. ಈ 'ಅನುಭವ'ವನ್ನು ಸದಾ ಜಾಗೃತವಾಗಿಡಲು, ಅದನ್ನು ರಕ್ಷಿಸಲು, ಸುಪುಷ್ಟವಾಗಿ ಬೆಳೆಸಲು

ಹತ್ತೂ ನಿಟ್ಟಿನಿಂದ ಯೋಚಿಸಿ ಹಲವು ಯೋಜನೆಗಳನ್ನು ಕೈಕೊಂಡು, ಅವು ಫಲಪ್ರದವಾಗುವಂತೆ ಮಾಡಲು ತಮ್ಮ ಬದುಕನ್ನೆಲ್ಲ ತೆಯ್ದು; ಕನ್ನಡಕ್ಕಾಗಿ, ಕನ್ನಡಿಗರಿಗಾಗಿ ಆಮರಣಾಂತ ಹೋರಾಡಿ 'ಕನ್ನಡದ ಹುಲಿ' ಎಂದು ಹೊಗಳಿಸಿಕೊಂಡವರು, ಡೆಪ್ಯೂಟಿ ಚೆನ್ನಬಸಪ್ಪನವರು.

ಇಂಥ ಯುಗಪುರುಷನ ಅಭ್ಯಾಸವೆಂದರೆ, ಆ ಯುಗದ ಅಭ್ಯಾಸವೆನಿಸುತ್ತದೆ. ಹೀಗಿದ್ದೂ ಮುದವೀಡು ಕೃಷ್ಣರಾಯರು ಬರೆದಿದ್ದ 'ಕನ್ನಡದ ಹುಲಿ ಡೆಪ್ಯೂಟಿ ಚೆನ್ನಬಸಪ್ಪನವರು' ಎಂಬಂಥ ಒಂದೆರಡು ಪತ್ರಿಕಾಪುಸ್ತಕೀಯ ಲೇಖನಗಳು, ಹಳಕಟ್ಟಿಯವರು ಬರೆದ 'ಕೈ.ವಾ. ಚನ್ನಬಸಪ್ಪ. ಬಸಲಿಂಗಪ್ಪ. ಧಾರವಾಡ ಇವರ ಚರಿತ್ರೆಯು' (೧೯೩೦), ಸ.ಸ.ಮಾಳವಾಡ ಅವರ 'ಡೆಪ್ಯೂಟಿ ಚೆನ್ನಬಸಪ್ಪ' (೧೯೭೪), ವೆಂಕಟೇಶ ಸಾಂಗಲಿ ಅವರ 'ಡೆಪ್ಯೂಟಿ ಚೆನ್ನಬಸಪ್ಪ' (೧೯೭೫), ಮ.ಗು.ಹಂದ್ರಾಳ ಅವರ (ಗದುಗಿನ ತೋಂಟದಾರ್ಯಮಠ ಪ್ರಕಟಿಸಿದ) ಡೆಪ್ಯೂಟಿ ಚೆನ್ನಬಸಪ್ಪ (೧೯೮೦) ಎಂಬ ಚಿಕ್ಕಹೊತ್ತಿಗೆಗಳು ಮಾತ್ರ ಬೆಳಕು ಕಂಡಿದ್ದವು. ಈ ಮಧ್ಯೆ 'ಹೊಸಗನ್ನಡ ಸಾಹಿತ್ಯದ ಉದಯಕಾಲ(ರಾ.ಯ.ಧಾರವಾಡಕರ ೧೯೭೫), 'ಹೊಸಗನ್ನಡ ಅರುಣೋದಯ' (ಶ್ರೀನಿವಾಸ ಹಾವನೂರ, ೧೯೭೪) ಕೃತಿಗಳು ಚೆನ್ನಬಸಪ್ಪನವರ ಬಗ್ಗೆ ಒಟ್ಟು ಚರಿತ್ರೆಯ ಚೌಕಟ್ಟಿನ ಒಂದು ಅಂಶವಾಗಿ ವಿವೇಚಿಸಿದ್ದವು.

೧೯೮೧, ಡೆಪ್ಯೂಟಿ ಚೆನ್ನಬಸಪ್ಪನವರ ನಿಧನ ಶತಮಾನ ಸಂದರ್ಭ. ಆಗ ಧಾರವಾಡದಲ್ಲಿ 'ಡೆಪ್ಯೂಟಿ ಚೆನ್ನಬಸಪ್ಪನವರ ಶತಮಾನೋತ್ಸವ ಸಮಿತಿ' ಅಸ್ತಿತ್ವಕ್ಕೆ ಬಂದು, ತನ್ನ ಮಿತಿಯಲ್ಲಿ ಪ್ರಚಾರಮಾಡಿ ಅವರ ಹೆಸರಿನಲ್ಲಿ "ಕನ್ನಡದ ದೀಪ" (೧೯೮೨), 'ಕನ್ನಡದ ಶಕಪುರುಷ ಡೆಪ್ಯೂಟಿ ಚೆನ್ನಬಸಪ್ಪನವರು' (೧೯೮೯) ಕೃತಿಗಳನ್ನು ಹೊರಗೆ ತಂದರೂ ಚೆನ್ನಬಸಪ್ಪನವರ ಪರಿಸರದೊಂದಿಗೆ ಪೂರ್ಣಪ್ರಮಾಣದಿಂದ ಬಿಚ್ಚಿಕೊಳ್ಳಲಿಲ್ಲ. ಹೀಗಾಗಿ ಅಂದಿನ ಕಾಲದ ಚಾರಿತ್ರಿಕ ಸ್ವರೂಪವನ್ನು ಚಿತ್ರಿಸುವ, ಮತ್ತು ಅದರ ಮೇಲೆ ಹೊಸಚರಿತ್ರೆಯನ್ನು ಸ್ಥಾಪಿಸಿದ ಚೆನ್ನಬಸಪ್ಪನವರ ಜೀವನಸಾಧನೆಯನ್ನು ಬಿಡಿಸುವ ಈ ಎರಡು ಕೆಲಸಗಳು ಆಹ್ವಾನವಾಗಿಯೇ ಉಳಿದಿದ್ದವು. ಈ ಪಿಎಚ್.ಡಿ ಅಧ್ಯಯನವನ್ನು ಕೈಗೆತ್ತಿಕೊಂಡುದು ಈ ಆಹ್ವಾನವನ್ನು ಪೂರೈಸುವುದಕ್ಕಾಗಿ.

ಚೆನ್ನಬಸಪ್ಪನವರ 'ದ್ರಷ್ಟಾರಗುಣ'ದ ಪರಿಣಾಮ ಎಷ್ಟೊಂದು ದೂರಗಾಮಿ ಯಾಗಿದ್ದಿತೆಂದರೆ ಅವರು ಹುಟ್ಟುಹಾಕಿದ ಜಾಗೃತಿಯು ಇವತ್ತಿನ ವರೆಗೂ ತನ್ನ ವ್ಯಕ್ತಾವ್ಯಕ್ತ ಫಲಗಳನ್ನು ನೀಡುತ್ತಿರುವುದನ್ನು ನಾವು ಈಗ ಸುಲಭವಾಗಿ ಗುರುತಿಸಬಹುದಾಗಿದೆ. ಕರ್ನಾಟಕದ 'ಏಕೀಕರಣ ಚಳುವಳಿ' ಮೊದಲು ಮಾಡಿ, ಕರ್ನಾಟಕ ಕಾಲೇಜು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಲ್ಲಿಯ ಸರಕಾರೀ ಹೆಣ್ಣುಮಕ್ಕಳ ತರಬೇತಿ ಶಾಲೆ, ಉಪಾಧ್ಯಾಯರ ಸರಕಾರೀ ಟ್ರೇನಿಂಗ್ ಕಾಲೇಜು ಹಾಗೂ ಅದರ ಯೋಜನೆಗಳು, ಲಿಂಗಾಯತ ಅಭಿವೃದ್ಧಿ ಸಂಸ್ಥೆ, ಕರ್ನಾಟಕ ವಿದ್ಯಾವರ್ಧಕ ಸಂಘ, ಜೀವನಶಿಕ್ಷಣ ಪತ್ರಿಕೆಯ ಶೈಕ್ಷಣಿಕ ಚಳುವಳಿ, ಕನ್ನಡವೇ ಆಡಳಿತ ಭಾಷೆ ಮತ್ತು ಶಿಕ್ಷಣದ ಮಾಧ್ಯಮವಾಗಬೇಕೆಂಬ ಈಗಿನ ಹೋರಾಟ, 'ಕನ್ನಡ ಅಂಕಿಗಳನ್ನೇ ಬಳಸಿರಿ' ಎಂಬ ಒತ್ತಾಸೆಯ ಘೋಷವಾಕ್ಯ, ಹೊಸಗನ್ನಡದ ಉದಯಕಾಲದಲ್ಲಿ ರಚನೆಯಾದ ವಿಪುಲ ಹಾಗೂ ವೈವಿಧ್ಯಮಯ ಸಾಹಿತ್ಯಸೃಷ್ಟಿ, ಈಗ ಕರ್ನಾಟಕದಾದ್ಯಂತ ಹಬ್ಬಿರುವ ಉಚಿತಪ್ರಸಾದ ನಿಲಯಗಳು, ಕನ್ನಡಸಾಹಿತ್ಯ ಪರಿಷತ್ತು, ಕನ್ನಡದ ಸಂರಕ್ಷಣೆ ಹಾಗೂ ಸಂವರ್ಧನೆಗಾಗಿಯೇ ಹುಟ್ಟಿಕೊಂಡಿರುವ ಸಂಘಟನೆಗಳು, ಸಮಿತಿಗಳು, ವೇದಿಕೆಗಳು, ಎಲ್ಲಕ್ಕೂ ಹೆಚ್ಚಾಗಿ ನಾಡು-ನುಡಿಯ ಬಗೆಗಿನ 'ಅಪೂರ್ವಎಚ್ಚರ', - ಇವೆಲ್ಲವುಗಳ

ಸ್ಫೂರ್ತಿಕೇಂದ್ರ ಇರುವುದು ಚೆನ್ನಬಸಪ್ಪನವರ ಅಂದಿನ ಹೋರಾಟದ ನೆಲೆಯಲ್ಲಿ ಎಂಬುದು ನಮಗೀಗ ಮನವರಿಕೆಯಾಗದಿರದು.

ಇಷ್ಟೊಂದು ವಿಶಾಲ ವ್ಯಕ್ತಿತ್ವವುಳ್ಳ ಚೆನ್ನಬಸಪ್ಪನವರನ್ನು ಶತಮಾನದೀಚೆಗೆ ಸಂಶೋಧನೆಯ ವಸ್ತುವಾಗಿಸಿಕೊಂಡು ಶೋಧಿಸಹೊರಟಾಗ ಮುಖ್ಯವಾಗಿ ಕಾಡುವ ಸಮಸ್ಯೆಯೆಂದರೆ, ಆಕರ ಸಾಮಗ್ರಿಯ ಕೊರತೆ. ಇಂಥ ಅಧ್ಯಯನ ಮೌಖಿಕ-ಲಿಖಿತ ಸಾಮಗ್ರಿ ಮತ್ತು ಅವಶೇಷಗಳನ್ನು ಅಪೇಕ್ಷಿಸುತ್ತದೆ. ಮೌಖಿಕ ಮಾಹಿತಿ ಸಂಗ್ರಹಿಸಬೇಕೆಂದರೆ, ಡೆಪ್ಯೂಟಿಯವರ ಒಡನಾಡಿಗಳಾರೂ ಇಂದು ಬದುಕಿ ಉಳಿದಿಲ್ಲ, ಅಲ್ಲಿಷ್ಟು ಇಲ್ಲಿಷ್ಟು ಸಿಗುವ ಮಾಹಿತಿ ಕೂಡ ಅಧಿಕೃತವೆಂದು ಸಾಧಿಸಲಿಕ್ಕೆ ಸಾಧ್ಯವಾಗುವುದಿಲ್ಲ. ಹೀಗಿದ್ದೂ ಸಾಧ್ಯವಿದ್ದಷ್ಟು ಸಾಮಗ್ರಿಯನ್ನು ಅವರ ಸಂಬಂಧಿಕರೂ ಒಳಗೊಂಡಂತೆ ವಿವಿಧ ಮೂಲಗಳಿಂದ ಸಂಗ್ರಹಿಸಿ, ಸಮಾನ, ವಿರುದ್ಧ ಅಂಶಗಳನ್ನು ಪರಿಶೀಲಿಸಿ, ಪರೀಕ್ಷಿಸಿ, ಸತ್ಯಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಲಿಖಿತ ಸಾಮಗ್ರಿಯನ್ನು, ವ್ಯಕ್ತಿಯೇ ಬರೆದುಕೊಂಡ ಆತ್ಮಚರಿತ್ರೆ, ಇನ್ನೊಬ್ಬರು ಬರೆದ ಜೀವನಚರಿತ್ರೆ ಮತ್ತು ಅವನೇ ಬರೆದ ಗ್ರಂಥ, ಲೇಖನ ಮತ್ತು ಅವನಿಗೆ ಸಂಬಂಧಿಸಿದ ಬಿಡಿ-ಬಿಡಿ ದಾಖಲೆಗಳೆಂದು ವರ್ಗೀಕರಿಸಬಹುದು. ಇವುಗಳಲ್ಲಿ ಆತ್ಮಚರಿತ್ರೆ, ಜೀವನ ಚರಿತ್ರೆಯ ಬರವಣಿಗೆ ಆ ಕಾಲದಲ್ಲಿ ಒಂದು ಸಾಹಿತ್ಯಪ್ರಕಾರವಾಗಿ ಇನ್ನೂ ಅಷ್ಟಾಗಿ ಕಾಣಿಸಿಕೊಂಡಿರಲಿಲ್ಲ. ಹೀಗಾಗಿ ಡೆಪ್ಯೂಟಿಯವರ ಬಗ್ಗೆ ಇಂಥ ಸಾಹಿತ್ಯ ಅವರು ಬದುಕಿದ್ದ ಕಾಲದಲ್ಲಿ ಹುಟ್ಟಲಿಲ್ಲ. ಅವರು ತೀರಿಕೊಂಡ ಸಂದರ್ಭದಲ್ಲಿ ಶಿವಾಜೀ ಯಜ್ಞೇಶ್ವರ ವಾಜಪೇಯಿ ಎಂಬ ಟ್ರೇನಿಂಗ್ ಕಾಲೇಜಿನ ವಿದ್ಯಾರ್ಥಿಯೊಬ್ಬ ಬರೆದಿದ್ದನೆನ್ನಲಾದ 'ಶೋಕಾರ್ತಗೀತ' ಹೆಸರಿನ ಪದ್ಯಗಳ ಕೃತಿಯೂ ನಮಗೆ ಸಿಗಲಿಲ್ಲ. "ಲಿಂಗೈಕ್ಯ ರಾವಬಹದ್ದೂರ ಆರಟಾಳ ರುದ್ರಗೌಡರ ಜೀವನಚರಿತ್ರೆ, ಭಾಗ-೧-೨" ಈ ಕೃತಿಯಲ್ಲಿ ತೀರ ಆನುಷಂಗಿಕವಾಗಿ ಡೆಪ್ಯೂಟಿಯವರ ಉಲ್ಲೇಖ ಬರುತ್ತಿದ್ದರೂ ಇಂಥ ಅನ್ಯದಾಖಲೆಗಳೇ ಸಿಗುವುದಿಲ್ಲ. ಇನ್ನು ಚೆನ್ನಬಸಪ್ಪನವರೇ ಬರೆದ "ನಗದವರನ್ನು ನಗಿಸುವ ಕಥೆ" ಎಂಬ ಗ್ರಂಥ ಲಭ್ಯವಿಲ್ಲ. ಲಭ್ಯವಿರುವ "ಸಮೀಕರಣ ಸಂಗ್ರಹ" "ಕನ್ನಡ ಅಂಕಗಣಿತ"ಗಳು ಅವರ ಗಣಿತಜ್ಞಾನವನ್ನು ಮಾತ್ರ ತಿಳಿಸುತ್ತಿರುವುದು ಸಮಾಧಾನದ ವಿಷಯ. ಇವುಗಳನ್ನು ಬಿಟ್ಟರೆ ಅವರಿಗೆ ಸಂಬಂಧಿಸಿದಂತೆ ನಮಗೆ ಸಿಗುವುವು, ಅವರಿಂದ, ಅನ್ಯರಿಂದ ಹುಟ್ಟಿದ ದಾಖಲೆಗಳು. ಆ ಕಾಲದಲ್ಲಿ ದಾಖಲೆಗಳನ್ನು ಇಡುವ ಅಥವಾ ದಾಖಲೆಪ್ರಜ್ಞೆಯಿಂದ ಸಂರಕ್ಷಿಸುವ ಪದ್ಧತಿ ಇನ್ನೂ ಅಷ್ಟಾಗಿ ಬೆಳೆದಿರಲಿಲ್ಲ. ಇಂಥ ತಿಳುವಳಿಕೆ ನಮ್ಮಲ್ಲಿ ಬೆಳೆದದ್ದು ಪಾಶ್ಚಾತ್ಯರ ಸಾಹಚರ್ಯ ಬಂದಮೇಲೆಯೇ. ಪರಿಸ್ಥಿತಿ ಹೀಗಿರುವಾಗ ಚೆನ್ನಬಸಪ್ಪನವರ ಹಲವಾರು ಮಹತ್ವದ ಸಂಗತಿಗಳು ಇನ್ನೂ ನಿಗೂಢವಾಗಿಯೇ ಉಳಿಯುವಂತಾಗಿದೆ.

ಹೀಗಿದ್ದೂ ಚೆನ್ನಬಸಪ್ಪನವರಿಗೆ ಸಂಬಂಧಿಸಿದ ದಾಖಲೆಗಳನ್ನು ಉಳಿಸಿ, ಬೆಳಕಿಗೆ ತಂದ ಶ್ರೇಯಸ್ಸು ಧಾರವಾಡದ ಉಪಾಧ್ಯಾಯರ ಸರಕಾರಿ ಟ್ರೇನಿಂಗ್ ಕಾಲೇಜಿನ ಶಿಕ್ಷಕ ಬಂಧುಗಳಿಗೂ, ಅಲ್ಲಿಯ 'ಪ್ರತಿಷ್ಠಾನ'ದ ಆಡಳಿತವರ್ಗಕ್ಕೂ ನಿಶ್ಚಯವಾಗಿ ಸಲ್ಲಬೇಕು. ಇವರು ಅಳಿದುಳಿದ ದಾಖಲೆಗಳನ್ನಾದರೂ ಸಂಗ್ರಹಿಸಿ, ಸುರಕ್ಷಿತವಾಗಿ ಉಳಿಸಿಕೊಳ್ಳುವ ಪ್ರಯತ್ನ ಮಾಡದೇ ಬಿಟ್ಟಿದ್ದರೆ, ಕನ್ನಡನಾಡಿನ ಒಂದು ಕಾಲಘಟ್ಟದ ಅತ್ಯಂತ ಅಮೂಲ್ಯವಾದ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಚರಿತ್ರೆಯನ್ನು ಕಳೆದುಕೊಂಡಂತಾಗುತ್ತಿತ್ತು. ಈ ಸಾಮಗ್ರಿಯನ್ನು ಈ ಪ್ರಬಂಧದಲ್ಲಿ ಶಕ್ತಿಮೀರಿ ಬಳಸಿಕೊಳ್ಳಲಾಗಿದೆ. ಇವುಗಳನ್ನು ಬಿಟ್ಟರೆ ಚರಿತ್ರೆ ಕಟ್ಟಲು ಬಳಸಿಕೊಳ್ಳಬೇಕಾದವು ಅವಶೇಷಗಳು. ಚೆನ್ನಬಸಪ್ಪನವರು ಬಳಸುತ್ತಲಿದ್ದ ವಸ್ತುಗಳು ಒಂದೂ

ಸಿಗುವುದಿಲ್ಲ. ಮೂಲಗ್ರಾಮವಾದ ಗೋಕಾಕದಲ್ಲಿ ಅವಶೇಷ ಹೋಗಲಿ, ಇವರ ಹೆಸರೂ ಮಾಯವಾಗಿಬಿಟ್ಟಿದೆ.

ಈಗ ದೊರಕುವ ಕೆಲವು ದಾಖಲೆಗಳನ್ನು ಆಧರಿಸಿ ಕ್ಷೇತ್ರಕಾರ್ಯ ಕೈಕೊಂಡರೆ ಅಲ್ಲಿ ನಂಬಲಾಗದಂತಹ ಪರಿವರ್ತನೆಗಳಾಗಿ ಬಿಟ್ಟಿವೆ. ಒಂದೆರಡು ಉದಾಹರಣೆಗಳನ್ನು ಹೇಳಬೇಕೆಂದರೆ, ವಕೀಲರೊಬ್ಬರು ತಮ್ಮ ಕಕ್ಷಿದಾರರಿಗೆ ಆ ಕಾಲದಲ್ಲಿ ನೀಡಿದ 'ಸೂಚನಾಪತ್ರ'ವೊಂದರಲ್ಲಿ ಉಲ್ಲೇಖಿಸಿದ ಆನುಷಂಗಿಕ ಮಾಹಿತಿಯೊಂದನ್ನು ಆಧರಿಸಿ ಧಾರವಾಡದ ರವಿವಾರ ಪೇಟೆಯ ಅಡಕಿ ಓಣಿಯಲ್ಲಿದ್ದಿತ್ತೆಂದು ಹೇಳಲಾದ ಡೆಪ್ಯೂಟಿ ಚೆನ್ನಬಸಪ್ಪನವರ ಮನೆ ಹುಡಕಹೋದರೆ, ಆ ಮನೆ ಅಡಕಿ ಓಣಿಯಲ್ಲಿದ್ದಿತೆಂದು ಮಾತ್ರ ತಿಳಿದು ಬರುತ್ತದೆ. ಹೀಗೆಯೇ ಚೆನ್ನಬಸಪ್ಪನವರು ಪುಣೆಯಲ್ಲಿ ವ್ಯಾಸಂಗ ಮಾಡಿದ್ದನ್ನು ತಿಳಿದು ಕ್ಷೇತ್ರಕಾರ್ಯಕ್ಕಾಗಿ ಹೋದರೆ, ಅವರು ಓದಿದ ಎಂಜಿನೀಯರಿಂಗ್ ಕಾಲೇಜಿನ ಆಗಿನ ತಾತ್ಪೂರ್ತಿಕ ಸೆಡ್ಡು ಈಗ ನಾಮಾವಶೇಷವಾಗಿ ಕೂಡ ಉಳಿದಿಲ್ಲವೆಂಬುದು ಗಮನಕ್ಕೆ ಬರುತ್ತದೆ. ಹೀಗಿರುವಾಗ ಡೆಪ್ಯೂಟಿಯವರು ಬೆಳಗಾವಿಯಲ್ಲಿ ಸ್ಥಾಪಿಸಿದ್ದ ಪ್ರಸಾದನಿಲಯ, ಮತ್ತು ಅವರ ಸಮಾಧಿಸ್ಥಳ ಇತ್ಯಾದಿಗಳ ಬಗ್ಗೆ ಖಚಿತ ಮಾಹಿತಿ ಈಗ ಸಿಗುವುದು ಕನಸಿನ ಮಾತೇ ಸರಿ. ಈ ಶೂನ್ಯಗಳ ನಡುವೆ ನಿಂತು ಪ್ರಸ್ತುತ ಅಧ್ಯಯನವನ್ನು ಕೈಕೊಳ್ಳಲಾಗಿದೆ.

ವ್ಯಕ್ತಿ, ಸಮಾಜದ ಭಾಗವಾದಾಗ ಸದಸ್ಯನೆನಿಸುತ್ತಾನೆ. ಬಹಳಷ್ಟು ಜನ ಸಮಾಜದ ಭಾಗವಾಗಿಯೇ ಜೀವನ ಕೊನೆಗೊಳಿಸಿದರೆ, ಮಹಾತ್ಮರಾದವರು ಸಮಾಜವನ್ನು ತಮ್ಮ ಧೋರಣೆಗೆ ತಕ್ಕಂತೆ ಬಾಗಿಸಿ, ಅದಕ್ಕೆ ಹೊಸರೂಪ ಕೊಡುತ್ತಾರೆ. ಇಂಥವರ ಅಧ್ಯಯನ ಪ್ರಸಂಗದಲ್ಲಿ ಅವನನ್ನು ರೂಪಿಸಿದ ಸಮಾಜ, ಆ ಸದಸ್ಯ, ಅವನು ರೂಪಿಸಿದ ಹೊಸ ಸಮಾಜ - ಇವು ಮುಖ್ಯವೆನಿಸುತ್ತವೆ. ಪ್ರಸ್ತುತ ಪ್ರಬಂಧ ಈ ದೃಷ್ಟಿಯಿಂದ ಡೆಪ್ಯೂಟಿಯವರ ಅಧ್ಯಯನ ನಡೆಸಿದೆ.

ಉದಾಹರಣೆಗೆ ಮೊದಲನೆಯ ಅಧ್ಯಾಯದಲ್ಲಿ ವಿಜಯನಗರ ಸಾಮ್ರಾಜ್ಯದ ಪತನಾನಂತರ ಕರ್ನಾಟಕದಲ್ಲಿ ತಲೆದೋರಿದ ಹಲವು ರಾಜಕೀಯ ವಿಪ್ಲವಗಳಿಂದಾಗಿ ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ - ಹೀಗೆ ಎಲ್ಲ ರಂಗಗಳಲ್ಲಿಯೂ ವಿಗತಿ ತಲೆದೋರಿ ಇಡೀ ಜನಾಂಗದ ಬದುಕು ಸತ್ವಹೀನವಾಯಿತೆಂಬುದನ್ನು ವಿವರಿಸಿ ಹೇಳುವ ಮೂಲಕ, ಡೆಪ್ಯೂಟಿ ಚೆನ್ನಬಸಪ್ಪನವರು ಸ್ವಯಂಪ್ರೇರಣೆಯಿಂದ ಸಮಾಜದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಪೂರ್ವರಂಗವೊಂದು ಹೇಗೆ ನಿರ್ಮಾಣಗೊಂಡಿತ್ತೆಂಬುದನ್ನು ತೋರಿಸಿಕೊಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಮುಂದಿನ ಅಧ್ಯಾಯಗಳು ಚೆನ್ನಬಸಪ್ಪನವರ ಸಾದ್ಯಂತ ಜೀವನವನ್ನು ಎಲ್ಲ ಮಗ್ಗಲುಗಳಿಂದ ಕಟ್ಟಿಕೊಡುತ್ತ, ಅವರು ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರಾಗಿ, ಮಠಪತ್ರಿಕೆಯ ರೂವಾರಿಗಳಾಗಿ, ಬರೆಹಗಾರರಾಗಿ, ಡೆಪ್ಯೂಟಿ ಇನ್ಸಪೆಕ್ಟರ್ ಆಗಿ ಮಾಡಿದ ಚರಿತಾರ್ಹ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ರಾಂತಿಯ ನಿಟ್ಟುಗಳನ್ನು ಶೋಧಿಸಿಕೊಡುವ ಕೆಲಸಮಾಡಲಾಗಿದೆ. ಮುಂದುವರಿದು ಇಲ್ಲಿಯ ವರೆಗೆ ಚೆನ್ನಬಸಪ್ಪನವರನ್ನು ಕುರಿತು ಪ್ರಕಟವಾಗಿರುವ ಸಾಹಿತ್ಯದ ಕಣ್ಣಲ್ಲಿ ಅವರನ್ನು ಕುರಿತು ಮೌಲ್ಯೀಕರಣ ಹೇಗೆ ನಡೆದಿದೆ ಎಂಬುದನ್ನು ವಿವರಿಸಲಾಗಿದೆ. ಚೆನ್ನಬಸಪ್ಪ ಒಬ್ಬ ಯುಗನಿರ್ಮಾಪಕ. ಹೀಗಾಗಿ ಅವರು ಕನ್ನಡವನ್ನು ಬೆಳೆಸುವುದರೊಂದಿಗೆ ಆ ದಿಸೆಯಲ್ಲಿ ದುಡಿಯುವ ಒಂದು ಬಳಗವನ್ನೇ

ಸಜ್ಜುಗೊಳಿಸಿದರು. ಗಂಗಾಧರ ಮಡಿವಾಳೇಶ್ವರ ತುರಮರಿ, ಭುಜಂಗರಾವ ಹುಯಿಲಗೋಳ, ಶಾಂತವೀರ ರಾಚಿದೇವ ಕಿತ್ತೂರ, ವೆಂಕಟ ರಂಗೋಕಟ್ಟಿ, ಚುರಮರಿ ಶೇಷಗಿರಿರಾಯರು, ರೊದ್ದ ಶ್ರೀನಿವಾಸರಾಯ - ಮೊದಲಾದವರು ಚೆನ್ನಬಸಪ್ಪ ಸೌರಮಂಡಲದ ಪ್ರತ್ಯಕ್ಷ, ಪರೋಕ್ಷ ಗ್ರಹಗಳಾಗಿ ಬೆಳಗಿದುದನ್ನು ತೋರಿಸಿಕೊಡುತ್ತ, ಒಂದು ಸಂಸ್ಕೃತಿ ಕಟ್ಟುವ ಕೆಲಸ ಅಂದು ಹೇಗೆ ನಡೆಯಿತೆಂಬುದನ್ನು ಇಲ್ಲಿ ಗುರುತಿಸಿಕೊಡಲಾಗಿದೆ. ಕೊನೆಯಲ್ಲಿ ಚೆನ್ನಬಸಪ್ಪನವರ ಜೀವನದಲ್ಲಿ ಘಟಿಸಿದ ಪ್ರಾಸಂಗಿಕ ಸನ್ನಿವೇಶಗಳನ್ನು ಕೇಂದ್ರವಾಗಿಟ್ಟುಕೊಂಡು, ಅವರ ವ್ಯಕ್ತಿತ್ವ-ಧೋರಣೆಗಳ ಮೌಲ್ಯೀಕರಣ ಕಾರ್ಯ ಮಾಡಲಾಗಿದೆ. ಈ ಎಲ್ಲ ವಿವರಗಳಿಗೆ ಸಾಕ್ಷಿಯೆನ್ನುವಂತೆ ಅನುಬಂಧದಲ್ಲಿ ಕೆಲವು ಮುಖ್ಯ ವಿಷಯಗಳಿಗೆ ಪೂರಕವಾಗಿರುವ ಮಹತ್ವದ ದಾಖಲೆಗಳನ್ನು ಜೋಡಿಸಲಾಗಿದೆ. ಈ ಎಲ್ಲ ಆಶಯಗಳ ಆಕೃತಿ ಪ್ರಸ್ತುತ ಪ್ರಬಂಧ.



## ಸಮಕಾಲೀನ ಪರಿಸರ : ಒಂದು ನೋಟ

"ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್.." ಎಂಬ ಮಾತು ಕವಿರಾಜಮಾರ್ಗ ಒದಗಿಸುವ ಒಂದು ಅಮೂಲ್ಯ ಚಾರಿತ್ರಿಕ ದಾಖಲೆ. ಕೇವಲ ಭೌಗೋಲಿಕವಾಗಿ ಮಾತ್ರ ಕನ್ನಡನಾಡು ದೊಡ್ಡದಾಗಿರಲಿಲ್ಲ; ರಾಜಕೀಯವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ, ಮತ್ತು ಸಾಂಸ್ಕೃತಿಕವಾಗಿಯೂ ಇದಕ್ಕೊಂದು ಉಜ್ವಲವಾದ ಭವ್ಯಪರಂಪರೆ ಇದ್ದುದಕ್ಕೆ ಪ್ರಾಚೀನ ಉಲ್ಲೇಖಗಳಿವೆ. ಇಂಥ ಸಮಗ್ರ, ಸುಂದರ ಕರ್ನಾಟಕದ ಭೌಗೋಳಿಕ ಹಾಗೂ ಸಾಂಸ್ಕತಿಕ ಘನತೆಯನ್ನು ಇಡಿಯಾಗಿಯೇ ಉಳಿಸಿಕೊಳ್ಳಲು ಗಂಗರಾದಿಯಾಗಿ ಮೈಸೂರು ಒಡೆಯರ ವರೆಗೆ ಎಲ್ಲ ಅರಸರೂ ಹೋರಾಟ ನಡೆಸುತ್ತ ಬಂದುದು ಕನ್ನಡಿಗರ ಪಾಲಿಗೆ ಚಿರಸ್ಮರಣೀಯ ಗತವೈಭವವೆನಿಸಿದೆ.

ಸುಮಾರು ಎರಡುಸಾವಿರ ವರ್ಷಗಳಿಗೂ ಮಿಗಿಲಾದ ರಾಜಕೀಯ ಚರಿತ್ರೆಯಲ್ಲಿ ಈ ನಾಡು ಕಲ್ಯಾಣಚಾಲುಕ್ಯರ ಬಳಿಕ ದೇವಗಿರಿಯಾದವರು, ದೋರಸಮುದ್ರಯಾದವರು (ಹೊಸ್ಸಳರು) ಎಂದು ಎರಡು ಹೋಳಾಯಿತು. ಬಳಿಕ ಈ ಹೋಳು ಬಹಮನೀಯ ಮುಸಲ್ಮಾನ ಅರಸರು, ವಿಜಯನಗರದ ಹಿಂದೂ ಅರಸರು ಎಂಬ ಬಣ್ಣ ಪಡೆದು ಅನ್ಯಸಂಸ್ಕೃತಿಯ ಗಾಳಿಯಿಂದಾಗಿ ಕರ್ನಾಟಕ ಸಂಸ್ಕೃತಿ ಪತನಮುಖಿಯಾಗುತ್ತ ನಡೆಯಿತು. ವಿಜಯನಗರ ಸಾಮ್ರಾಜ್ಯ ಎಷ್ಟೇ ಪ್ರಯತ್ನಿಸಿದರೂ ಈ ಪತನವೇಗ ಮುಂದುವರಿಯುತ್ತಲೇ ಸಾಗಿತು.

ತಾಳೀಕೋಟೆಯ ನಿರ್ಣಾಯಕಯುದ್ಧ (ಕ್ರಿ.ಶ.೧೫೬೫) ದಲ್ಲಿ ವಿಜಯನಗರ ಸೋಲುವುದೇ ತಡ ಹೇಗೋ ಒಂದಾಗಿದ್ದ ಕರ್ನಾಟಕದ ಅರ್ಧಭಾಗ ಪಾಳೆ-ಪಟ್ಟುಗಳಾಗಿ ಒಡೆದು ಹೋಯಿತು. ಈ ತುಂಡುರಾಜ್ಯಗಳು ಅಂತಃಕಲಹದಲ್ಲಿ ನಿರತವಾದ ಸಂದರ್ಭದಲ್ಲಿ ನಮ್ಮ ರಾಜ್ಯವನ್ನು ಪರಿಣಾಮಕಾರಿಯಾಗಿ ಪ್ರವೇಶಿಸಿದ್ದು ಮರಾಠಾ ರಾಜ್ಯಶಕ್ತಿ. ಈಗ ಪರಕೀಯ ಮುಸಲ್ಮಾನರೊಂದಿಗೆ ಸ್ವಕೀಯ ಮರಾಠಾ-ಸಂಸ್ಕೃತಿ ಆಳವಾಗಿ ವ್ಯಾಪಿಸಿತು. ಮುಸಲ್ಮಾನರು ಒತ್ತಾಯದಿಂದ ತಮ್ಮ ಸಂಸ್ಕೃತಿಯನ್ನು ಹೇರಿದರೆ, ಕನ್ನಡಿಗರು ತಾವಾಗಿಯೇ ಮರಾಠಾಸಂಸ್ಕೃತಿಯನ್ನು ಸ್ವೀಕರಿಸುತ್ತ ನಡೆದರು. ಹಾಗೆ ಸ್ವೀಕರಿಸುವುದು ಘನತೆಯೆಂಬ ಭ್ರಮೆಯಲ್ಲಿ ಮುನ್ನಡೆದರು.

ಈಗ ದಕ್ಷಿಣಕರ್ನಾಟಕದಲ್ಲಿ ಹೈದರ-ಟೀಪು ಕಾರಣವಾಗಿ ಎಷ್ಟೋ ದೌರ್ಜನ್ಯ ನಡೆದರೂ, ಮೈಸೂರು ಒಡೆಯರೆಂಬ ಹಿಂದೂರಾಜ್ಯ ಕಾರಣವಾಗಿ ಕನ್ನಡ ತಕ್ಕಮಟ್ಟಿಗೆ ತಲೆಯೆತ್ತಿ ನಡೆದಿದ್ದಿತು. ಮರಾಠಾ, ಮುಸಲ್ಮಾನರ ಆಡುಂಬೊಲವಾಗಿದ್ದ ಉತ್ತರಕರ್ನಾಟಕಕ್ಕೆ

ಅಂಥ ಭಾಗ್ಯವಿರಲಿಲ್ಲ. ಅಂತೂ ಪೇಶ್ವೆಯವರ ಕಾಲದಲ್ಲಿ ಕನ್ನಡಿಗರು ಹತ್ತೊಂಬತ್ತು ವಿಭಾಗಗಳಲ್ಲಿ ಹರಿದು ಹಂಚಿಹೋಗಿ ಇಲ್ಲಿ ದಕ್ಷಿಣ ಮಹಾರಾಷ್ಟ್ರ ನಿರ್ಮಾಣಗೊಂಡು ಕನ್ನಡಿಗರ ದುರ್ದೆಶೆಯ ಕಾಲ ಆರಂಭಗೊಂಡಿತೆಂಬುದು ಕಹಿಸತ್ಯ. ಹೀಗೆ ಕನ್ನಡನಾಡು ಛಿದ್ರೀಕರಣಗೊಂಡ ಸಂದರ್ಭದಲ್ಲಿ ಪೋರ್ತುಗೀಜ, ಡಚ್ಚ, ಇಂಗ್ಲೀಷರು ನುಗ್ಗಿದರು. ಇವರಲ್ಲಿ ಸ್ಪರ್ಧೆ ನಡೆದು, ಕರ್ನಾಟಕ ಕ್ರಮೇಣ ಇಂಗ್ಲೀಷರ ಕೈವಶವಾಗಿ ಮುಸಲ್ಮಾನ, ಮರಾಠಾಗಳೊಂದಿಗೆ ಆಂಗ್ಲಸಂಸ್ಕೃತಿಯೂ ಇಲ್ಲಿ ಸೇರಿಕೊಳ್ಳತೊಡಗಿತು.

"ಸನ್ ೧೮೧೮ ರ ಖಡಕಿ ಯುದ್ಧದಲ್ಲಿ ಪೇಶ್ವೆಯರು ಸೋತನಂತರ ಉತ್ತರ ಕರ್ನಾಟಕವು ಬ್ರಿಟಿಷರ ವಶವಾಯಿತೇನೋನಿಜ, ಆದರೆ ಇದನ್ನು ಆಗಲೇ ಪಟವರ್ಧನ ಮನೆತನದವರು, ಭಾವೆ ಮನೆತನದವರು, ಘೋರ್ಪಡೆ ಮನೆತನದವರು, ಕಾಯಿಪಲ್ಲೆ ಹಂಚಿಕೊಂಡ ಹಾಗೆ ಹಂಚಿಕೊಂಡರು. ಅದು ಎಷ್ಟರ ಮಟ್ಟಿಗೆಂದರೆ, ಕೇವಲ ಹನ್ನೆರಡು ಮೈಲು ಅಂತರದಲ್ಲಿದ್ದ ಲಕ್ಷ್ಮೇಶ್ವರವು ಮಿರಜಸಂಸ್ಥಾನಕ್ಕೆ ಸೇರಿದರೆ, ಶಿರಹಟ್ಟಿ ಸಾಂಗ್ಲಿಸಂಸ್ಥಾನಕ್ಕೆ ಒಳಪಟ್ಟಿತ್ತು. ಇದೇ ರೀತಿ ಗುಡಗೇರಿ, ಕುಂದಗೋಳಗಳ ನಡುವಿನ ಅಂತರ ಕೇವಲ ಎಂಟು ಮೈಲು. ಆದರೆ ಗುಡಗೇರಿ ಮಿರಜಸಂಸ್ಥಾನಕ್ಕೆ ಸೇರಿದರೆ, ಕುಂದಗೋಳ ಜಮಖಂಡಿಸಂಸ್ಥಾನಕ್ಕೆ ಒಳಪಟ್ಟಿತ್ತು. ಜಮಖಂಡಿ ಪಟವರ್ಧನ ಮನೆತನಕ್ಕೆ ಸೇರಿದರೆ, ಹತ್ತಿರದ ಮುಧೋಳ ಘೋರ್ಪಡೆ ಮನೆತನಕ್ಕೆ ಸೇರಿತು. ಅಷ್ಟೇ ಏಕೆ ಹುಬ್ಬಳ್ಳಿಯ ಗಣೇಶ ಪೇಟೆಯ ಭಾಗ ಸಾಂಗ್ಲಿಸಂಸ್ಥಾನಕ್ಕೆ ಸೇರಿತ್ತೆಂದು ಹೇಳುತ್ತಾರೆ."[೧]

ಉತ್ತರ ಕರ್ನಾಟಕದಲ್ಲಿ ಮರಾಠರು ಇನ್ನೂ ಭದ್ರವಾಗಿ ನೆಲೆಯೂರುತ್ತಿರುವಾಗಲೆ ಇಲ್ಲಿ ಹೈದರಾಬಾದ ನಿಜಾಮನು ಆಗಾಗ ದಂಡೆತ್ತಿ ಬಂದು, ಕನ್ನಡದ ನೆಲವನ್ನು, ಜೊತೆಗೆ ಕನ್ನಡತನವನ್ನು ಕಸಿಯುತ್ತಿದ್ದನು. ಇದರಿಂದ ೧೯ನೇ ಶತಮಾನದ ಆದಿಭಾಗದಲ್ಲಿ ಉತ್ತರಕ್ಕೆ ಮರಾಠರ ಆಳಿಕೆ, ಈಶಾನ್ಯದಲ್ಲಿ ನಿಜಾಮನ ಆಳಿಕೆ, ದಕ್ಷಿಣದಲ್ಲಿ ಬ್ರಿಟಿಶರ ಪ್ರಭಾವ ಇದ್ದದ್ದು ಸ್ಪಷ್ಟವಾಗಿ ಗೋಚರಿಸುತ್ತದೆ. ಇನ್ನೂ ಗಮನಾರ್ಹ ಸಂಗತಿ ಎಂದರೆ, ಮದರಾಸು ಪ್ರಾಂತದಲ್ಲಿ ತಮಿಳು, ತೆಲಗು, ಹೈದರಾಬಾದ ಪ್ರಾಂತದಲ್ಲಿ ಉರ್ದು, ಮುಂಬಯಿ ಪ್ರಾಂತದ ಅಧೀನಕ್ಕೊಳಪಟ್ಟ ಸಂಸ್ಥಾನಗಳಲ್ಲಿ ಮರಾಠಿ, ಹೀಗೆ ಹಲವು ಭಾಷೆ ಸಂಸ್ಕೃತಿಗಳ ಅಡಿಯಲ್ಲಿ ಸಿಕ್ಕು ಕನ್ನಡಭಾಷೆ–ಸಂಸ್ಕೃತಿಗಳು ಕಣ್ಮರೆಯಾಗತೊಡಗಿದವು. ಈ ರೀತಿ ಹಲವರ ರಾಜಕೀಯ ಮಹತ್ವಾಕಾಂಕ್ಷೆ ಮತ್ತು ವಿಪ್ಲವಗಳಿಂದಾಗಿ ಕನ್ನಡಿಗರ ಪಾಲಿಗೆ ತುಂಬಾ ಗಂಡಾಂತರಕಾರಿಯಾದ ವಾತಾವರಣವೊಂದು ನಿರ್ಮಾಣವಾಯಿತು. ಉತ್ತರ ಕರ್ನಾಟಕದ ಪಾಲಿಗಂತೂ ಇದೊಂದು ಶಾಪವಾಗಿ ಪರಿಣಮಿಸಿತು. ರಾಜಕೀಯ ಒತ್ತಡದಿಂದಾಗಿ ದೇಶದ ಇನ್ನಾವುದೇ ಭಾಗದ ಜನರು ತಮ್ಮ ತಾಯ್ನೆಲದಲ್ಲಿಯೇ ಇಷ್ಟೊಂದು ಪರದೇಶಿಗಳಂತೆ ಬದುಕುವ ಸ್ಥಿತಿ ಉಂಟಾಗಿರಲಿಲ್ಲ.

ಆಡಳಿತವರ್ಗಗಳು ಯಾವಾಗಲೂ ಆಡಳಿತದ ಅನುಕೂಲಕ್ಕಾಗಿ ತಾವು ಆಳುತ್ತಿರುವ ಪ್ರದೇಶದ ಜನರ ಮೇಲೆ ತಮ್ಮ ಭಾಷೆಯನ್ನು ನುಗ್ಗಿಸಿಬಿಡುತ್ತವೆ. ಇದು ನಿಧಾನ ಪರಿಣಾಮ ಬೀರುವ ವಿಷಪ್ರಾಶನದಂತೆ. ಯಾವುದೇ ಒಂದು ಭಾಷೆಯನ್ನಾಡುವ ಜನಾಂಗವನ್ನು ಸಂಪೂರ್ಣವಾಗಿ ನಿರ್ನಾಮ ಮಾಡಬೇಕೆಂದಿದ್ದರೆ ಆಧುನಿಕ ಕಾಲದಲ್ಲಿ ಸೈನ್ಯದ ಅವಶ್ಯಕತೆಯಿಲ್ಲ. ಆ ಜನಾಂಗದ ಮೇಲೆ ಇನ್ನೊಂದು ಭಾಷೆಯನ್ನು ಹೇರಿಬಿಟ್ಟರೆ ಸಾಕು, ಅದು ಸದ್ದಿಲ್ಲದೆ ಕ್ರಮೇಣ ಸ್ಥಳೀಯ ಭಾಷೆಯನ್ನು ನಾಶಮಾಡಿ ಬಿಡುತ್ತದೆ. ಯಾಕೆಂದರೆ ಒಂದು ಜನಾಂಗಕ್ಕೂ

---

೧. ಧಾರವಾಡಕರ. ರಾ.ಯ.: ಹೊಸಗನ್ನಡ ಸಾಹಿತ್ಯದ ಉದಯಕಾಲ ಪುಟ.೭.

ಅವರು ವಾಸಿಸುವ ನೆಲಕ್ಕೂ ಮತ್ತು ಅವರಾಡುವ ಭಾಷೆಗೂ ತೀರ ನಿಕಟವಾದ ಭಾವನಾತ್ಮಕ ನೇಯ್ಗೆ ಇರುತ್ತದೆ. "ಕನ್ನಡ ನಾಡು ಅಥವಾ ಕರ್ನಾಟಕ ಎಂದಾಗ ಕನ್ನಡದ ನುಡಿ, ಕನ್ನಡದ ನೆಲ, ಕನ್ನಡದ ಜನ-ಈ ಮೂರು ಕಲ್ಪನೆಗಳು ಬೋಧೆಯಾಗುತ್ತವೆ".[೨] ಅಷ್ಟೇ ಅಲ್ಲ "ಒಂದು ಭಾಷೆಯ ಬಳಕೆ ತಪ್ಪುವುದೆಂದರೆ ಆ ಭಾಷೆ ಸಾಯುವುದೆಂದೇ ಅರ್ಥ"[೩] ಕನ್ನಡ ನಾಡಿಗೆ ಇದೇ ದುರ್ಗತಿ ಪ್ರಾಪ್ತವಾಯಿತು. ಈ ನೆಲವನ್ನು ಆಳಲು ಬಂದ ಮುಸಲ್ಮಾನ, ಪೇಶ್ವೆ ಮತ್ತು ಆಂಗ್ಲ ಅರಸರು ತಮ್ಮ ತಮ್ಮ ಆಡಳಿತದ ಅನುಕೂಲಕ್ಕಾಗಿ ಅವರವರ ಭಾಷಾ ಸಂಸ್ಕೃತಿಗಳನ್ನು ಹೇರಿ ಕನ್ನಡಿಗರನ್ನು ನಿರ್ವೀರ್ಯಗೊಳಿಸಿದ್ದು ಚಾರಿತ್ರಿಕ ಸತ್ಯವಾಗಿದೆ.

೧೭೫೭ರ ಪ್ಲಾಸೀ ಕದನದಲ್ಲಿ ಬಂಗಾಳದ ನವಾಬ ಸಿರಾಜುದ್ದೌಲನನ್ನು ಸೋಲಿಸುವ ಮುಖಾಂತರ ಭಾರತದಲ್ಲಿ ಬ್ರಿಟೀಶರಿಗೆ ಹೆಚ್ಚು ಗಟ್ಟಿಯಾಗಿ ನೆಲೆಯೂರಲು ಸಾಧ್ಯವಾಯಿತು. ಹತ್ತೊಂಬತ್ತನೇ ಶತಮಾನದ ಕೊನೆಯ ವೇಳೆಗೆ ಇಡೀ ಭಾರತವು ಅವರ ಒಂದು ಪಕ್ಕಾ ವಸಾಹತುವಾಗಿ ಪರಿವರ್ತಿತವಾಯಿತು. ಮುಂಬಯಿ ಭಾರತದ ಹೆಬ್ಬಾಗಿಲಾದ್ದರಿಂದ ಬ್ರಿಟೀಶರು ಮೊದಲು ಅಲ್ಲಿಯೇ ತಳವೂರಿದರು. ಸಮೀಪದಲ್ಲಿರುವ ಪುಣೆ ಆಡಳಿತದ ಕೇಂದ್ರ ಸ್ಥಳವಾಯಿತು. ಇದರ ಪರಿಣಾಮವಾಗಿ ಅಲ್ಲಿಂದ ಬಹುದೂರದಲ್ಲಿದ್ದ ಉತ್ತರ ಕರ್ನಾಟಕದ ಜನ ಎಲ್ಲ ಸೌಲಭ್ಯಗಳಿಂದಲೂ ವಂಚಿತರಾಗಿ ಸರಕಾರೀ ಯಂತ್ರದ ಅನಾದರಕ್ಕೆ ಒಳಗಾದರು. ಮೊದಲೇ ಮರಾಠಿ ಭಾಷೆ ಸಂಸ್ಕೃತಿಗಳಿಂದ ಉಸಿರುಕಟ್ಟಿದಂತಾಗಿದ್ದ ಕನ್ನಡದ ಜನ ಇನ್ನಷ್ಟು ವಿವಂಚನೆಗೊಳಗಾಗುವಂತಾಯಿತು. ಬ್ರಿಟೀಶ ಸರಕಾರದ ಕೇಂದ್ರಸ್ಥಳವಾದ ಪುಣೆ ಸಹಜವಾಗಿಯೇ ವಿದ್ಯಾ ಕೇಂದ್ರವಾಗಿ ಬೆಳೆಯಿತು. ಅಂದಮೇಲೆ ಹೆಚ್ಚಿನ ವಿದ್ಯೆಯನ್ನು ಸಂಪಾದಿಸಬೇಕೆನ್ನುವ ಕನ್ನಡಿಗರು ವಾಹನಸೌಕರ್ಯಗಳಿಲ್ಲದಿದ್ದ ಆ ಕಾಲದಲ್ಲಿ ಕಾಲ್ನಡಿಗೆಯಿಂದ ಅಲ್ಲಿಗೆ ಹೋಗಿ ಪ್ರಯೋಜನ ಪಡೆಯುವುದು ಅನಿವಾರ್ಯವಾಗಿ ಬಿಟ್ಟಿತು. ಹೀಗೆ ವಿದ್ಯೆಕಲಿಯಲು ಹೋದ ಕನ್ನಡಿಗರೂ ಸಹ ತಾವು ಕನ್ನಡಿಗರೆಂಬುದನ್ನೇ ಮರೆತು ಮೊದಲಿಗಿಂತಲೂ ಉತ್ತೇಜಿತರಾಗಿ ಮರಾಠಿ ಭಾಷೆ-ಸಂಸ್ಕೃತಿಗಳನ್ನು ಅಳವಡಿಸಿಕೊಂಡು ಅದರಲ್ಲೆ ಕರಗಿ ಹೋಗುತ್ತಿದ್ದರು. ಇಂಥ ಸ್ಥಿತಿಯ ಚಿತ್ರವೊಂದು ಇಲ್ಲಿದೆ.:

"ಶ್ರೀಮಂತರಾಗಿದ್ದರೆ ಮರಾಠಿ ಮುಲಿಗಳನ್ನು ಕಟ್ಟಿಕೊಂಡೇ ಮರಳುತ್ತಿದ್ದರು. ಮಾತೃಭಾಷೆ, ಪಿತೃಭಾಷೆಗಳ ಸ್ಥಾನದಲ್ಲಿ ಭಾರ್ಯಾ (ಹೆಂಡಂದಿರ) ಭಾಷೆ ರಾರಾಜಿಸುತ್ತಿತ್ತು. ಹೀಗಾಗಿ ಆರೇ (ಮರಾಠಿ) ಅರಸಾಗಿ, ಕನ್ನಡ ಕೊರಸಾಯಿತು. ಇಂಥ ಅನ್ಯ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಹೊಡೆತಕ್ಕೆ ಸಿಕ್ಕು, ಸ್ಥಿತಿ ತೀರ ದಾರುಣವಾಯಿತು. ಕುರಿ ಹಿಂಡಿನಲ್ಲಿದ್ದ ಹುಲಿಮರಿಗೆ ಸ್ವಯಂ ಜ್ಞಾನವುಂಟಾಗಲು ವೇಳೆ ಹಿಡಿಯುವಂತೆ ಕನ್ನಡಿಗರಿಗೆ ತಮ್ಮ ಭಾಷೆ ಕನ್ನಡವೆಂದು ತಿಳಿಯಲು ಹತ್ತಾರು ವರ್ಷಗಳೇ ಹತ್ತಿದವು".[೪] ಈ ಅವಸ್ಥೆಯನ್ನು ಕಂಡ ಮತ್ತು ಪೇಶ್ವೆಯ ಅಧಿಕಾರದ ಕೊನೆಯ ಉಳಿಕೆಗಳನ್ನು ನಿರ್ನಾಮಮಾಡಿದ ಸರ್ ಥಾಮಸ್ ಮನ್ರೋ ೧೮೨೮ರಲ್ಲಿ ಸಲಹೆ ಮಾಡಿದ್ದೇನೆಂದರೆ; ಕನ್ನಡ ಭಾಷಾ ಪ್ರದೇಶಗಳನ್ನೆಲ್ಲಾ ಒಂದೇ ಆಡಳಿತಕ್ಕೆ ತರಬೇಕು ಮತ್ತು ಈ ಪ್ರದೇಶದ ಜನತೆಯ ಆಡಳಿತ, ಶಿಕ್ಷಣ, ಸಾಮಾಜಿಕ ಸಾಮರಸ್ಯಗಳಿಗಾಗಿ ಅವುಗಳನ್ನು ಮುಂಬಯಿ ಆಧಿಪತ್ಯದಿಂದ ಬೇರ್ಪಡಿಸಿ, ಮದರಾಸು ಆಧಿಪತ್ಯಕ್ಕೆ ಸೇರಿಸಬೇಕೆಂದು. ಒಂದು ವೇಳೆ ಈ ಸಲಹೆಯನ್ನು ಈಸ್ಟ ಇಂಡಿಯಾ ಕಂಪನಿ ಮಾನ್ಯಮಾಡಿದ್ದರೆ

---

೨. ನಾಯಕ. ಹಾ.ಮಾ. (ಪ್ರ. ಸಂ), - ಕನ್ನಡ ವಿಶ್ವಕೋಶ (ಸಂಪುಟ-೪) ಪುಟ.೧೮೩.

೩. ನಾಯಕ. ಹಾ.ಮಾ. : ಕನ್ನಡವನ್ನು ಕಟ್ಟುವ ಕೆಲಸ (ಬೆನ್ನುಡಿ)

೪. ಧಾರವಾಡಕರ. ರಾ.ಯ.: ಹೊಸಗನ್ನಡ ಸಾಹಿತ್ಯದ ಉದಯಕಾಲ ಪುಟ.೭.

ಕನ್ನಡನಾಡು ಸುಮಾರು ೧೩೦ ವರ್ಷಗಳ ಮರಾಠಿ ಹಿಡಿತದಿಂದ ಅಂದೇ ಮುಕ್ತವಾಗಬಹುದಿತ್ತು. ೧೮೬೦ರ ಸುಮಾರಿಗೆ ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಪ್ರಿನ್ಸಿಪಾಲರೆಂದು ನೇಮಕಹೊಂದಿದ ರಸೆಲ್ಲರು; ೧೮೬೨ರಲ್ಲಿ ಮಧ್ಯಭಾಗದ, ಅನಂತರ ಉತ್ತರ ಭಾಗದ ಎಜ್ಯುಕೇಶನಲ್ ಇನ್ಸಪೆಕ್ಟರಾಗಿ ಕೆಲಸಮಾಡಿದರು. ಮುಂದೆ ೧೮೬೫ರಲ್ಲಿ (ಮೇ) ದಕ್ಷಿಣ ಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಅವರು ತಮ್ಮೆರಡು ವರದಿಗಳಲ್ಲಿ ಅಂದಿನ ಕನ್ನಡ ಸ್ಥಿತಿಯ ಮೇಲೆ ಹೀಗೆ ಬೆಳಕು ಚೆಲ್ಲಿದ್ದಾರೆ: "ಗುಜರಾತಿ ಮತ್ತು ಮರಾಠಿ ಭಾಷೆಗಳು ಅವರವರ ಪ್ರಾಂತಗಳಲ್ಲಿ ಬೋಧಿಸಲ್ಪಡುತ್ತಿವೆ, ಹದಗೊಳ್ಳುತ್ತಿವೆ. ಈ ಪರಿಸ್ಥಿತಿಯಿಂದ ಕನ್ನಡ ಭಾಷೆ ವಂಚಿತವಾಗಿದೆ. ಬೇರೆ ಬೇರೆ ವಿಭಾಗಗಳಲ್ಲಿ ಶಿಕ್ಷಣದ ಸಾಧನಗಳು ವಿಪುಲವಾಗಿರುವಾಗ ಕನ್ನಡ ಪುಸ್ತಕಗಳು (ಮತ್ತು ಉಪಾಧ್ಯಾಯರುಗಳು) ಇನ್ನೂ ತಯಾರಿ ಹಂತದಲ್ಲಿವೆ. ಬಹುಜನ ಉಪಾಧ್ಯಾಯರ ಭಾಷೆ ಕನ್ನಡವಾಗಿದೆ. ಮರಾಠಿದೇಶ ಭಾಷಿಕರು ಸಾಮಾನ್ಯವಾಗಿ ಕನ್ನಡ ಮಾತಾಡಬಲ್ಲವರೇ ಇದ್ದಾರೆ. ದುರದೃಷ್ಟದ ಮಾತೆಂದರೆ ಸ್ಥಳೀಯ ಕನ್ನಡಿಗರಾದ ಕೇವಲ ಕೆಲವರು ಮಾತ್ರ ಅವರು ತಮ್ಮ ಮಾತೃಭಾಷೆಯನ್ನು ಪಾಂಡಿತ್ಯಪೂರ್ಣವಾಗಿ ಕಲಿಸಬಲ್ಲವರಾಗಿದ್ದಾರೆ. ಮಿಕ್ಕವರೆಲ್ಲ ಕನ್ನಡ ಮಾತೃಭಾಷಿಕರಾಗಿದ್ದರೂ ಉಕ್ತ ಲೇಖನವನ್ನು ಲಕ್ಷಣವಾಗಿ ಬರೆಯಲು ಕೂಡ ಅಶಕ್ತರಾಗಿದ್ದಾರೆ. ಅವರಲ್ಲಿ ಅನೇಕರು ಶಾಲೆಯ ಮಟ್ಟಿಗಾದರೂ ಕನ್ನಡಕ್ಕಿಂತ ಚೆನ್ನಾಗಿ ಮರಾಠಿಯನ್ನೇ ತಿಳಿದವರು. ಈ ಎರಡು ಭಾಷೆಗಳ ಗೊಂದಲ ಮತ್ತು ಇವೆರೆಡು ಭಾಷೆಗಳಲ್ಲಿ ಯಾವುದರಲ್ಲೂ ಪ್ರಾವಿಣ್ಯವಿಲ್ಲದಿರುವುದು ದಕ್ಷಿಣವಿಭಾಗದ ಪಂಡಿತರನ್ನು ಉಳಿದೆರೆಡು ವಿಭಾಗದವರಿಗಿಂತ ಸಾಕಷ್ಟು ಕಾಲ ಹಿಂದುಳಿಯುವಂತೆ ಮಾಡಿದೆ ಎಂಬ ಭಯ ನನ್ನದು. ಈ ವಿಭಾಗದ ಡೆಪ್ಯೂಟಿ ಇನ್ಸಪೆಕ್ಟರುಗಳು ಮತ್ತು ಇಂಗ್ಲೀಷ ಉಪಾಧ್ಯಯರುಗಳಲ್ಲಿ ಯಾರೂ ಕ್ಯಾನರೀಸ್ (ಕನ್ನಡ) ಭಾಷಿಕರಿಲ್ಲ. ಹಾಗೂ ಜಿಲ್ಲೆಗಳ ದೇಶಿಯ ಶಾಲಾ ಉಪಾಧ್ಯಾಯರುಗಳಲ್ಲಿ ಕೂಡ ಕೆಲವೇ ಕೆಲವರು ಕನ್ನಡ ಭಾಷಿಕರಾಗಿದ್ದಾರೆ. ಹೆಚ್ಚಾಗಿ ಮರಾಠಿ ಪುಸ್ತಕಗಳು ಹಾಗೂ ಉಪಾಧ್ಯಾಯರುಗಳಿಂದಲೆ ತುಂಬಿದ ಈ ಶಾಲೆಗಳ ವಿಷಯವಾಗಿ ಕನ್ನಡದ ಜನರು ಉದಾಸೀನ ಭಾವ ಹೊಂದಿದ್ದರೆ ಆ ಬಗ್ಗೆ ಆಶ್ಚರ್ಯಪಡಬೇಕಾಗಿಲ್ಲ."[೫] ಇಂಥ ಇನ್ನೂ ಹಲವು ಹತ್ತು ಅಭಿಪ್ರಾಯಗಳು ಕನ್ನಡಿಗರು ಪರಿಸ್ಥಿತಿಯ ಬಿಕ್ಕಟ್ಟಿನಿಂದಾಗಿ ಮರಾಠಿ ಭಾಷೆಗೆ ಶರಣುಹೋದ ಸಂಗತಿಯನ್ನು, ಬಹಳ ಸ್ಪಷ್ಟವಾಗಿ ಪ್ರತಿಪಾದಿಸುತ್ತವೆ.

ಇದಲ್ಲದೆ ಪುಣೆ ಮುಂಬೈಗಳಿಗೆ ಹೋಗಿ ಶಿಕ್ಷಣಪಡೆದು ಮರಳಿದ ಕನ್ನಡಿಗರೆಲ್ಲ ತಮ್ಮ ಮಾತೃಭಾಷೆಯನ್ನು ಮರೆತು ಮರಾಠಿಯನ್ನೇ ಪ್ರಜ್ಞಾಪೂರ್ವಕವಾಗಿ ಮಾತನಾಡುವುದನ್ನು ರೂಢಿಸಿಕೊಳ್ಳುತ್ತಿದ್ದರು. ತಾವು ಮದುವೆ ಮಾಡಿಕೊಂಡು ಮನೆತುಂಬಿಸಿಕೊಂಡಿದ್ದ ಮೈಸೂರಿನ

೫. "The canarese language has never been taught and cultivated in this Division, as the Gujarati and Marathi in theirs.... while in the other Divisions the means for a good vernacular education are ample, in this Division, canarese books (and masters) are only in course of preparation. The vernacular of most of the masters is canarese and those whose vernacular is marathi, generally speak canarese also. Still it is unfortunately true that very few, even the native canarese themselves can teach their mother tongue in a scholarly manner, most of them cannot even write it respectably to dictation. Many of them even know marathi better than canarese at least for school purposes... this confusion of two languages, and the obsense of propiciency in their puts the southern scholars, I fear some years behind those of the other two Divisions". - Report of the Director of Public Inspection Bombay 1865-66 Appendix-A ಪುಟ. ೪೮, ೪೯ ಮತ್ತು ೬೨.

ಕಡೆಯ ಹೆಣ್ಣುಮಕ್ಕಳಿಗೂ ಸಹ ಬಲವಂತವಾಗಿ ಮರಾಠಿಭಾಷೆಯನ್ನು ಕಲಿಯುವಂತೆ ಮಾಡಿ ಇಡೀ ಕುಟುಂಬವನ್ನೇ ಆ ಭಾಷೆಯ ಪ್ರಭಾವದಿಂದ ಸಮ್ಮೋಹನಗೊಳಿಸಿ ಬಿಡುತ್ತಿದ್ದರು. ಈ ಮರಾಠಿಮೋಹಕ್ಕೆ ಬಲಿಯಾದ ಅನೇಕರು ಪುಸ್ತಕ, ವರ್ತಮಾನ ಪತ್ರಿಕೆ, ನಾಟಕ, ಸಂಗೀತ, ಇವೆಲ್ಲವನ್ನೂ ಆ ಭಾಷೆಯಲ್ಲಿಯೇ ಅಪೇಕ್ಷಿಸುತ್ತಿದ್ದರು.

ಮಹದಾಶ್ಚರ್ಯವೆಂದರೆ, ಕನ್ನಡವನ್ನು, ಕನ್ನಡಿಗರನ್ನೂ ಕೇಳುವವರೇ ದಿಕ್ಕಿಲ್ಲವೆಂಬಂತೆ ಅಂದು ಧಾರವಾಡ ಹುಬ್ಬಳ್ಳಿಗಳಲ್ಲಿ ಆರಂಭವಾದ ಮೊಟ್ಟಮೊದಲು ಶಾಲೆಗಳು ಕೂಡ ಮರಾಠಿಯವು. "೧೮೨೬ರ ಸುಮಾರಿಗೆ ಎರಡು ಮರಾಠಿ ಶಾಲೆಗಳು ಆರಂಭಗೊಂಡು, ಒಂದು ಹುಬ್ಬಳ್ಳಿಯಲ್ಲಿಯೂ ಇನ್ನೊಂದು ಧಾರವಾಡದಲ್ಲಿಯೂ"[೬] ಎಂಬ ಸಂಗತಿ ಗಮನಾರ್ಹ. ಈ ವಿಧವಾದ ವಿಪನ್ನಾವಸ್ಥೆಗೆ ಕಾರಣಗಳು ಅತ್ಯಂತ ಸ್ಪಷ್ಟವಿವೆ. ಮೊದಲನೆಯದಾಗಿ ರಾಜಸತ್ತೆಯ ಕೊನೆಗಾಲದಲ್ಲಿ ಕನ್ನಡನಾಡು ಪೇಶ್ವೆಯರ ಆಧಿಪತ್ಯದಲ್ಲಿ ನರಳುವಂತಾದುದು, ಎರಡನೆಯದಾಗಿ ಇಲ್ಲಿಯ ಮುಖಂಡರೂ, ಅಧಿಕಾರಸ್ಥರೂ ಮರಾಠಿ ಭಾಷಿಕರಾದುದು, ಮೂರನೆಯದಾಗಿ ಕನ್ನಡಿಗರು ಅಭಿಮಾನ ಶೂನ್ಯರಾಗಿದ್ದುದು. ಹೀಗೆ ಮೂರು ಸಂಗತಿಗಳು ಒಟ್ಟುಗೂಡಿ ಸೃಷ್ಟಿಸಿದ ದುರವಸ್ಥೆ ಅವರ್ಣನೀಯವಾದದು. ಪರಿಸ್ಥಿತಿ ಎಷ್ಟು ಭೀಕರವಾಯಿತೆಂದರೆ, ಕನ್ನಡಿಗರೇ ಇಲ್ಲಿ ತಮ್ಮ ಆತ್ಮಬಲವನ್ನು ಕಳೆದುಕೊಂಡು ಪರಕೀಯ ಪ್ರಜ್ಞೆಯಿಂದ ಚಡಪಡಿಸುವಂತಾಯಿತು.

ಇನ್ನೂ ಸೂಕ್ಷ್ಮವಾಗಿ ನೋಡುವುದಾದರೆ, ಹೈದರಾಬಾದ ಕರ್ನಾಟಕ, ಬಾಂಬೆ ಕರ್ನಾಟಕ ಎಂಬ ಇಬ್ಭಾಗವೇ ಹಲವು ಒಳಾಘಾತಗಳಿಗೆ ಕಾರಣವಾಗಿದ್ದಿತು. ಈ ಭೌಗೋಲಿಕವಾದ ತುಂಡರಿಕೆ ಎಲ್ಲ ನೆಲೆಗಳ ಮೇಲೂ ಪರಿಣಾಮ ಬೀರಿತ್ತು, ದೀರ್ಘಕಾಲೀನವಾಗಿತ್ತು. ೧೮೬೭ರ ಸುಮಾರಿಗೆ ಅಚ್ಚಗನ್ನಡದ ಪ್ರದೇಶವಾದ ಧಾರವಾಡದಲ್ಲಿ ಸಾಮಾನ್ಯವಾಗಿ ಕನ್ನಡ ಶಾಲಾ ನೇಮಕಾತಿಗಳ ಪ್ರಕಟಣೆಗಳು, ಮಾಹಿತಿಗಳು ಮರಾಠಿ ಭಾಷೆಯಲ್ಲಿಯೇ ಇರುತ್ತಿದ್ದವು. ಪಂಡಿತ ಲಕ್ಷ್ಮಣ ಶ್ರೀಪಾದ ನಾನಪೂರಕರ ಎಂಬವರು ಧಾರವಾಡದಲ್ಲಿ ಆರಂಭಿಸಿದ್ದ (೧೮೫೪) ಗ್ರಂಥಾಲಯವೊಂದರಲ್ಲಿ ೧೮೭೭ರ ಸುಮಾರಿಗೆ ಇದ್ದ ಒಟ್ಟು ನಾಲ್ಕುನೂರಾ ಐವತ್ತೊಂದು ಪುಸ್ತಕಗಳ ಪೈಕಿ ೪೧೪ ಇಂಗ್ಲೀಷ ಭಾಷೆಯವು, ೩೦ ಮರಾಠಿ ಭಾಷೆಯವು, ಕೇವಲ ೭ ಪುಸ್ತಕಗಳು ಮಾತ್ರ ಕನ್ನಡ ಭಾಷೆಯವು ಇದ್ದವೆಂದು ತಿಳಿಯುತ್ತದೆ.[೭] ವಿಜಾಪೂರ ಜಿಲ್ಲೆಯಿಂದ (ಅಂದಿನ ಕಲಾದಗಿ ಜಿಲ್ಲೆ) ಹೊರಡುತ್ತಿದ್ದ ಮೊಟ್ಟ ಮೊದಲಿನ ಪತ್ರಿಕೆ 'ಹಿತೇಚ್ಛು'ಕನ್ನಡದ್ದಲ್ಲ, ಮರಾಠಿ ಭಾಷೆಯದು. ಈ ಅನ್ಯಭಾಷೆಯ ವ್ಯಾಮೋಹ ಎಷ್ಟೊಂದು ದೈತ್ಯಾಕಾರವಾಗಿ ಬೆಳೆದು ತನ್ನ ಕಬಂಧಬಾಹುಗಳನ್ನು ಚಾಚಿ ಭೀಕರ ಪರಿಣಾಮ ಬೀರಿತ್ತೆಂಬುದನ್ನು ತಿಳಿಯಬೇಕಾದರೆ ಡೆಪ್ಯೂಟಿಯವರ ತರುವಾಯದ ಸಾಮಾಜಿಕ ಸ್ಥಿತಿಗತಿಯ ಬಗ್ಗೆಯೂ ಸ್ವಲ್ಪ ದೃಷ್ಟಿ ಹರಿಸುವುದು ಒಳ್ಳೆಯದು. ಈ ನಿಟ್ಟಿನಲ್ಲಿ ದಿ. ಆಲೂರ ವೆಂಕಟರಾಯರ ಅನಿಸಿಕೆಗಳು ಹೀಗಿವೆ : "ಕರ್ನಾಟಕದಲ್ಲಿ ಅನೇಕ ವರ್ಷಗಳ ವರೆಗೆ ಪ್ರಾಥಮಿಕ ಶಾಲೆಗಳಲ್ಲಿ ಮರಾಠಿಯನ್ನೂ ಮರಾಠಿ ಅಕ್ಷರಗಳನ್ನೂ ಕಲಿಸಬೇಕೆಂದು ಕೆಲವು ವಿಕ್ಷಿಪ್ತ ಮರಾಠಿ ಅಧಿಕಾರಿಗಳು ಯೋಚಿಸಿದರು. ಆಗ ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೂ ಮುಂಬಯಿ ಸರಕಾರಕ್ಕೂ ಜಗಳ ಉತ್ಪನ್ನವಾಯಿತು. ಶ್ರೀ ಕರಕುದರಿ ನಾರಾಯಣರಾಯರೂ, ಶ್ರೀ ರೊದ್ದ ಶ್ರೀನಿವಾಸರಾಯರೂ ಮೊದಲಾದ ಕರ್ನಾಟಕದ ಕಟ್ಟಾಭಿಮಾನಿಗಳು ಸರಕಾರದೊಡನೆ ಜಗಳಾಡಿ ಆ ವಿಕ್ಷಿಪ್ತ ವಿಚಾರಗಳನ್ನು ಖಂಡನಮಾಡಿ

---

೬. As early as 1826 two Marathi schools were opened one at Dharwad and other at Hubli -ಜಯಕರ್ನಾಟಕ : ಪುಟ. ೧೭೫.

೭. ಧಾರವಾಡಕರ. ರಾ.ಯ.: ಹೊಸಗನ್ನಡ ಸಾಹಿತ್ಯದ ಉದಯಕಾಲ ಪುಟ.೧೪.

ಕರ್ನಾಟಕದ ವರ್ಚಸ್ಸನ್ನು ಉಳಿಸಿಕೊಂಡರು" (ಕರ್ನಾಟಕತ್ವದ ವಿಕಾಸ - ಪುಟ. ೩೦). "ಪುಣೆಗೆ ಬಂದ ಬ್ರಾಹ್ಮಣ (ವಿದ್ಯಾರ್ಥಿಗಳಿಗೆ)ರಿಗೆ ಅಲ್ಪ ಸ್ವಲ್ಪ ಮರಾಠಿ ತಿಳಿಯುತ್ತಿದ್ದುದರಿಂದ ಮರಾಠಿಗರೊಡನೆಯೇ ಹೆಚ್ಚಿಗೆ ಸ್ನೇಹ ಬೆಳೆಸುತ್ತಿದ್ದರಲ್ಲದೆ, ಲಿಂಗಾಯತರು ಮುಂತಾದ ಕನ್ನಡಿಗರೊಡನೆ ಅಲ್ಲ. ಲಿಂಗಾಯತರಿಗೆ ಮರಾಠಿ ಭಾಷಾ ಸಂಪರ್ಕ ಕಡಿಮೆ. ಆಗ ಅವರ ಸಂಖ್ಯೆಯೂ ಅತ್ಯಲ್ಪ. ಮರಾಠಿ ಭಾಷೆಯಲ್ಲಿ ಲಿಂಗ ಪ್ರತ್ಯಯ ಮುಂತಾದ ತೊಡಕುಗಳು ಇರದಿದ್ದರೆ ನಮ್ಮಲ್ಲಿ ಎಷ್ಟೋ ಜನರು ಮರಾಠಿಗರಾಗಿ ಹೋಗುತ್ತಿದ್ದರೇನೋ; ಆ ತೊಡಕೇ ನಮ್ಮ ಕನ್ನಡವನ್ನು ರಕ್ಷಿಸಿದ ಕೋಟೆಯಾಗಿತ್ತು". (ಅದೇ, ಪುಟ. ೩೬).

"ಫರ್ಗೂಸನ್ ಕಾಲೇಜಿನ ದೊಡ್ಡ ಲಾಯಬ್ರರಿಯಲ್ಲಿ ಒಂದೂ ಕನ್ನಡ ಪುಸ್ತಕವಿರಲಿಲ್ಲ. ಇದು ಕನ್ನಡದ ಉಜ್ವಲಾಭಿಮಾನಿಯಾಗಿದ್ದ ರೊದ್ದ ವ್ಯಾಸರಾಯನಿಗೆ ಸಹನವಾಗಲಿಲ್ಲ. ಆತನು ಚಳುವಳಿ ಹೂಡಿದನು. ನಾವೆಲ್ಲರೂ ಬಹಳ ಬಡಿದಾಡಿದ ಬಳಿಕ ನಮ್ಮ ಪಾಲಿಗೆ ೫೦ ರೂಗಳು ಮಂಜೂರು ಮಾಡಲ್ಪಟ್ಟವು. ಆದರೆ ಆ ೫೦ ರೂ.ಗಳಲ್ಲಿ ಯಾವ ಪುಸ್ತಕ ತರಿಸಬೇಕೆನ್ನುವುದು ತಿಳಿಯಲಿಲ್ಲ. ಬಿ. ವೆಂಕಟಾಚಾರ್ಯರು ಬಂಗಾಲಿಯಿಂದ ಭಾಷಾಂತರಿಸಿದ ಕನ್ನಡ ಕಾದಂಬರಿಗಳ ಕೆಲವು ಹೆಸರುಗಳ ಪರಿಚಯವೇ ನಮ್ಮ ಜ್ಞಾನದ ಬಂಡವಲು. ಧಾರವಾಡದ ಕರ್ನಾಟಕ ವಿದ್ಯಾವರ್ಧಕಸಂಘಕ್ಕೆ ಪತ್ರ ಬರೆದು ಅಲ್ಲಿಂದಲೂ ಮೈಸೂರಿನಿಂದಲೂ ಕೆಲವು ಪುಸ್ತಕಗಳನ್ನು ತರಿಸಿಕೊಂಡೆವು. ಆದರೆ ಆ ಪುಸ್ತಕಗಳು ಬಂದ ಬಳಿಕ ನಾವು ಆ ಪುಸ್ತಕಗಳನ್ನು ಏಕೆ ತರಿಸಿದೆವೋ ಎಂದೆನಿಸಿತು. ಯಾಕೆಂದರೆ ಅವುಗಳಲ್ಲಿ ಬಹುತರವಾಗಿ ಯಾವ ಪುಸ್ತಕವೂ ಕಿರುಬೆರಳಿಗಿಂತ ದಪ್ಪವಾಗಿರಲಿಲ್ಲ. ಹೊಲಸು ಕಾಗದ, ತಪ್ಪು ಮುದ್ರಣ" (ಅದೇ, ಪುಟ. ೩೬-೩೭).

"ಕನ್ನಡಿಗರು ಮರಾಠಿ ನಾಟಕಗಳಲ್ಲಿಯೇ ನಾಯಕ, ನಾಯಕಿಯರ ಪಾತ್ರಗಳನ್ನು ವಹಿಸಿ ಹೆಸರು ಪಡೆಯುವದು ಅಲ್ಲಿನ ಪದ್ಧತಿ. ಒಮ್ಮೆ ಶ್ರೀ ವೆಂಕಟ ರಂಗೋ ಕಟ್ಟಿ ಎಂಬ ಪ್ರಸಿದ್ಧ ಕನ್ನಡ ಪ್ರಿನ್ಸಿಪಾಲರ ಮತ್ತು ಲೇಖಕರ ಮಗ ಶ್ರೀನಿವಾಸರಾಯನೆಂಬವನು ಮರಾಠಿಯ ಶಾಕುಂತಲ ನಾಟಕದಲ್ಲಿ ಶಕುಂತಲೆಯ ಪಾತ್ರವಹಿಸಿ ಮರಾಠಿಗರಿಂದಲೇ ಪ್ರಶಸ್ತಿಯನ್ನು ಪಡೆದಿದ್ದನು. ನಮ್ಮ ಕಾಲದಲ್ಲಿ ಬಿ.ಜಿ.ಕುಲಕರ್ಣಿ ಎಂಬ ಕನ್ನಡ ವಿದ್ಯಾರ್ಥಿಯು ಡೆಕ್ಕನ್ ಕಾಲೇಜದಲ್ಲಿ ಇದ್ದಾಗ ಓಥೆಲ್ಲೊ ಪಾತ್ರವನ್ನುವಹಿಸಿ ತನಗೆ ಮರಾಠಿ ಚೆನ್ನಾಗಿ ಬಾರದಿದ್ದರೂ ಪಾಠಮಾಡಿ ಕಲಿತು ಅತ್ಯುತ್ಕೃಷ್ಟವಾಗಿ ಪಾತ್ರವನ್ನು ಅಭಿನಯಿಸಿ ತೋರಿಸಿದನೆಂಬುದನ್ನು ಹೇಳಿದರೆ ಆಗಿನ ನಮ್ಮ ಕನ್ನಡಿಗರ ಮರಾಠಿ ಮೋಹದ ಕಲ್ಪನೆಯಾಗಬಹುದು". (ಅದೇ, ಪುಟ.೩೭).

"ಉತ್ತರ ಕರ್ನಾಟಕದ ಮಧ್ಯಸ್ಥಳವಾದ ಧಾರವಾಡ ಜಿಲ್ಲೆಯಲ್ಲಿಯೂ, ಮುಖ್ಯ, ಮುಖ್ಯ ಪಟ್ಟಣಗಳಲ್ಲಿಯೂ ದೊಡ್ಡ, ದೊಡ್ಡ ವಕೀಲರೆಂದರೆ ಮರಾಠಿಗರೇ. ಆ ಕಾಲದಲ್ಲಿ ವಕೀಲರೇ ಸಾರ್ವಜನಿಕ ಚಳವಳಿಗಾರರು. ಆದಕಾರಣ ಧಾರವಾಡದಲ್ಲಿ ಕೂಡ ಮರಾಠಿಯಲ್ಲಿಯೇ ಭಾಷಣಗಳು. ಕನ್ನಡದ ದುರ್ದೈವದಿಂದ ಇಲ್ಲಿಯ ಕನ್ನಡಿಗರಿಗೂ ಸೊಟ್ಟಪಟ್ಟ ಮರಾಠಿಯು ಬರುತ್ತಿತ್ತು. ೧೯೦೫ರಲ್ಲಿ ಬಂದು ನೋಡುತ್ತೇನೆ, ಇಂಥ ದುಃಸ್ಥಿತಿಯು. ನಾವು ಕೆಲವು ಕನ್ನಡಾಭಿಮಾನಿಗಳು ಮುಖ್ಯರಾದ ವಕೀಲರೊಡನೆ ಕನ್ನಡದಲ್ಲಿ ಮಾತನಾಡಿದರೂ ಅವರು ಮರಾಠಿಯಲ್ಲಿಯೇ ಮಾತನಾಡುತ್ತಿದ್ದರು. ಬೆಳಗಾವಿ, ಧಾರವಾಡ ಎರಡೂ ಜಿಲ್ಲೆಗಳ ಕೋರ್ಟುಭಾಷೆ ಕನ್ನಡ. ಈ ಮುಖಂಡ ವಕೀಲರು ಕನ್ನಡ ಬರುತ್ತದೆಂದು ಸನದು ತೆಗೆದುಕೊಂಡವರು; ಆಗ ನಮ್ಮೊಡನೆ ಮಾತನಾಡುವಾಗ ಕನ್ನಡದಲ್ಲಿ

ಉತ್ತರಕೊಡಿರೆಂದು ಕೇಳಿಕೊಂಡೆವು. ಅವರು ಅದಕ್ಕೆ ಕಿವಿಗೊಡಲಿಲ್ಲ. ದುರಭಿಮಾನಕ್ಕೆಬಿದ್ದರು. ಈ ಸ್ಥಿತಿ ಹತ್ತೆಂಟು ವರ್ಷ ಹೀಗೇ ಸಹಿಸಿದೆವು. 'ಕರ್ನಾಟಕಸಭೆ' ಸ್ಥಾಪನೆಯಾದಾಗ ಈ ಸ್ಥಿತಿ ನಿಲ್ಲಿಸಲು ನಿಶ್ಚಯಿಸಿದೆವು. ಆಗ ನಾವು ಅವರನ್ನು ಕೇಳಿಕೊಂಡಿದ್ದು ಇಷ್ಟೇ ಏನೆಂದರೆ; ಸಾರ್ವಜನಿಕ ಸಭೆಗಳಲ್ಲಾದರೂ ಕನ್ನಡದಲ್ಲಿ ಮಾತನಾಡಿರಿ, ಈಗಿನ ಜನತೆಗೆ ಮರಾಠಿ ತಿಳಿಯುವುದಿಲ್ಲ; ಮರಾಠಿಗರು ಹಟವನ್ನು ಬಿಡಲಿಲ್ಲ. ಆಗ ನಮಗೂ ಅವರಿಗೂ ವಾಗ್ಯುದ್ಧ ಸುರುವಾಯಿತು".[೮]

೧೯೧೭ರಲ್ಲಿ ಶ್ರೀ ಜೆ.ಎಂ. ದೇಶಪಾಂಡೆ ಎಂಬವರು ವಿಜಾಪುರದ ಸಾರ್ವಜನಿಕ ಸಭೆಯಲ್ಲಿ ಕನ್ನಡದಲ್ಲಿ ಮಾತನಾಡಿದ ಮೊದಲಿಗರಂತೆ. ಈ ಎಲ್ಲ ವಾಸ್ತವಾಂಶಗಳನ್ನು ಪರಿಶೀಲಿಸುವಾಗ ಸುಮಾರು ೨೫ ವರ್ಷಗಳ ಪರ್ಯಂತ ಅವಿಶ್ರಾಂತವಾದ ಕನ್ನಡಪರ ಹೋರಾಟದ ಮಧ್ಯದಲ್ಲೇ ಜೀವತೆತ್ತ ಚೆನ್ನಬಸಪ್ಪನವರ ಸ್ಥಿತಿ, ಏನಿದ್ದರಬಹುದೆಂದು ಅರ್ಥವಾಗುತ್ತದೆ. ಸಾರ್ವಜನಿಕ ವಾತಾವರಣ ೧೯೧೭ರ ಸುಮಾರಿಗೂ ಹೀಗಿತ್ತೆಂದ ಮೇಲೆ, ಕನ್ನಡಾಭಿಮಾನದ ಪ್ರಶ್ನೆಯೇ ಹುಟ್ಟದಿದ್ದ ಆ ಸಂದರ್ಭದಲ್ಲಿ ಏನಿದ್ದರಬಹುದೆಂಬುದು ಕಲ್ಪನೆಗೂ ನಿಲುಕದಂತಹದು.

ಈ ಭಾಷಿಕವಾದ ಸ್ಥಿತಿಯ ಜೊತೆಗೆ ಅಂದಿನ ಮುಂಬೈಕರ್ನಾಟಕದ ಶೈಕ್ಷಣಿಕ, ಸಾಂಸ್ಕತಿಕ ಬದುಕು ಇನ್ನೂ ಹದಗೆಟ್ಟಿತ್ತೆಂಬುದು ತಿಳಿಯುತ್ತದೆ. ಪ್ರಾಚೀನ ಶೈಕ್ಷಣಿಕ, ಸಾಂಸ್ಕತಿಕ ಹರಿಕಾರವೆನಿಸಬೇಕಾಗಿದ್ದ ವಿದ್ಯಾಕೇಂದ್ರಗಳು ವಿಜಯನಗರದ ಪತನಾನಂತರ ಮತೀಯ ಕೇಂದ್ರಗಳಾಗಿ ಬಿಟ್ಟಿದ್ದವು. ಈ ವಿಧವಾದ ಎಲ್ಲ ರಂಗದ ಸಾಮಾಜಿಕ ದುರ್ಲಕ್ಷಣಗಳ ಸಂದರ್ಭದಲ್ಲಿ ಬ್ರಿಟಿಶರು ಸಾಕಷ್ಟು ದೂರಾನ್ವಯ ದೃಷ್ಟಿಯಿಂದ ಶಿಕ್ಷಣ ಪ್ರಸಾರಕ್ಕೆ ಕೈಹಾಕಿದರು. ಈ ನಿಟ್ಟಿನಲ್ಲಿ ಅಧಿಕಾರಿಗಳು ಕಾರ್ಯಾರಂಭಮಾಡುವ ಮೊದಲು ಮಿಶನರಿಗಳು ಕ್ರೈಸ್ತ ಸನ್ಯಾಸಿಗಳಿಗಾಗಿ ತಮ್ಮ ದೇಶಗಳಲ್ಲಿ ತೆರೆದಿದ್ದ ಮಾದರಿಯಲ್ಲಿ ಶಿಕ್ಷಣಸಂಸ್ಥೆಗಳನ್ನು ಗೋವಾ, ಮದ್ರಾಸು, ಕಲ್ಕತ್ತಾ ಈ ಕಡೆಗಳಲ್ಲಿ ಆರಂಭಿಸಿದ್ದರು. ಕರ್ನಾಟಕದಲ್ಲಿ ಈ ರೀತಿಯ ಶಾಲೆಗಳನ್ನು ಮೊದಲಿಗೆ ಸ್ಥಾಪಿಸಿದವರೆಂದರೆ, ಲಂಡನ್ ಮಿಶಿನರಿ ಸೊಸಾಯಿಟಿಯವರು. ಬಳ್ಳಾರಿ ಮತ್ತು ಬೆಳಗಾವಿ ಅವರ ಮುಖ್ಯ ಕಾರ್ಯಕ್ಷೇತ್ರಗಳಾಗಿದ್ದವು. ಅನಂತರ ಬಾಸೆಲ್‌ಮಿಶನ್‌ದವರು (೧೮೩೪) ಮಂಗಳೂರನ್ನು ತಮ್ಮ ಕೇಂದ್ರಸ್ಥಳವನ್ನಾಗಿ ಮಾಡಿಕೊಂಡು, ಅಲ್ಲಲ್ಲಿ ಇಂಗ್ಲೀಷ್ ಶಾಲೆಗಳನ್ನು ತೆರೆಯತೊಡಗಿದರು. ಧಾರವಾಡದಲ್ಲಿ ಅವರ ಮೊದಲ ಶಾಲೆಯು ೧೮೩೭ರಲ್ಲಿ ಆರಂಭಗೊಂಡಿತು. ತದನಂತರ ಹುಬ್ಬಳ್ಳಿ, ಗದಗ, ಗುಳೇದಗುಡ್ಡ ಮುಂತಾದ ಊರುಗಳಲ್ಲಿಯೂ ಅವರ ಸಂಸ್ಥೆಗಳು ಆರಂಭಗೊಂಡವು.

ಆದರೆ ಇವರ ಶೈಕ್ಷಣಿಕ ಉದ್ದೇಶ, ಮತಪ್ರಸಾರ ಮತ್ತು ಮತಾಂತರಗಳಿಂದ ಕೂಡಿದ್ದಿತು. ಹೀಗಾಗಿ ಈ ಶಾಲೆಗಳಲ್ಲಿ ಬೋಧಿಸುತ್ತಿದ್ದ ಹೆಚ್ಚಿನ ವಿಷಯಗಳು ಪಾಶ್ಚಾತ್ಯ ಸಂಸ್ಕೃತಿಗೆ ಸಂಬಂಧಪಟ್ಟವುಗಳಾಗಿದ್ದವು. ಪ್ರಪಂಚ ಪರಿಚಯ, ಯುರೋಪದ ವಿಜ್ಞಾನವಿಷಯ ಜ್ಞಾನ, ಬೈಬಲ್‌ವಾಚನ ಮತ್ತು ಕಥಾನಿರೂಪಣೆ, ಸ್ತೋತ್ರಗಳಪಠಣ ಮುಂತಾದ ಒಟ್ಟಾರೆ ಭಾರತೀಯವಲ್ಲದ ಪಾಠಕ್ರಮ ಅದಾಗಿತ್ತು. ಆಂಗ್ಲ ವಿದ್ಯಾಭ್ಯಾಸ ಕ್ರಮವನ್ನು ಹೇರಲು ಕ್ರೈಸ್ತಮತ ಪ್ರಚಾರಕ ಮಂಡಳಿಗಳು ಶತಪ್ರಯತ್ನ ಮಾಡುತ್ತಿದ್ದವು. ಈ ಲಾಭಕ್ಕಾಗಿ ಹಿಂದೂಧರ್ಮವನ್ನು ವಾಚಾಮಗೋಚರವಾಗಿ ತೆಗಳಿ, ಜನತೆಯನ್ನು ಹಿಂದೂಧರ್ಮದಿಂದ

೮. ಆಲೂರ ವೆಂಕಟರಾಯರು : ಕರ್ನಾಟಕತ್ವದ ವಿಕಾಸ. ಪುಟ. ೧೭೫.

ವಿಮುಖರನ್ನಾಗಿಸಲು ಹೆಣಗುತ್ತಿದ್ದವು. ಬರಬರುತ್ತ ಜನರಿಗೆ ಇವರ ಶೈಕ್ಷಣಿಕ ಉಪಕಾರದ ಹಿಂದಿನಉದ್ದೇಶ ಗೊತ್ತಾಗಿ, ಅವರು ಇಂಥ ಶಿಕ್ಷಣದ ಬಗೆಗಿನ ಆಸ್ಥೆಯನ್ನು ಕ್ರಮೇಣ ಕಳೆದುಕೊಳ್ಳತೊಡಗಿದರು.

ಇದನ್ನರಿತ ಬ್ರಿಟಿಶ ಅಧಿಕಾರಿಗಳು ಕ್ಲುಪ್ತಕಾಲದಲ್ಲಿ ಎಚ್ಚೆತ್ತು, ತಮ್ಮ ಶೈಕ್ಷಣಿಕ ಚಟುವಟಿಕೆಗಳಲ್ಲಿ ಆಮೂಲಾಗ್ರವಾದ ಬದಲಾವಣೆ ತರಬಯಸಿದರು. ಆಗ ಈಸ್ಟ ಇಂಡಿಯಾ ಕಂಪನಿಯು ವಿದ್ಯಾಪ್ರೋತ್ಸಾಹಕ್ಕಾಗಿ ಪ್ರತಿ ವರ್ಷ ೧ ಲಕ್ಷ ರೂ.ಗಳನ್ನು ವೆಚ್ಚಮಾಡಬೇಕೆಂದು ನಿರ್ಧರಿಸಿತು. ಆದರೆ ಇದು ಇಡೀ ದೇಶದ ೩/೪ ಭಾಗಕ್ಕೆ ವ್ಯಯಿಸಬೇಕಾಗಿದ್ದ ಹಣ. ಅಲ್ಲದೆ ಈ ಹಣವು ಕೂಡ ಜನತೆಗೆ ನೇರವಾಗಿ ಶಿಕ್ಷಣ ಕೊಡುವುದಕ್ಕಾಗಿರಲಿಲ್ಲ. ವಿದ್ಯಾಪ್ರೋತ್ಸಾಹದ ಪ್ರಣಾಳಿಕೆಯ ಅಡಿಯಲ್ಲಿ ಖರ್ಚಾಗುವ ಒಟ್ಟು ಮೊತ್ತವಾಗಿತ್ತು. ಬಹುಶಃ ಬ್ರಿಟಿಶರ ಈ ಶಿಕ್ಷಣ ನೀತಿಯ ಹಿಂದೆ ದೇಶದ ಜನರ ದೊಂಬಿ ಮನೋಭಾವವನ್ನು ಕಡಿಮೆ ಮಾಡುವ ರಾಜಕೀಯ ಪ್ರೇರಿತ ದೃಷ್ಟಿ ಅಡಕವಾಗಿದ್ದಂತೆ ತೋರುತ್ತದೆ ಎಂಬ ಡಾ. ಹಾವನೂರರ ಅಭಿಪ್ರಾಯದಲ್ಲಿ ಸತ್ಯಾಂಶವಿಲ್ಲದಿಲ್ಲ.

ಆಮೇಲೆ ಶಿಕ್ಷಣ ಸುಧಾರಣೆಯ ನಿಚ್ಚಳ ದೃಷ್ಟಿಯನ್ನಿಟ್ಟುಕೊಂಡು ಕಾರ್ಯೋನ್ಮುಖರಾದ ಮೊದಲಿಗರೆಂದರೆ; ಮದ್ರಾಸದಲ್ಲಿದ್ದ ಮನ್ರೋ ಹಾಗೂ ಮುಂಬಯಿಯಲ್ಲಿದ್ದ ಎಲಿಫಿನ್‌ಸ್ಟನ್ನರು. ಇವರಿಬ್ಬರೂ ಒಂದೇ ಅವಧಿಯಲ್ಲಿ(೧೮೮೯-೧೮೨೭) ಗವ್ಹರ್ನರ್ ಆಗಿದ್ದವರು. ಇವರು ಕೈಕೊಂಡ ಮೊದಲ ಕಾರ್ಯವೆಂದರೆ, ತಮ್ಮ ಅಧೀನ ಅಧಿಕಾರಿಗಳಿಗೆ ಪರಿಪತ್ರಗಳನ್ನು ಕಳಿಸಿ ಅಂದಿನ ಶಿಕ್ಷಣಸ್ವರೂಪದ ಮಾಹಿತಿ ಕಲೆಹಾಕಿದ್ದು.

ಎಲಿಫಿನ್‌ಸ್ಟನ್ನನಂತೂ ೧೮೧೫ರಲ್ಲಿಯೇ ಸ್ಥಾಪಿತವಾಗಿದ್ದ 'ಬಾಂಬೆ ಎಜ್ಯುಕೇಶನ್ ಸೊಸಾಯಿಟಿ'ಯ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿ ದೇಶೀ ಭಾಷೆಗಳಲ್ಲಿ ಪುಸ್ತಕಗಳನ್ನು ಒದಗಿಸಬೇಕು, ಮತ್ತು ಹೆಚ್ಚು ಶಾಲೆಗಳನ್ನು ತೆರೆಯಬೇಕು ಎಂಬ ಸದುದ್ದೇಶದಿಂದ ಅಂಗಸಂಸ್ಥೆಯೊಂದನ್ನು ತೆರೆದನು. ಅದೇ ಮುಂದೆ 'ಬಾಂಬೆ ನೇಟೀವ್ಸ್ ಎಜ್ಯುಕೇಶನ್ ಸೊಸಾಯಿಟಿ' ಎಂಬ ಹೆಸರಿನಿಂದ ಕೆಲಸ ಮಾಡಿತು. ಇವರು ಕಲೆಹಾಕಿದ ಮಾಹಿತಿಯಿಂದ ಆವೊತ್ತಿನ ಶೈಕ್ಷಣಿಕರಂಗದ ಕೆಲವು ಕಟುಸತ್ಯಗಳು ಬೆಳಕಿಗೆ ಬಂದವು. ಅವುಗಳೆಂದರೆ : ಹುಡುಗ ದನಕಾಯುವಷ್ಟು ದೊಡ್ಡವನಾದರೆ ಸಾಕು, ರೈತನು ಶಾಲೆ ಬಿಡಿಸುತ್ತಿದ್ದ. ಇತ್ತ ವ್ಯಾಪಾರಿಗಳು ಬೇರೀಜು ವಜಾಬಾಕಿ ಮಾಡಲು ತಿಳಿಯುವಂತಾದರೆ ಮಕ್ಕಳನ್ನು ಶಾಲೆ ಬಿಡಿಸಿ ಕುಲಕಸಬಿಗೆ ಹಚ್ಚುವುದು ಸಾಮಾನ್ಯವಾಗಿತ್ತು. ಈ ಸ್ಥಿತಿಯನ್ನು ಪುಷ್ಟೀಕರಿಸುವ ಇನ್ನೂ ಕೆಲವು ಸಂಗತಿಗಳು ಆಗ ರಾಣೆಬೆನ್ನೂರ ವಿಭಾಗದ ಅಸಿಸ್ಟಂಟ್ ಕಲೆಕ್ಟರನಾಗಿದ್ದ ಸ್ಟೀವನ್‌ಸನ್ ಎಂಬಾತನು ೧೮೨೪ರಲ್ಲಿ ಕಳುಹಿದ ವರದಿಯಲ್ಲಿ ಹೀಗೆ ನಮೂದಾಗಿವೆ : "ಇಡೀ ಜನಸಂಖ್ಯೆಯ ಪ್ರಮಾಣದಿಂದ ತೀರ ಕೆಲವು ಹುಡುಗರು ಮಾತ್ರ ಶಾಲೆಗೆ ಹೋಗುತ್ತಾರೆ. ಈ ಕೆಲವೇ ಮಕ್ಕಳಲ್ಲಿ ಕಲಿಯುವವರ ಸಂಖ್ಯೆ ತೀರ ಕಡಿಮೆ. ಶಿಕ್ಷಣದ ಶೋಚನೀಯ ಅವಸ್ಥೆಗೆ ಇವೆರಡೂ ದೊಡ್ಡ ನಿದರ್ಶನಗಳಾಗಿವೆ. ಇಲ್ಲಿಯ ಜನರಿಗೆ ಶಿಕ್ಷಣ ಬೇಡವೆಂದೇನೂ ಅಲ್ಲ; ಜನತೆಯ, ವಿಶೇಷತಃ ರೈತವರ್ಗದ ಬಡತನವೇ ಇದರ ಕಾರಣವಾಗಿದೆ. ರೈತನು ಶಾಲಾಮಾಸ್ತರನಿಗೆ ಫೀ ಕೊಡಬೇಕಲ್ಲದೆ, ಚಿಕ್ಕ ವಯಸ್ಸಿನಲ್ಲಿಯೇ ತನ್ನ ಹೊಲಗೆಲಸಕ್ಕೆ ಉಪಯೋಗ ಬೀಳುವ ಹುಡುಗನ ಕೆಲಸವನ್ನು ಆತನು ಕಳೆದುಕೊಳ್ಳಬೇಕಾಗುತ್ತದೆ". ಇವನ ಈ ಅಭಿಪ್ರಾಯವನ್ನು

ಆಧರಿಸಿ ಧಾರವಾಡ ಸಭೆಯಲ್ಲಿ ಆಗ ಪಾಲಿಟಿಕಲ್ ಏಜಂಟನಾಗಿದ್ದ 'ಬೇಬರ್' ಎಂಬಾತನು ವಿದ್ಯಾರ್ಥಿಗಳಿಂದ ಚಿಲ್ಲರೆ ಕಾಸು ಫೀ ವಸೂಲು ಮಾಡದೆ ಸರಕಾರವೇ ಶಿಕ್ಷಕರಿಗೆ ಪಗಾರಕೊಡಬೇಕು, ಮಕ್ಕಳಶಿಕ್ಷಣವು ಸಂಪೂರ್ಣ ಉಚಿತವಾಗಿಬೇಕೆಂದು ಸಲಹೆಯಿತ್ತನು.

ಆದರೆ ಇವೆಲ್ಲಕ್ಕಿಂತ ಗಂಭೀರವಾದ ಸಮಸ್ಯೆಗಳು ಬೇರೆಯೇ ಆಗಿದ್ದವು. ಶಿಕ್ಷಣವು ಹೆಚ್ಚು ವ್ಯಾಪಕವಾಗಿರದೆ ಕೆಲವರಿಗೆ ಮಾತ್ರ ಪ್ರಯೋಜನ ಲಭಿಸುವಂತಾಗಿತ್ತು. ಪ್ರಾಥಮಿಕ ಮಟ್ಟದ ಲೆಕ್ಕಗಳ, ಅಕ್ಷರಗಳ, ಉಪಯುಕ್ತವಸ್ತುಗಳ ಪರಿಜ್ಞಾನ ಕೂಡ ಆಗದಂತಹ ಪರಿಸ್ಥಿತಿಯಿತ್ತು. ಕಲಿಸುವ ಉಪಾಧ್ಯಾಯರಿಗೆ ಮೂಲಭೂತ ತರಬೇತಿಯಾಗಲೀ, ತಕ್ಕ ಯೋಗ್ಯತೆಯಾಗಲೀ ಇದ್ದಿರಲಿಲ್ಲ. ಮಕ್ಕಳಿಗೆ ಕಲಿಯಲು ಯಾವುದೇ ಬಗೆಯ ನಿರ್ದಿಷ್ಟ ಪಠ್ಯಪುಸ್ತಕಗಳಿರಲಿಲ್ಲ. ಈ ಬಗೆಯ ಅವಸ್ಥೆಯನ್ನು ಅನುಲಕ್ಷಿಸಿಯೇ ಎಲಿಫಿನ್‌ಸ್ಟನ್‌ನನು ತನ್ನ ಪ್ರಾಂತದಲ್ಲಿ 'ನೇಟೀವ್ಹ ಸ್ಕೂಲ ಆಂಡ್ ಬುಕ್ ಸೊಸಾಯಿಟಿ'ಗಳ ಮೂಲಕ ಶಿಕ್ಷಣದ ಸೂತ್ರ ಸಪ್ತಕಗಳನ್ನು ಜಾರಿಗೆ ತಂದನು. ಈ ಸೂತ್ರಗಳಲ್ಲಿ ಪಠ್ಯಪುಸ್ತಕಗಳನ್ನು ಬರೆಯಿಸುವ, ಅನುವಾದಿಸುವ, ಮುದ್ರಿಸುವ ಯೋಜನೆಗಳು ಅಡಕವಾಗಿದ್ದವು. ಇಷ್ಟೊಂದು ಕಳಕಳಿಯಿಂದ ಈತ ಕಾರ್ಯಪ್ರವೃತ್ತನಾದರೂ ಮೊದಲಿನ ನಾಲ್ಕು ವರ್ಷಗಳಲ್ಲಿ (೧೮೨೧ ರಿಂದ ೧೮೨೪) ಕೇವಲ ಎರಡು ಪುಸ್ತಕಗಳನ್ನು ಮಾತ್ರ ಪ್ರಕಟಿಸಲು ಸಾಧ್ಯವಾಯಿತೆಂಬುದನ್ನು ತಿಳಿದಾಗ ಪರಿಸ್ಥಿತಿಯ ನೈಜತೆ ಕಲ್ಪನೆಗೆ ಬರುತ್ತದೆ.

ಇಂಥ ಕೆಲವು ಅಧಿಕಾರಿಗಳ ಕಾರ್ಯಾಸಕ್ತಿಗಳು ಒಂದು ನಿರ್ದಿಷ್ಟ ಸ್ವರೂಪ ಪಡೆಯಲು ಹಾತೊರೆಯುತ್ತಿದ್ದರೂ, ಧಾರವಾಡದಂತಹ ಸಂಪೂರ್ಣ ಕನ್ನಡ ಭಾಷಾಪ್ರದೇಶದಲ್ಲಿ ಸರಕಾರವು (೧೮೨೬ರ ಸುಮಾರಿಗೆ) ಮೊದಲು ಆರಂಭಿಸಿದ್ದು ಒಂದು ಮರಾಠಿ ಶಾಲೆಯನ್ನು ಎಂಬುದು, ಆವೊತ್ತಿನ ಕನ್ನಡಿಗರ ದುಸ್ಥಿತಿಯನ್ನು ಸ್ಪಷ್ಟಪಡಿಸುತ್ತದೆ. ಸರಕಾರದ ಆ ವಿಚಿತ್ರ ಕ್ರಮವನ್ನು ಆಗ ಧಾರವಾಡ ವಿಭಾಗಕ್ಕೆ ಅಸಿಸ್ಟಂಟ್ ಕಲೆಕ್ಟರನಾಗಿದ್ದ ವಾಲ್ಟರ ಎಲಿಯೆಟ್ ನೇರವಾಗಿ ವಿರೋಧಿಸಿ, ನ್ಯಾಯಯುತವಾಗಿ ಇಲ್ಲಿಯ ಜನಭಾಷೆಯಲ್ಲಿಯೇ ಶಿಕ್ಷಣ ದೊರೆಯಬೇಕೆಂದು ವರದಿ ಮಾಡಿದನು. ಅದೂ ಅಲ್ಲದೆ 'ಇಸೋಪನ ನೀತಿಕಥೆಗಳು', 'ಗಣಿತ ಪುಸ್ತಕ ಪೂರ್ಣಾಂಕ' ಹಾಗೂ 'ಶಾಲಾಪದ್ಧತಿ' ಎಂಬ ಮೂರು ಪುಸ್ತಕಗಳು ರಚನೆಗೊಳ್ಳುವಂತೆ ವ್ಯವಸ್ಥೆ ಮಾಡಿದನು. ಆಗ ಅಚ್ಚಿಗಾಗಿ ಕನ್ನಡ ಬರೆಯುವವರು ಮುಂಬೈಯಲ್ಲಿ ಸಿಕ್ಕದೇ ಇದ್ದುದರಿಂದ ೧೮೩೩ರಲ್ಲಿ ಅವು ಬಳ್ಳಾರಿಯ ಮಿಶನ್ ಪ್ರೆಸ್ಸಿನಲ್ಲಿ ಮುದ್ರಿತವಾದವು. ಈ ಮೂರು ಮುಂಬೈ ರಾಜ್ಯದಲ್ಲಿ ಮೊತ್ತಮೊದಲು ಪ್ರಕಟವಾದ ಕನ್ನಡದ ಅಪೂರ್ವ ಕೃತಿಗಳೆನಿಸಿವೆ.

ಇದಾದ ಎರಡು ವರ್ಷದ ತರುವಾಯ (೧೮೩೫) ಮುಂಬೈ ಸರಕಾರಕ್ಕೆ, 'ಸದರ್ನ ಮರಾಠಾ' ಎನಿಸಿಕೊಳ್ಳುತ್ತಿದ್ದ ಉತ್ತರಕರ್ನಾಟಕದ ಭಾಷೆ ಕನ್ನಡ, ಇಲ್ಲಿಯ ಆಡಳಿತ ವ್ಯವಹಾರ, ಶಿಕ್ಷಣಕಾರ್ಯ ಕನ್ನಡದಲ್ಲಿ ನಡೆಯಬೇಕು ಎಂಬ ಜ್ಞಾನೋದಯವಾಯಿತು. ಪರಿಣಾಮವಾಗಿ ಸರಕಾರಿ ಕನ್ನಡ ಶಾಲೆಗಳ ಸಂಖ್ಯೆ ಹೆಚ್ಚತೊಡಗಿದವು. ಕನ್ನಡ ಪುಸ್ತಕ ನಿರ್ಮಿತಿಯ ಕಾರ್ಯ ತೀರ ಮಂದಗತಿಯಲ್ಲಾದರೂ ಮುಂದುವರೆಯಿತೆಂಬುದು ಸಮಾಧಾನದ ಸಂಗತಿ. 'ಸಂಣ ಹಿತೋಪದೇಶ' ಜನ್ಮತಳೆದದ್ದು ಈ ಅವಸ್ಥೆಯಲ್ಲಿ (೧೮೩೬). ಅದು ಅಂದಿನ ಕನ್ನಡಭಾಷೆಯ ಅವಸ್ಥೆಯ ದಾಖಲೆಯಾಗಿರುವುದರಿಂದ ಅದರ ಒಕ್ಕಣಿಕೆಯ ಸ್ವರೂಪವನ್ನು ಇಲ್ಲಿ ನೋಡಬಹುದು.

॥ ಸಂಣ್ಣ ಹಿತೋಪದೇಶ ॥

"ಯಿ ಗ್ರಂಥ ಕನಡ ಸಾಲೆವಳಗೆ ವೊದುವಂಥಾ ಯೇಳು
ಯೆಂಟ್ಟು ವರುಷದ ಹುಡುಗರಿಗೆ ಥೊಡೆ ಕಷ್ಟದಿಂದಾ
ಚೆಲೊ ತನಕ ತಿಳವಳಿಕೆ ಆಗಬೇಕೆಂದ್ದು ಬಹಳ
ಪ್ರೀತ್ತೆಯಿಂದ್ದಾ ಕೊಡಲ್ಪಟ್ಟಿದೆ."

"ಮುಂಬಯಿ ಹೆಸರು
ವುಳ್ಳ ಅರಮನಿಯ
ಛಾಪಖಾನೆಯಲ್ಲಿ
ಛಾಪಿಸಿದ.
ಸಂನ್ನು ೧೮೩೬
ಶಕೆ - ೧೭೫೮ ....."[೯]

ಇಲ್ಲಿಯ ಅಂದಗೆಟ್ಟ ಭಾಷೆಯ ರಚನೆಯನ್ನು ಗಮನಿಸಿದಾಗ ಅದರ ದುಸ್ಥಿತಿಯ ಅನುಭವ ಆಗದಿರದು. ಸುದೈವದಿಂದ ನೇಟೀವ್ಹ ಎಜ್ಯುಕೇಶನ್ ಸಂಸ್ಥೆಯು ತನ್ನ ಶೈಕ್ಷಣಿಕ ಚಟುವಟಿಕೆಯನ್ನು ತೀವ್ರಗೊಳಿಸಿದ ನಂತರ ಜಿಲ್ಲೆ ಮತ್ತು ವಿಭಾಗಗಳ ಅಧಿಕಾರಿಗಳು ತಮ್ಮ ತಮ್ಮ ಕ್ಷೇತ್ರಗಳ ಶಾಲಾ ಅಗತ್ಯತೆಯನ್ನೂ, ಅವಶ್ಯಕ ಸಂಖ್ಯೆಯನ್ನೂ, ಅದಕ್ಕೆ ತಗಲುವ ವೆಚ್ಚವನ್ನೂ ಮನವಿಗಳ ಮುಖಾಂತರ ಸರಕಾರದ ಗಮನಕ್ಕೆ ತರಲು ಮುಂದೆ ಬರತೊಡಗಿದರು. ಇಂಥ ವಾತಾವರಣದಿಂದ ಉತ್ಸಾಹಿತನಾದ ಬೆಳಗಾವ ಬಿಜಾಪೂರಗಳ ವಿಭಾಗಾಧಿಕಾರಿಯು (೧೮೩೬) ತನ್ನ ಭಾಗದಲ್ಲಿ ೨೭ ಹೊಸ ಶಾಲೆಯ ಅವಶ್ಯಕತೆಯನ್ನು ಮನವರಿಕೆ ಮಾಡಿಕೊಟ್ಟನು. ಇವನ ಒತ್ತಾಸೆಯಂತೆ ಈ ಪ್ರದೇಶದ ಅನೇಕ ಊರುಗಳಲ್ಲಿ ಕನ್ನಡ ಶಾಲೆಗಳು ಆರಂಭಗೊಳ್ಳಲು ಅವಕಾಶ ದೊರೆಯಿತು. ಆಶ್ಚರ್ಯದ ವಿಷಯವೆಂದರೆ, ಮುಂಬೈ ಕರ್ನಾಟಕದಲ್ಲಿ ಕನ್ನಡ ಶಾಲೆಗಳು ೧೮೩೫ರಲ್ಲಿ ಪ್ರಾರಂಭಿಸಲ್ಪಟ್ಟರೆ, ಇದಕ್ಕಿಂತ ಪೂರ್ವದಲ್ಲಿಯೇ ಇಲ್ಲಿ(೧೮೨೯) ಮರಾಠಿ ಶಾಲೆಗಳು ಅಟ್ಟಹಾಸದಿಂದ ಮೆರೆಯುತ್ತಿದ್ದವು. ಆದರೆ ಸರಿಸುಮಾರು ಇದೇ ಹೊತ್ತಿಗೆ ಶಿಕ್ಷಣಾಧಿಕಾರಿಯಾಗಿದ್ದ ಬಾಳಾಶಾಸ್ತ್ರಿ ಜಾಂಬೇಕರ ಅವರು ಕನ್ನಡ ಕ್ರಮಿಕ ಪುಸ್ತಕಗಳ ಬಗ್ಗೆ ತೋರಿದ ಆಸಕ್ತಿ ಅಸಾಮಾನ್ಯವಾದುದು. ಇವನ ಆಡಳಿತ ಕಕ್ಷೆಯಲ್ಲಿ ಮುಂಬೈ ಕರ್ನಾಟಕವೂ ಸೇರಿದ್ದರಿಂದ ಈ ಭಾಗದ ಶಿಕ್ಷಕರ, ವಿದ್ಯಾರ್ಥಿಗಳ ಹಾಗೂ ಅಧಿಕಾರಿಗಳ ತೊಂದರೆಯನ್ನು ಲಕ್ಷಿಸಿ ಬೆಂಗಳೂರು, ಮಂಗಳೂರು ಕಡೆಗೆ ಸಂಪರ್ಕ ಬೆಳೆಸಿ ಅಲ್ಲಿಂದ ಕನ್ನಡ ಕ್ರಮಿಕ ಪುಸ್ತಕಗಳನ್ನು ತರಿಸಿ ಪೂರೈಸಿದನು. ಆದರೆ ಕ್ರಿ.ಶ. ೧೮೪೫ರಲ್ಲಿ ಇವನು ತೀರಿಕೊಂಡದ್ದರಿಂದ ಮತ್ತೆ ಹಲವಾರು ವರ್ಷಗಳ ವರೆಗೆ ಕನ್ನಡದ ಶೈಕ್ಷಣಿಕ ಕೆಲಸಕ್ಕೆ ತೀವ್ರಧಕ್ಕೆ ಒದಗಿತು.

ಆದರೆ ಕನ್ನಡವನ್ನು ಆಡಳಿತದಲ್ಲಿ ತರಬೇಕೆಂಬ ಪ್ರಯತ್ನದ ಫಲವಾಗಿ ೧೮೩೫ರ ಹೊತ್ತಿಗೆ, ಸರಕಾರಿ ನೌಕರೀ ಬೇಕಾದವರು ಕನ್ನಡವನ್ನು ಕಡ್ಡಾಯವಾಗಿ ಕಲಿಯಬೇಕೆಂಬ ಆಜ್ಞೆ ಹೊರಟಿತು. ಇದರಿಂದುಂಟಾದ ಪ್ರಗತಿಯನ್ನು ಇನ್ನಷ್ಟು ಉತ್ತೇಜಿಸುವ ದೃಷ್ಟಿಯಿಂದ 'ಡನ್‌ಲಪ್'ಎಂಬ ಆಂಗ್ಲ ಅಧಿಕಾರಿ ಮೇಲಧಿಕಾರಿಗಳಿಗೆ ವರದಿ ಮಾಡುವಾಗ ಕನ್ನಡದಲ್ಲಿ ದುಂಡಾಗಿ ಅಕ್ಷರಗಳನ್ನು ಬರೆಯುವ ಕಾರಕೂನರಿಗೆ ಪಾರಿತೋಷಕಗಳನ್ನು ಕೊಡಬಹುದೆಂಬ

೯. ಹಾವನೂರ ಶ್ರೀನಿವಾಸ : ಹೊಸಗನ್ನಡ ಅರುಣೋದಯ. ಪುಟ. ೭೪.

ಸೂಚನೆಯನ್ನು ಮುಂದಿಟ್ಟನು. ಬೆಥಿಂಗಟನ್ ಎಂಬ ಇನ್ನೊಬ್ಬ ಆಂಗ್ಲ ಅಧಿಕಾರಿ ಕನ್ನಡ ಪರೀಕ್ಷೆಯಲ್ಲಿ ಪಾಸಾಗಿ ಅವಕಾಶದ ಸದುಪಯೋಗ ಮಾಡಿಕೊಂಡು ಪ್ರಶಂಸೆಗೆ ಪಾತ್ರನಾದದ್ದು ತಿಳಿದು ಬರುತ್ತದೆ. ಡನ್‌ಲಪ್ ಮಾಡಿದ ಇನ್ನೂ ಕೆಲವು ಕನ್ನಡಪರ ಶಿಫಾರಸುಗಳು ಅತ್ಯದ್ಭುತವಾದವುಗಳಾಗಿವೆ: ಯಾವುದಾರೊಂದು ಪ್ರದೇಶದ ಆಡಳಿತ ವ್ಯವಹಾರಗಳ ಭಾಷೆಯು ಅಲ್ಲಿಯ ಜನರು ಆಡುವ ಭಾಷೆಯೇ ಆಗಿರಬೇಕಾದುದು ನ್ಯಾಯಸಮ್ಮತ. ಆದರೆ ಮುಂಬೈ ಕರ್ನಾಟಕ ಮತ್ತು ಹಿಂದೂಸ್ಥಾನದ ಇನ್ನೂ ಕೆಲವೆಡೆಗಳಲ್ಲಿ ಅಂಥ ಪರಿಸ್ಥಿತಿ ಇಲ್ಲ. ಅಲ್ಲದೆ ಧಾರವಾಡ ಸುಭೆಯಲ್ಲಿರುವ ಎಲ್ಲ ಭಾಗವೂ (ಪಾರ್ಶ್ವಾಪೂರ, ಬೀಡಿ, ಚಿಕ್ಕೋಡಿ ತಾಲೂಕಿನ ಕೆಲ ಹಳ್ಳಿಗಳನ್ನು ಬಿಟ್ಟು) ಕನ್ನಡ ಪ್ರದೇಶವೇ ಆಗಿವೆ. ಆದ್ದರಿಂದ ಸರಕಾರೀ ವ್ಯವಹಾರಗಳೂ, ಕಾಗದಪತ್ರಗಳೂ ಮರಾಠಿ ಭಾಷೆಗಿಂತ ಕನ್ನಡ ಭಾಷೆಯಲ್ಲಿರುವುದೇ ಸೂಕ್ತ ಎಂಬುದು ಆವನ ಖಚಿತ ಅಭಿಪ್ರಾಯವಾಗಿತ್ತು. ಜರ್ವಿಸ್‌ನಂತವರೂ ಇದೇ ನಿಲುವಿನವರಾಗಿದ್ದರು. ಆದರೂ ಪರಿಸ್ಥಿತಿ ಒಮ್ಮೆಲೇ ಬದಲಾಗಲಿಲ್ಲ. ಮುಂದಿನ ಕೆಲವು ವರ್ಷಗಳಲ್ಲಿ ಕರ್ನಾಟಕದ ಪ್ರಮುಖ ನಗರಗಳಲ್ಲಿ ಇಂಗ್ಲೀಷ ಶಾಲೆಗಳ ಸ್ಥಾಪನೆಯ ಕಾರ್ಯವನ್ನೇ ಸರಕಾರ ಮುಂದುವರಿಸಿದ್ದು ಕಂಡು ಬರುತ್ತದೆ.

೧೮೫೪-೫೫ರಿಂದ ಇಡೀ ದೇಶದಲ್ಲಿ ಸಮಾನವಾಗಿ ಅನ್ವಯಿಸುವಂತಹ ಏಕರೂಪದ ಶಿಕ್ಷಣ ಯೋಜನೆಯು ಸಿದ್ಧವಾಯಿತು. ಶಿಕ್ಷಣದ ಆಗುಹೋಗುಗಳನ್ನು ನೋಡಿಕೊಳ್ಳಲು "Department of Public Instruction" ಎಂಬ ಹೆಸರಿನ ಪ್ರತ್ಯೇಕವಾದ ಶಿಕ್ಷಣ ಇಲಾಖೆಯು ಪ್ರತಿಯೊಂದು ಪ್ರಾಂತದಲ್ಲಿಯೂ ಹುಟ್ಟಿಕೊಂಡವು. ಇದರ ಅಂಗವಾಗಿ ಖಾಸಗೀ ಶಾಲೆಗಳಿಗೂ ಸಹಾಯಧನ (Grant in aid) ಕೊಡುವ ಉದಾರತೆಯನ್ನು ಶಿಕ್ಷಣಖಾತೆ ತೋರಿಸಿತು. ಇಲ್ಲಿಂದ ಮುಂದೆ ಪ್ರಾಥಮಿಕ, ಮಾಧ್ಯಮಿಕ, ಮತ್ತ ಉಚ್ಚ ಎಂಬ ಶಿಕ್ಷಣದ ಹಂತಗಳು ಸ್ಪಷ್ಟವಾಗಿ ಗೋಚರಿಸಿದವು.

ಇದೇ ಅವಧಿಯಲ್ಲಿ ಮುಂಬೈ ಪ್ರಾಂತವನ್ನೂ ಮೂರು ಭಾಗಗಳಾಗಿ ವಿಂಗಡಿಸಿ ವಿದ್ಯಾಭ್ಯಾಸದ ಧ್ಯೇಯೋದ್ದೇಶಗಳನ್ನು ಹೆಚ್ಚು ತೀವ್ರಗೊಳಿಸಲು ಆಯಾ ಪ್ರದೇಶಗಳಿಗೆ ಒಬ್ಬ ತನಿಖಾಧಿಕಾರಿಯನ್ನು ನಿಯಮಿಸಲಾಯಿತು. ಇದು ಶಿಕ್ಷಣಕ್ಷೇತ್ರದಲ್ಲಿ ಒಂದು ಹೊಸ ಭರವಸೆ ಮೂಡಿಸಲೂ ಕಾರಣವಾಯಿತು. ಇಂಗ್ಲೀಷ ಶಾಲೆಗಳ ಪ್ರಾಬಲ್ಯ ಕ್ರಮೇಣ ಕಡಿಮೆಯಾಗತೊಡಗಿತು. ೧೮೫೭ರಲ್ಲಿ ಧಾರವಾಡ, ಬೆಳಗಾಂವ, ಬಿಜಾಪೂರ ಜಿಲ್ಲೆಗಳ ಪ್ರಾಥಮಿಕ ಶಾಲೆಗಳ ಸಂಖ್ಯೆ ಕ್ರಮವಾಗಿ ೧೩, ೧೩ ಮತ್ತು ೬. ಕಾರವಾರ ಜಿಲ್ಲೆಯನ್ನೊಳಗೊಂಡು ಈ ನಾಲ್ಕು ಜಿಲ್ಲೆಗಳಲ್ಲಿನ ಇಂಗ್ಲೀಷ ಶಾಲೆಗಳ ಸಂಖ್ಯೆ ೫ ಮಾತ್ರ. ಇಂಥ ಬದಲಾಗುತ್ತಿರುವ ಸನ್ನವೇಶದಲ್ಲಿ ಬೆಳಗಾವಿಯಲ್ಲಿ ಸರದಾರ ಹಾಯಸ್ಕೂಲು (೧೮೫೦) ತಲೆಯೆತ್ತಿದ್ದಿತು. ಶೈಕ್ಷಣಿಕ ಇತಿಹಾಸದಲ್ಲಿ ಇದೊಂದು ಮಹತ್ವದ ಘಟ್ಟ. ದಕ್ಷಿಣ ಮಹಾರಾಷ್ಟ್ರದ (ಮುಂಬೈ ಕರ್ನಾಟಕದ) ಇಂಥ ಶಿಕ್ಷಣ ಸಂಸ್ಥೆಗಳನ್ನು ತಪಾಸಿಸಲು ಆಗ ಪುಣೆಯಿಂದ ವಿಜಿಟರ್ ಅಧಿಕಾರಿಯು ಬರುತ್ತಿದ್ದ.

ಈಗಾಗಲೇ ಡೆಕ್ಕನ್ ಭಾಗದಲ್ಲಿ ಪುಣೆ, ಸಾತಾರಾ, ಸೊಲ್ಲಾಪೂರ, ಅಹಮ್ಮದ್ನಗರ, ಖಾನದೇಶ ಈ ಜಿಲ್ಲೆಗಳ ಸಂಗಡ ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳು ಸಹಭಾಗಿತ್ವವನ್ನು ಹೊಂದಿದ್ದವು. ಮೊದಲಿಗೆ ಸ್ಟೀವರ್ಡ್ ಎಂಬವರು ಡೆಕ್ಕನ್‌ಭಾಗಕ್ಕೆ ಡಿವಿಜನಲ್

ಇನಸ್ಪೆಕ್ಟರರಾಗಿಯೂ ಎಪ್.ಡಿ.ಬೇಕರ ಎಂಬವರು ಧಾರವಾಡ, ಬೆಳಗಾವ, ಸಾತಾರಾ, ಮತ್ತು ಸೊಲ್ಲಾಪೂರ ಜಿಲ್ಲೆಗಳೊಳಗಿನ ಕನ್ನಡ ಪ್ರದೇಶಕ್ಕೆ ಡೆಪ್ಯೂಟಿ ಎಜ್ಯುಕೇಶನಲ್ ಇನಸ್ಪೆಕ್ಟರರಾಗಿಯೂ ನೇಮಕಗೊಂಡಿದ್ದರು. ಮುಂದೆ ೧೮೫೫ ಜುಲೈನಲ್ಲಿ ಕೆಲವು ಬದಲಾವಣೆಗಳಾದವು. ಆದರೆ ಡೆಕ್ಕನ್ ಭಾಗದಿಂದ ಧಾರವಾಡ, ಬೆಳಗಾವಿ ಜಿಲ್ಲೆಗಳನ್ನು ಪ್ರತ್ಯೇಕಿಸಿ ದಕ್ಷಿಣಭಾಗವೆಂಬ ಹೊಸ ವಿಭಾಗವೊಂದನ್ನು ಪುನಃ ಸೃಷ್ಟಿಸಲಾಯಿತು. ಆಗ ಆ ಭಾಗದ ಶಿಕ್ಷಣಾಧಿಕಾರಿಯ ಅಧೀನಕ್ಕೆ ಸಾತಾರಾ, ಸೊಲ್ಲಾಪೂರ ಜಿಲ್ಲೆಗಳೊಳಗಿನ ಕನ್ನಡ ಪ್ರದೇಶಗಳನ್ನು ಒಪ್ಪಿಸಲಾಯಿತು. ತರುವಾಯ ಉತ್ತರಕನ್ನಡಜಿಲ್ಲೆಯು ಮುಂಬೈ ಇಲಾಖೆಯಲ್ಲಿ ಸೇರ್ಪಡೆಯಾದ ಮೇಲೆ ಆಡಳಿತದ ಅನುಕೂಲ ದೃಷ್ಟಿಯಿಂದ ೧೮೬೪ರಲ್ಲಿ ಸಾತಾರಾ, ಸೊಲ್ಲಾಪೂರ ಜಿಲ್ಲೆಗಳೊಳಗಿನ ಕನ್ನಡ ಪ್ರದೇಶಗಳ ಜೊತೆಗೆ ಆಗಿನ ಬೆಳಗಾವಿ ಜಿಲ್ಲೆಯೊಳಗಿನ ಹುನಗುಂದ, ಬಾದಾಮಿ ಮತ್ತು ಬಾಗಲಕೋಟೆ ತಾಲೂಕುಗಳನ್ನು ವಿಲೀನಗೊಳಿಸಿ ಕಲಾದಗಿ ಜಿಲ್ಲೆ ಎಂಬ ಹೊಸ ಜಿಲ್ಲೆಯನ್ನು ನಿರ್ಮಿಸಲಾಯಿತು. ನಂತರದ ದಿನಗಳಲ್ಲಿ ಕೆಲವು ಮುಖ್ಯ ಸ್ಥಳಗಳನ್ನು ಕಲಾದಗಿಯಿಂದ ವಿಜಾಪೂರಕ್ಕೆ ವರ್ಗಾಯಿಸಿ ವಿಜಾಪೂರಜಿಲ್ಲೆಯೆಂದು ನಾಮಕರಣ ಮಾಡಲಾಯಿತು. ಹೀಗೆ ಧಾರವಾಡ, ಬೆಳಗಾವಿ, ಕಾರವಾರ ಮತ್ತು ಬಿಜಾಪೂರ ಜಿಲ್ಲೆಗಳನ್ನೊಳಗೊಂಡ ಉತ್ತರಕರ್ನಾಟಕವು ರಚನೆಗೊಂಡದ್ದು ಕನ್ನಡಿಗರ ಪಾಲಿಗೆ ಒಂದು ಅತ್ಯಂತ ಅನುಕೂಲಕರ ಬೆಳವಣಿಗೆಯಾಯಿತೆಂಬುದು ಗಮನಾರ್ಹ.

ಪ್ರಾಯಶಃ ಇದೇ ಹೊತ್ತಿಗೆ (೧೮೬೫) ಮೆ: ರಸೆಲ್ಲರು ದಕ್ಷಿಣಭಾಗಕ್ಕೆ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್ ಎಂದು ನೇಮಕವಾಗುವಲ್ಲಿ ಕನ್ನಡ ಭಾಷೆ, ಸಂಸ್ಕೃತಿಗಳು ಇನ್ನೂ ಹೆಚ್ಚು ತ್ವರಿತವಾಗಿ ಊರ್ಜಿತಗೊಳ್ಳಲು ದೊಡ್ಡ ಆಸರೆ ಸಿಕ್ಕಂತಾಯಿತು. ". . . . . ಕನ್ನಡದ ಪುನರುತ್ಥಾನದ ಈ ಸಮಯಕ್ಕೆ ರಸೆಲ್ ಅವರು ರಂಗಸ್ಥಲದ ಮೇಲೆ ಕಂಡುಬರದಿದ್ದರೆ ಕನ್ನಡ ಪುನರುಜ್ಜೀವನ ಇನ್ನೂ ಐವತ್ತುವರ್ಷ ಮುಂದೆ ಬೀಳುತ್ತಿತ್ತು. ಶೈಕ್ಷಣಿಕವಾಗಿ ಕನ್ನಡದ ಪ್ರಾಣಪ್ರತಿಷ್ಠಾಪನೆ ಮಾಡಿದ ಶ್ರೇಯಸ್ಸು ರಸೆಲ್ ಸಾಹೇಬರಿಗಿದೆ"[೧೦] ಎಂಬುದನ್ನು ಕನ್ನಡಿಗರು ಮತ್ತೆ ಮತ್ತೆ ನೆನಪಿಸಿಕೊಳ್ಳಲೇಬೇಕಾಗುತ್ತಿತ್ತು.

ಈ ನೆಲದ ಭಾಷೆ ಮರಾಠಿ ಅಲ್ಲ, ಕನ್ನಡವೆಂದು ಬ್ರಿಟಿಶ ಅಧಿಕಾರಿಗಳಿಗೆ ಎಂದು ಮನವರಿಕೆಯಾಯಿತೋ ಅಂದಿನಿಂದ ಕನ್ನಡವನ್ನು ಮತ್ತೆ ಮತ್ತೆ ಇಲ್ಲಿ ನೆಲೆಗೊಳಿಸುವುದಕ್ಕೆ ಅವರೆಲ್ಲ ಶಕ್ತ್ಯಾನುಸಾರ ದುಡಿಯುತ್ತಲೇ ಬಂದರು. ಭಾಷೆಯ ವಿಷಯದಲ್ಲಿ ದಮನಕಾರಿ ಪ್ರವೃತ್ತಿಯನ್ನು ಅನುಸರಿಸಿಕೊಂಡು ಮುಂದುವರೆಯುವುದು ಆಳದಲ್ಲಿ ಅವರಿಗೆ ಸಾಧುವಾದುದೆನಿಸಲಿಲ್ಲ. ಹೀಗಾಗಿ ಕನ್ನಡದ ಪುನರುಜ್ಜೀವನದ ನಿಟ್ಟಿನಲ್ಲಿ ಅವರ ಹಲವು ಆಲೋಚನೆಗಳು ಪ್ರವೃತ್ತವಾದವು. ಈ ಕಾರ್ಯದ ಸಿಂಹಪಾಲು ರಸೆಲ್ಲರಿಗೆ ಎಂಬುದನ್ನು ಮೇಲಿನ ಅಭಿಪ್ರಾಯ ಪುಷ್ಟೀಕರಿಸುತ್ತದೆ.

ಅಂದಿನ ಇಂಥ ಪರಿಸರವನ್ನು ಗಮನಿಸುವಾಗ ಪರಂಪರಾಗತ ನಮ್ಮ ಶಿಕ್ಷಣ ಪದ್ಧತಿ ಏನಿತ್ತು? ಎಂಬುದನ್ನು ಸ್ಥೂಲವಾಗಿಯಾದರೂ ನೋಡುವುದು ಅವಶ್ಯವೆನಿಸುತ್ತದೆ. ಯಾಕೆಂದರೆ ಶಿಕ್ಷಣಕ್ಷೇತ್ರದಲ್ಲಿ ಇಷ್ಟೊಂದು ಸ್ಥಿತ್ಯಂತರಗಳು ನಡೆದಿರುವಾಗ ಕನ್ನಡಜನ ಸಂಪೂರ್ಣವಾಗಿ ಈ ದಿಸೆಯಲ್ಲಿ ನಿಷ್ಕ್ರಿಯರಾಗಿದ್ದರೇ? ಎಂಬ ಪ್ರಶ್ನೆ ಉದ್ಭವಿಸುವುದು ಸಹಜ.

---

೧೦. ಧಾರವಾಡಕರ. ರಾ.ಯ.: ಹೊಸಗನ್ನಡ ಸಾಹಿತ್ಯದ ಉದಯಕಾಲ ಪುಟ.೬೧.

ಕರ್ನಾಟಕವನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡುವುದಾದರೆ, ಇಲ್ಲಿ ಪಾಶ್ಚಾತ್ಯ ಸಂಪರ್ಕ ಬರುವ ಮೊದಲು ಎಲ್ಲ ಹಳ್ಳಿಗಳಲ್ಲಿಯೂ ಪ್ರಾಥಮಿಕ ಶಿಕ್ಷಣವನ್ನು ನೀಡುವ ಸಂಸ್ಥೆಗಳು ಮಠಗಳಾಗಿದ್ದವು. ಧೂಳಾಕ್ಷರ, ಕಡತ, ಹಸ್ತಪ್ರತಿಗಳ ಮುಖಾಂತರ ಮಕ್ಕಳಿಗೆ ಇಲ್ಲಿ ಓದು ಬರಹಗಳ ಪರಿಚಯವನ್ನು ಮಾಡಿಕೊಡಲಾಗುತ್ತಿತ್ತು. ಹಿರಿಯ ವಿದ್ಯಾರ್ಥಿಗಳು ತಮ್ಮ ಕಿರಿಯ ಸಹಪಾಠಿಗಳಿಗೆ ಪಾಠ ಹೇಳಿಕೊಡುವುದು ಒಂದು ವಿಶೇಷವಾಗಿತ್ತು. ತಂದೆ-ತಾಯಿಯರೇ ಕೆಲವೊಮ್ಮೆ ಮನೆಯಲ್ಲಿ ತಮ್ಮ ಮಕ್ಕಳಿಗೆ ತಿದ್ದಿ, ತೀಡಿ ಕಲಿಸಿದ ನಿದರ್ಶನಗಳೂ ಉಂಟು. ಇಲ್ಲಿ ಕಲಿಸುವ ರೀತಿ ಅತ್ಯಂತ ಪರಿಮಾಮಕಾರಿಯೂ ಸರಳವೂ ಆದುದಾಗಿತ್ತು. ಇದನ್ನು ಕಂಡು ಮುಂಬಯಿ ಸರಕಾರದ ಹಿರಿಯ ಅಧಿಕಾರಿಗಳಲ್ಲಿ ಒಬ್ಬನಾಗಿದ್ದ ಜಿ.ಎಲ್.ಪೆಂಡೆರಗಾಸ್ಟ ಎಂಬವನು "ಇಲ್ಲಿಯ ಶಾಲೆಗಳಲ್ಲಿ ಓದು, ಬರಹ, ಗಣಿತ - ಈ ಪ್ರಾಥಮಿಕ ವಿಷಯಗಳನ್ನು ಹೆಚ್ಚಿನ ವೆಚ್ಚವಿಲ್ಲದೆ ಕಲಿಸಲಾಗುತ್ತದೆ. ಸಾಮಾನ್ಯ ರೈತರು ಅಥವಾ ವ್ಯಾಪಾರಿಗಳು ಲೆಕ್ಕದಲ್ಲಿ ಇಷ್ಟೊಂದು ಚಾಕಚಕ್ಯತೆಯಿಂದ ವ್ಯವಹರಿಸುತ್ತಾರಲ್ಲ; ಅದೇ ಮಟ್ಟದ ನಮ್ಮ ದೇಶದ ಜನರಿಗಿಂತ ಇವರು ಈ ವಿಷಯದಲ್ಲಿ ಮೇಲ್ಮೆ ಪಡೆದವರೆಂದೇ ಹೇಳಬೇಕು"[೧೧] ಎಂದು (೧೮೨೧) ಉದ್ಗಾರವೆತ್ತಿದ್ದಾನೆ.

ತಪೋವನ, ಘಟಿಕಾಸ್ಥಾನ, ಮಠ, ದೇವಸ್ಥಾನ, ಗುರುಗೃಹ, ಪಾಠಶಾಲೆ ಇವುಗಳ ಮೂಲಕ ಪ್ರಾಚೀನಕರ್ನಾಟಕದ ಜನತೆ, ಶಿಕ್ಷಣ ಪಡೆಯುತ್ತಿದ್ದರೆಂಬುದಕ್ಕೆ ಘಟಿಕಾಸ್ಥಾನ ಮೊದಲಾದ ವ್ಯವಸ್ಥೆಯಲ್ಲಿ ಪ್ರೌಢಶಿಕ್ಷಣ ನಡೆಯುತ್ತಿದ್ದಿತೇ ಹೊರತು ಪ್ರಾಥಮಿಕ ಶಿಕ್ಷಣ ಸ್ಥಳೀಯ ಮಠಮಂದಿರಗಳಲ್ಲಿ ಜರಗುತ್ತಲಿದ್ದಿತು. "ಮಠಛಾತ್ರಾದಿನಿಲಯಂ" ಎಂಬ ಅಮರಕೋಶದ ಹೇಳಿಕೆ ವಿದ್ಯಾರ್ಥಿಗಳು ಓದುತ್ತಿದ್ದ ಕೇಂದ್ರವೇ ಮಠವೆಂದು ಸ್ಪಷ್ಟಪಡಿಸುತ್ತದೆ. ಬಹುಶಃ ಮಠದ ಮೂಲ ಪರಿಕಲ್ಪನೆಯೇ ವಿದ್ಯಾದಾನ, ವಿದ್ಯಾಪ್ರಸಾರವಾಗಿದ್ದು, ಅಲ್ಲಿ ಕ್ರಮೇಣ ಪುರೋಹಿತಶಾಯಿ ಬಲಿಷ್ಠವಾಗಿರಬಹುದೆನಿಸುತ್ತದೆ. ಅದೇನೇ ಇದ್ದರೂ ಕನ್ನಡ ಪ್ರಾಥಮಿಕ ಶಿಕ್ಷಣಕ್ಕೆ ಬಂದರೆ ವೀರಶೈವಮಠಗಳು ಈ ಕಡೆ ಹೆಚ್ಚು ಗಮನಕೊಟ್ಟದ್ದು ಕಂಡುಬರುತ್ತದೆ. ಕರ್ನಾಟಕದಲ್ಲಿ ಅದೂ ಧಾರವಾಡ ಜಿಲ್ಲೆಯ ಕುಂದಗೋಳ, ಸಂಶಿ, ಗುಡಗೇರಿ, ಸವಣೂರ, ಹತ್ತಿಮತ್ತೂರ, ಮುಂತಾದ ಊರುಗಳಲ್ಲಿ ಇಂಥ ವಿದ್ಯಾಕೇಂದ್ರಗಳಿದ್ದ ಬಗ್ಗೆ ಮಾಹಿತಿ ಸಿಗುತ್ತದೆ. ಯಥಾಶಕ್ತಿ ಶಿಕ್ಷಣ ನೀಡುವ ಕಾರ್ಯವನ್ನು ಇವು ಮಾಡುತ್ತಲೇ ಇದ್ದವು. ಅವುಗಳಿಗೆ ಅಯ್ಯನವರ ಶಾಲೆಗಳೆಂದು ಕರೆಯುತ್ತಿದ್ದರು. ಅವು ವಿಶೇಷವಾಗಿ ಮಠಗಳಲ್ಲಿ ನಡೆಯುತ್ತಿದ್ದುದರಿಂದ ಅವುಗಳಿಗೆ'ಸಾಲಿಮಠ'ಗಳೆಂದೂ ಕರೆಯುತ್ತಿದ್ದರು.[೧೨] ಇಂಥಲ್ಲಿ ವಿದ್ಯಾಬೋಧನೆ ಮಾಡುತ್ತಿದ್ದವರನ್ನು ಗುರು, ಅಯ್ಯನವರು ಎಂದು ಕರೆಯುವ ರೂಢಿಯಿತ್ತು, ಶಾಲೆಗಳನ್ನು ನಡೆಸುತ್ತಿದ್ದವರಿಗೆ 'ಸಾಲಿ' ಎಂದು ಅಡ್ಡಹೆಸರೂ ಬರುತ್ತಿತ್ತು.[೧೩]

---

೧೧. Survey of indigenous education in the province of Bombay. 1820-1830. Page.21.

೧೨. ಸಾಲಿ ರಾಮಚಂದ್ರರಾಯರ ಅಜ್ಜಂದಿರು ಶಿರಸಂಗಿಯಲ್ಲಿ ಶಾಲೆಯನ್ನು ನಡೆಸುತ್ತಿದ್ದುದರಿಂದ ಅವರಿಗೆ 'ಸಾಲಿ' ಎಂದು ಅಡ್ಡ ಹೆಸರು ಬಂದಿತು.

೧೩. 'ಸಾಲಿಮಠ' ಎಂಬ ಅಡ್ಡಹೆಸರುಗಳಿರುವುದು; ಡೆಪ್ಯೂಟಿ ಚೆನ್ನಬಸಪ್ಪನವರ ಬಾಲ್ಯದ ಗುರುಗಳು 'ಸಾಲಿಮಠ' ಶಿವರುದ್ರಯ್ಯನವರೆಂಬುದು ಗಮನಾರ್ಹ ಅಂಶಗಳಾಗಿವೆ.

ಈ "ಮಠಗಳು" ನಮ್ಮ ನಾಡಿನ ಶಿಕ್ಷಣ, ಸಂಸ್ಕೃತಿಗಳ ಬೆನ್ನೆಲುಬುಗಳಾಗಿದ್ದವು".[೧೪] ಇಲ್ಲಿಯ ಬೋಧಕವರ್ಗ ಅಷ್ಟೊಂದು ವಿದ್ವಾಂಸರಾಗಿರದಿದ್ದರೂ ಅಗತ್ಯಕ್ಕೆ ತಕ್ಕಷ್ಟು ಓದಿಕೊಂಡವರಾಗಿದ್ದರು. ಜ್ಯೋತಿಷ್ಯ, ಔಷಧೋಪಚಾರಗಳ ಬಗೆಗೂ ಅವರಿಗೆ ತಿಳುವಳಿಕೆಯಿದ್ದಿತು. ಜನರನ್ನು ತಮ್ಮೆಡೆಗೆ ಸೆಳೆಯಲು ಇದರಿಂದ ಅಯ್ಯನವರಿಗೆ ತುಂಬಾ ಅನುಕೂಲವಾಗಿತ್ತೆಂಬುದೂ ಅಷ್ಟೇ ನಿಜ. ಇಂಥ ಶಾಲೆಗಳಲ್ಲಿ ಓದು, ಬರಹ, ಗಣಿತ ವಿಷಯಗಳನ್ನು ಕಲಿಸುತ್ತ ಹೆಚ್ಚಿನ ಗಮನವನ್ನು ಸುಂದರ ಹಾಗೂ ಸ್ಪಷ್ಟ ಅಕ್ಷರಗಳನ್ನು ಬರೆಯಲು ಕೊಡುತ್ತಿದ್ದರು. 'ಕಿತ್ತೆ' ಬರೆಸುವುದು, ಮನೆತನದ ಖರ್ಚುವೆಚ್ಚದ ವಿಷಯವಾಗಿ ಲೆಕ್ಕಗಳನ್ನು ಕಲಿಸುವುದು ತಮ್ಮಹೊಣೆ ಎಂದು ಇವರು ಭಾವಿಸಿದ್ದರು. ಹೀಗೆ ಶಿಕ್ಷಣ ಪದ್ಧತಿ ಸಾಗಿ ಬರುವಲ್ಲಿ ಮರಾಠಿ ಪ್ರವೇಶದಿಂದಾಗಿ ಆ ಭಾಷೆಯ ಶಿಕ್ಷಣಬೋಧೆ ಇಲ್ಲಿ ಪ್ರಾರಂಭವಾಯಿತು. ಈ ಶಿಕ್ಷಕರಿಗೆ 'ಪಂತೋಜಿ'ಗಳೆನ್ನುತ್ತಿದ್ದರು. ಮುಂದೆ ಕನ್ನಡ ಬೋಧಕರಿಗೂ ಈ ಹೆಸರು ರೂಢಿಗೊಂಡಿದ್ದಿತು. ಈಗ ಮಠದ ಅಯ್ಯನವರ ಶಾಲೆಗಳಲ್ಲದೆ, ಅಕ್ಷರ ಜೀವಿಗಳಾಗಿ ಕೆಲವರು ಸಾರ್ವಜನಿಕರೂಪದ ಶಾಲೆಗಳನ್ನು ನಡೆಸುತ್ತಿದ್ದರು. ಇವುಗಳಿಗೆ 'ಗಾವಠಿ' ಶಾಲೆಯೆನ್ನುತ್ತಿದ್ದರು.

ಈ ಶಿಕ್ಷಣಕ್ರಮದಲ್ಲಿ ಧೂಳಾಕ್ಷರ, ಬಿಡಿಅಕ್ಷರ, ದೊಡ್ಡ ಅಕ್ಷರಗಳನ್ನು ಕಲಿಸುವುದರ ಜೊತೆಗೆ ಧಾರ್ಮಿಕ ಶಿಕ್ಷಣವನ್ನೂ ಕೊಡಲಾಗುತ್ತಿತ್ತು. ಧೂಳಾಕ್ಷರಗಳನ್ನು ಬರೆಯುವ ರೀತಿಗೆ ಮರಾಠಿಯಲ್ಲಿ ಬಾರಾಖಡಿ (ಹನ್ನೆರಡು ಅಕ್ಷರ) ಎನ್ನುತ್ತಿದ್ದರು. ಇಲ್ಲಿ ಕಲಿಸುವ ಉಪಾಧ್ಯಾಯರಿಗೆ ಹುಡುಗರು ತಿಂಗಳಿಗೆ ಎರಡು ಆಣೆಯಿಂದ ನಾಲ್ಕು ಆಣೆಯ ವರೆಗೆ'ಫೀ' ಕೊಡುತ್ತಿದ್ದರು. ಇದಲ್ಲದೆ 'ಹಲಗೆ' (ಕರಿಹಲಗೆ) ಪೂಜೆದಿವಸ (ಚತುರ್ದಸಿ) ಒಂದು ದುಡ್ಡು, ಸಂತೆಯ ದಿವಸ ಕೆಲವು ಕಾಳುಕಡಿಗಳೂ ಶಿಕ್ಷಕರಿಗೆ ದೊರಕುತ್ತಿದ್ದವು. ಕೆಲವು ಶಿಕ್ಷಕರು ವಿದ್ಯಾರ್ಥಿಗಳ ಮನೆಗೆ ವಾರಹಂಚಿಕೊಂಡು ಊಟಕ್ಕೆ ಹೋಗುತ್ತಿದ್ದ ಉದಾಹರಣೆಗಳೂ ಉಂಟು.

ಈ ಕಾಲಘಟ್ಟದ ಶೈಕ್ಷಣಿಕ ಸ್ಥಿತಿ-ಗತಿಗಳನ್ನು ಇನ್ನಷ್ಟು ನಿಖರವಾಗಿ ಪೃಥಕ್ಕರಿಸಿ ನೋಡುವುದಾದರೆ, ಸಂಸ್ಕೃತನಿಷ್ಠೆಯ ಆರ್ಯಮನೋಧರ್ಮ, ಕನ್ನಡನಿಷ್ಠೆಯ ದ್ರಾವಿಡ ಮನೋಧರ್ಮ - ಹೀಗೆ ಎರಡು ಮನೋಧರ್ಮಗಳು ತಮ್ಮ ತಮ್ಮ ಪರಂಪರೆಯನ್ನು ಪೋಷಿಸಿಕೊಂಡು ಬಂದಂತೆ ತೋರುತ್ತದೆ. ಈ ಕನ್ನಡನಿಷ್ಠ-ದ್ರಾವಿಡನಿಷ್ಠ ಮನೋಧರ್ಮಕ್ಕೆ ವಿಶೇಷ ಇಂಬು ದೊರೆತುದು ವೀರಶೈವ ಸಮಾಜದಲ್ಲಿ. ಇದಕ್ಕೆ ಡಾ. ಕಲಬುರ್ಗಿಯವರು ಕೊಡುವ ಕಾರಣ ಹೀಗಿದೆ: ೧೭ನೇ ಶತಮಾನದಲ್ಲಿ ಪೇಶ್ವೆಯರು ಕರ್ನಾಟಕದಾಡಳಿತ ಸೂತ್ರವನ್ನು ಕೈವಶ ಮಾಡಿಕೊಳ್ಳುವುದೇ ತಡ, ನಿಂತಕಾಲ ಮೇಲೆಯೇ ಕನ್ನಡವನ್ನು ಕೈಬಿಟ್ಟು ಮರಾಠಿಯನ್ನು ಕೈಗೆತ್ತಿಕೊಂಡರು. ಪ್ರತಿಷ್ಠಿತ ಬ್ರಾಹ್ಮಣ ಕುಟುಂಬಗಳಲ್ಲಿ ಮರಾಠಿ ಮನೆಮಗನಂತೆ; ಕನ್ನಡ ಮಲಮಗನಂತೆ ಬದುಕುವದನ್ನು ಈಗಲೂ ನೋಡಬಹುದು. ಮುಂದೆ ೧೯ನೇ ಶತಮಾನದಲ್ಲಿ ಆಡಳಿತ ಸೂತ್ರ ಇಂಗ್ಲೀಷರ ಹಸ್ತಗತವಾದಕೂಡಲೇ ಮನೆತುಂಬಿದ ಮರಾಠಿಯನ್ನು ಉಪೇಕ್ಷಿಸಿ ಇಂಗ್ಲೀಷನ್ನು ಮನೆ ತುಂಬಿಸಿಕೊಂಡರು. ಹೀಗೆ ಕನ್ನಡವನ್ನು ಕೈಬಿಟ್ಟು ಮರಾಠಿಯನ್ನೂ, ಮರಾಠಿಯನ್ನು ಕೈಬಿಟ್ಟು ಇಂಗ್ಲೀಷನ್ನೂ ಸ್ವಾಗತಿಸಿದ ಬ್ರಾಹ್ಮಣರು ಅವೆರಡರ ಋಣತೀರಲು ಕನ್ನಡ ಚಳುವಳಿ ಪ್ರಾರಂಭವಾಗುವಲ್ಲಿ ಧಾವಿಸಿಬಂದು ಮತ್ತೆ ಮುಂಚೂಣಿಯಲ್ಲಿ ನಿಂತುಕೊಂಡರು. ಭಾಷೆಯ ಬಗ್ಗೆ ತೋರುವ ಈ ಸಮಯಾನುವರ್ತನೆ ಭಾವವನ್ನು ನೋಡಿದರೆ ಪ್ರಾಚೀನ ಕರ್ನಾಟಕದ ಬ್ರಾಹ್ಮಣ ಜನಾಂಗ ಸಂಸ್ಕೃತವನ್ನು ಬಿಟ್ಟರೆ

೧೪. ಬೆನ್ನೂರ, ಚ.ಸ. : ಕನ್ನಡದ ದೀಪ. ಪುಟ. ೧೨೦.

ಮಿಕ್ಕ ಭಾಷೆಗಳ ಕೂಡ ದುರ್ಬಲವಾದ (ಪ್ರಯೋಜನಾತ್ಮಕವಾದ) ಸಂಬಂಧವನ್ನು ಇಟ್ಟುಕೊಂಡುದು ಇತಿಹಾಸದುದ್ದಕ್ಕೂ ಸ್ಪಷ್ಟವಾಗುತ್ತದೆ".[೧೫]

ಸಾರ್ವಜನಿಕವಾಗಿ ಕನ್ನಡ ಮಾಧ್ಯಮದಲ್ಲಿ ಪುರಾಣ, ಶಿವಕೀರ್ತನ, ಪ್ರವಚನಗಳನ್ನು ಹಮ್ಮಿಕೊಳ್ಳುವುದರ ಮೂಲಕ, ಮಕ್ಕಳ ವಿದ್ಯಾಭ್ಯಾಸಕ್ಕಾಗಿ 'ಸಾಲಿಮಠ'ಗಳನ್ನು ನಡೆಸುವ ಮೂಲಕ ಕನ್ನಡಭಾಷೆ-ಸಂಸ್ಕೃತಿಗಳನ್ನು ರಕ್ಷಿಸಿಕೊಂಡು ಬಂದ ಶ್ರೇಯಸ್ಸು ನಿಸ್ಸಂದೇಹವಾಗಿ ವೀರಶೈವಸಮಾಜಕ್ಕೆ ಸಲ್ಲುತ್ತದೆ. ೧೮೩೦ರ ವರೆಗೆ ಪ್ರತಿಯೊಂದು ವೀರಶೈವ ಮಠವೂ ಶಾಲೆಯೇ ಆಗಿರುತ್ತಿತ್ತೆಂದೂ; ಪ್ರಾಯಶಃ ಕನ್ನಡವನ್ನು ಆ ಕಾಲದಲ್ಲಿ ಉಳಿಸಿದವರು ವೀರಶೈವರೆಂದೂ, ೧೮೮೦ರ ವರೆಗೆ ಪ್ರತಿಯೊಂದು ಹಳ್ಳಿಯಲ್ಲಿಯೂ ವೀರಶೈವರದೊಂದು ಮಠಶಾಲೆಯು ಕಣ್ಣಿಗೆ ಬೀಳುತ್ತಿತ್ತೆಂದೂ ಸರ್ ನಾರಾಯಣ ಚಂದಾವರಕರ ಹೇಳಿದ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.[೧೬] ಇದೇ ಅಭಿಪ್ರಾಯವನ್ನು ಪ್ರಮಾಣೀಕರಿಸುವಂತಿರುವ ಇನ್ನೆರಡು ಅಭಿಪ್ರಾಯಗಳೆಂದರೆ, ಒಂದು ಶ್ರೀ ವೆಂಕಟ ರಂಗೋಕಟ್ಟಿಯವರದು, ಮತ್ತೊಂದು ಡಾ. ಫ್ಲೀಟರದು. ಕಟ್ಟಿಯವರು ಒಂದು ವರದಿಯಲ್ಲಿ "The study of Kannada was confined to a few lingayat priests"[೧೭] ಎಂದು ಹೇಳಿದ್ದರೆ, ಫ್ಲೀಟರು, "ಉತ್ತರದಿಕ್ಕಿನಿಂದ ಗಡಿಗಡಿಗೆ ಆಕ್ರಮಣ ಮಾಡುತ್ತಿದ್ದ ಮರಾಠರ ಅವಾಂತರದಲ್ಲಿ ಇತ್ತೀಚೆಗೆ ಅಂದವಾದ ಕನ್ನಡ ಭಾಷೆಯನ್ನು ಉಳಿಸಿದ ಕೀರ್ತಿ ಬಹಳ ಮಟ್ಟಿಗೆ ವೀರಶೈವರಿಗೆ ಸಲ್ಲುತ್ತದೆ"[೧೮] ಎಂದಿದ್ದಾರೆ.

ಎಂಥ ವಿಷಮ ಪರಿಸ್ಥಿತಿಯಲ್ಲೂ ಕನ್ನಡದದೀಪ ಆರಿಹೋಗದಂತೆ ನಿರಂತರವಾಗಿ ಪ್ರೀತಿ ಎಚ್ಚರಗಳ ರಕ್ಷಾರವಚ ತೊಡಿಸಿ ಅದನ್ನು ಕಾಪಾಡಿಕೊಂಡು ಬರುವ ಪ್ರಾತಃಸ್ಮರಣೀಯ ಕಾರ್ಯವನ್ನು ವೀರಶೈವಸಮಾಜ ಮಾಡಿತೆಂಬುದನ್ನು ನೋಡುವಾಗ ಆ ಸಮಾಜದ ಭಾಷಾನಿಷ್ಠೆ ಎದ್ದು ಕಾಣುತ್ತದೆ. ಈ ನಿಷ್ಠೆ ಆವೊತ್ತಿನ ಸಾಮಾಜಿಕ ಸಂದರ್ಭದಲ್ಲಿ'ಕನ್ನಡಭಾಷೆ' ಜೀವ ಹಿಡಿದುಕೊಂಡಿರಲು ಆಸರೆಯಾಗಿತ್ತೇ ವಿನಃ ಅನ್ಯಭಾಷಾ ದಬ್ಬಾಳಿಕೆಯನ್ನು ಮುರಿದು ಮೇಲೇಳುವಷ್ಟು ಸಶಕ್ತವಾಗಿರಲಿಲ್ಲ. ಬಹುಸಂಖ್ಯಾತ ಜನ 'ಅಧಿಕಾರಶಾಹಿ'ಯನ್ನು ಮೆಚ್ಚಿಸಲು ತಮ್ಮ ಸ್ವಂತಿಕೆಯನ್ನು ಮರೆತು ಬದುಕುತ್ತಿರುವ ಸನ್ನಿವೇಶದಲ್ಲಿ ಅಲ್ಪಸಂಖ್ಯಾತವಾಗಿದ್ದ ವೀರಶೈವಸಮಾಜ ಮಾತೃಭಾಷೆಯ ಬಗ್ಗೆ ತೋರಿದ ಕಾಳಜಿ ಗುಣಾತ್ಮಕವಾಗಿ ಅತ್ಯಂತ ಹಿರಿದಾದುದೆಂಬುದನ್ನು ಸ್ಮರಿಸುತ್ತಲೇ, ಆ ಸಮಾಜದ ಅಸಹಾಯಕತೆ ಮತ್ತು ಮಿತಿಗಳನ್ನೂ ಗುರುತಿಸಬೇಕಾಗುತ್ತದೆ. "೧೯ನೇಯ ಶತಮಾನ ಕರ್ನಾಟಕದಲ್ಲಿ, ಬ್ರಾಹ್ಮಣರ ಪ್ರಾಬಲ್ಯದ ಕಾಲ. ದಕ್ಷಿಣದಲ್ಲಿ ಮೈಸೂರು ಅರಸರ ಪ್ರೋತ್ಸಾಹದಿಂದ ಶ್ರೀ ವೈಷ್ಣವರು, ಉತ್ತರದಲ್ಲಿ ಪೇಶ್ವೆ ಅರಸರ ಪ್ರೋತ್ಸಾಹದಿಂದ ಮಾಧ್ವ, ಸ್ಮಾರ್ತ ಬ್ರಾಹ್ಮಣರು ಪ್ರಧಾನರಾದರು. ಇತರ ಸಮಾಜಗಳಂತೆ ವೀರಶೈವರೂ ಅಪ್ರಧಾನರಾದರು".[೧೯] ಕನ್ನಡ ಭಾಷೆಗೆ ನಿಷ್ಠವಾಗಿದ್ದ ವೀರಶೈವ ಸಮಾಜ ಹೀಗೆ ಅಪ್ರಧಾನವಾಗಿ ಕ್ಷೀಣಿಸಿದಾಗ ಸಹಜವಾಗಿ ಆ ಭಾಷೆಯೂ ಕ್ಷೀಣಿಸುವಂತಾಯಿತು.

---

೧೫. ಕಲಬುರ್ಗಿ ಎಂ.ಎಂ. : ಕನ್ನಡಿಗರ ಮಾತೃಭಾಷಾ ಪ್ರಜ್ಞೆಯ ಇತಿಹಾಸ. ಮಾರ್ಗ ಸಂಪುಟ-೧

೧೬. ಜಯಕರ್ನಾಟಕ : ವೀರಶೈವರೂ, ರಾಜಕಾರಣವೂ, ಸಂ೨, ಸಂಚಿಕೆ ೭, ಪುಟ. ೪೭೨. .

೧೭. ಹಂದ್ರಾಳ ಮ.ಗು. : ಕನ್ನಡದ ದೀಪ. ಪುಟ. ೨೪.

೧೮. Dynasties of kanarese Districts, p. 477.

೧೯. ಕಲಬುರ್ಗಿ ಎಂ.ಎಂ.: ಮಾರ್ಗಸಂಪುಟ-೧. ಪುಟ. ೭೨೨.

ಜನಸಾಮಾನ್ಯರ ಮಟ್ಟದಲ್ಲಿ ಕನ್ನಡಶಿಕ್ಷಣದ ಸ್ಥಿತಿ ಇದಾಗಿದ್ದರೆ, ಅಧಿಕಾರಶಾಹಿಗಳ ಆಡಳಿತಾತ್ಮಕ ಮಟ್ಟದಲ್ಲಿ ಅದರ ಚಿತ್ರ ಏನಿತ್ತೆಂಬುದನ್ನು ಈ ಸಂದರ್ಭದಲ್ಲೇ ನೋಡುವುದು ಸಮಂಜಸವೆನಿಸುತ್ತದೆ. ಎರಡುಸಾವಿರ ವರ್ಷಗಳ ಪರಂಪರೆಯುಳ್ಳ ಕನ್ನಡನಾಡನ್ನು ಪ್ರಾಚೀನ ಅರಸರು ಮೊದಲುಮಾಡಿ ಬ್ರಿಟಿಶ್ ಅಧಿಕಾರಶಾಹಿಗಳ ವರೆಗೆ ಆಳುವಾಗ; ಆಡಳಿತದಲ್ಲಿ ಕನ್ನಡ ಭಾಷೆಯ ಬಗ್ಗೆ ಅನುಸರಿಸುತ್ತ ಬಂದ ರೀತಿಗಳು ಗಮನಾರ್ಹವಾಗಿವೆ. ಡಾ. ಕಲಬುರ್ಗಿಯವರ ಮಾತುಗಳನ್ನೇ ಸಂಗ್ರಹಿಸಿ ಹೇಳುವುದಾದರೆ ಪ್ರಾಚೀನ ಕರ್ನಾಟಕದಲ್ಲಿ ಬೆಳೆದು ಬಂದವು; ವೈದಿಕರ ಅಗ್ರಹಾರಸಂಸ್ಕೃತಿ, ಅವೈದಿಕರ ದೇವಾಲಯಸಂಸ್ಕೃತಿ. ಒಂದು ಊರನ್ನು ಅಗ್ರಹಾರವಾಗಿಸುವುದೆಂದರೆ, ಬ್ರಾಹ್ಮಣ ವ್ಯಕ್ತಿ ಅಥವಾ ವ್ಯಕ್ತಿಗಳಿಗೆ ದಾನ ನೀಡುವುದು. ಒಂದು ದೇವಾಲಯಕ್ಕೆ ಕಾಣಿಕೆ ಸಲ್ಲಿಸುವುದೆಂದರೆ, ಸಮೂಹಕ್ಕೆ ದಾನ ನೀಡುವುದು. ಹೀಗಾಗಿ ಈ ಸಂದರ್ಭದಲ್ಲಿ ವೈಯಕ್ತಿಕ ದಾಖಲೆ ಎಂಬಂತೆ ಅಗ್ರಹಾರಗಳ ವಿಷಯದಲ್ಲಿ ತಾಮ್ರಶಾಸನಗಳೂ, ದೇವಾಲಯ ವಿಷಯವಾಗಿ ಶಿಲಾ ಶಾಸನಗಳೂ ಹುಟ್ಟುತ್ತಿದ್ದವು. ಬ್ರಾಹ್ಮಣರ ವೈಯಕ್ತಿಕ ದಾಖಲೆಗಳು ಸಾಮಾನ್ಯವಾಗಿ ಸಂಸ್ಕೃತದಲ್ಲಿದ್ದರೂ ಭೂಮಿ-ಸೀಮೆಗಳ ವಿವರ ಬರೆಯುವಾಗ "ಅಸ್ಯಸೀಮಾ ಕರ್ನಾಟಕೇ ಪ್ರವಕ್ಷ್ಯಾಮೀ" "ಪ್ರಾಕೃತಭಾಷಾಯಾ ವರ್ಣ್ಯಾನ್ಯೇತಾನಿದತ್ತಾನಿ"[೨೦] ಎಂದು ಹೇಳಿ ಕನ್ನಡದಲ್ಲೇ ಬರೆಯುತ್ತಿದ್ದುದು ಕನ್ನಡ, ಆಡಳಿತ ಭಾಷೆಯಾಗಿದ್ದುದರ ದ್ಯೋತಕವಾಗಿದೆ. ಸಾಮೂಹಿಕ ದಾಖಲೆಗಳಾದ ಶಿಲಾಶಾಸನಗಳು ಪೂರ್ತಿ ಕನ್ನಡದಲ್ಲಿಯೇ ಬರೆಯಲ್ಪಡುತ್ತಿದ್ದವು. ಹೀಗೆ ಕನ್ನಡವು ಆಡಳಿತದಲ್ಲಿ ಮೊದಲಿನಿಂದಲೂ ಬಳಕೆಯಲ್ಲಿದ್ದಿತು. ಗ್ರಾಮಸೀಮೆಯನಿರ್ಧಾರ, ತೆರಿಗೆಯನ್ನುವಿಧಿಸುವ ಸಂದರ್ಭ, ನ್ಯಾಯತೀರ್ಮಾನದ ಪ್ರಸಂಗಗಳಲ್ಲಿ ಕೂಡ; ಕನ್ನಡಪದಗಳನ್ನು ಬಳಸುತ್ತಿದ್ದ ಬಗ್ಗೆ ಸಾಕಷ್ಟು ನಿದರ್ಶನಗಳಿವೆ.[೨೧]

ಇನ್ನೂ ಕುತೂಹಲಕಾರಿ ಸಂಗತಿಯೆಂದರೆ, ಬಹಮನೀ ಸುಲ್ತಾನರ ಆಳಿಕೆಗೆ ಒಳಪಟ್ಟಿದ್ದ ಕನ್ನಡ ಪ್ರದೇಶಗಳಲ್ಲಿ ಕನ್ನಡವೇ ಆಡಳಿತ ಭಾಷೆಯಾಗಿತ್ತು. ಈ ರಾಜ್ಯ ಸ್ಥಾಪನೆಯಾಗುವ ಪೂರ್ವದಲ್ಲಿ (ಕ್ರಿ.ಶ. ೧೩೪೭) ಸ್ಥಳೀಯ ಮುಸ್ಲೀಮರ ಮಾತೃಭಾಷೆ ಕೂಡ ಕನ್ನಡವೇ ಆಗಿತ್ತು. ಗೋವೆಯನ್ನು ಆಳಿದ ಮತ್ತು ಕರ್ನಾಟಕದ ಪ್ರಮುಖ ರಾಜಮನೆತನಗಳಲ್ಲಿ ಒಂದಾದ ಕದಂಬರ ಕಾಲದಲ್ಲಿ ಮೊದಮೊದಲು ಕನ್ನಡವೇ ಆಡಳಿತ ಭಾಷೆಯಾಗಿತ್ತೆಂದು ತಿಳಿಯುತ್ತದೆ. "ಕೊಂಕಣೀ ಭಾಷೆಯಲ್ಲಿರುವ ಅನೇಕ ಕಾಗದ ಪತ್ರಗಳು ಕನ್ನಡ ಲಿಪಿಯಲ್ಲಿರುವುದು ಗೋವಾ ಪತ್ರಾಗಾರದಲ್ಲಿನ ಕೆಲವು ದಾಖಲೆಗಳಿಂದ ತಿಳಿಯುತ್ತದೆ".[೨೨]

---

೨೦. K.I.I. ನಂ.೩ ಬಾದಾಮಿ - ಬಿಜಾಪುರ ಜಿಲ್ಲೆ (ಕ್ರಿ.ಶ.೬೯೯).

೨೧. ಕೆಲವು ಅಧಿಕಾರಸೂಚಕ ಪದಗಳು: ಪ್ರಧಾನ, ಮಹಾಪ್ರಧಾನ, ಸಂಧಿವಿಗ್ರಹಿ, ಗೂಢಚಾರಿ, ತಂತ್ರಪಾಲ, ದಂಡನಾಯಕ ಮಹಾಸಾಮಂತಾಧಿಪತಿ, ವಿಷಯಾಧಿಪತಿ, ಮಹಾಮಂಡಲೇಶ್ವರ, ನಗರಾಧ್ಯಕ್ಷ, ಗಾವುಂಡ, ತಳಾರ, ಊರೊಡೆಯ, ಇತ್ಯಾದಿ.
ಕಾರ್ಯಕ್ಷೇತ್ರವನ್ನು ಸೂಚಿಸುವ ಪದಗಳು: ವೆರ್ಗಡೆ(ಹೆಗ್ಗಡೆ) ಮನೆವೆರ್ಗಡೆ, ಸುಂಕವೆರ್ಗಡೆ, ಪನ್ನಾಯದ ವೆರ್ಗಡೆ, ಆನೆಸಾಹಣವೆರ್ಗಡೆ, ಬಾಣಸವೆರ್ಗಡೆ, ಇತ್ಯಾದಿ.
ಚುನಾಯಿತ ಮುಖಂಡರನ್ನು ಸೂಚಿಸುವ ಪದಗಳು: ಪ್ರಥಮರು, ನಕರರು, ಮುಮ್ಮುರಿ, ದಂಡರು, ಉಭಯನಾನಾದೇಶಿಗಳು, ವಡ್ಡವ್ಯವಹಾರಿ, ಪಟ್ಟಣಸ್ವಾಮಿ, ಪಟ್ಟಣಶೆಟ್ಟಿ, ಪೃಥ್ವಿಶೆಟ್ಟಿ, ಇತ್ಯಾದಿ.
ತೆರಿಗೆ ಸೂಚಕ ಪದಗಳು: ಪನ್ನಾಯ, ಬತ್ತಾಯ, ದಂಡಾಯ, ದಸವಂದ ಕುಳಿಯಸುಂಕ, ದವಸಾಯದಸುಂಕ, ನೀರುಣಸುಂಕ, ತಿಪ್ಪೆಸುಂಕ, ಮದುವೆಸುಂಕ, ಸೂಳೆವಳಪಣ, ಸಂತೆವಣ, ಹಂದರವಣ, ಕುಂಬಾರದೆರೆ, ಗಾಣದೆರೆ, ಅಗಸದೆರೆ, ಮಗ್ಗದೆರೆ, ಬಂಡಿದೆರೆ, ಇತ್ಯಾದಿ.

೨೨. ಬಣಕಾರ ಮಹದೇವ: ಆಂಗ್ಲರ ಆಡಳಿತದಲ್ಲಿ ಕನ್ನಡ – ಪುಟ, ೬೯.

ಕನ್ನಡ ಪ್ರದೇಶಗಳು ಮರಾಠಿಯರ ಆಧೀನಕ್ಕೆ ಬಂದಾಗ ಆ ಭಾಗದ ಆಡಳಿತ ವ್ಯವಹಾರಗಳಲ್ಲಿ ಹೆಚ್ಚಾಗಿ ಕನ್ನಡವೇ ಬಳಕೆಯಾಗುತ್ತಿತ್ತು. ಹದಿನೈದರಿಂದ ಹದಿನೆಂಟನೆಯ ಶತಮಾನಕ್ಕೆ ಸೇರಿದ ಲಕ್ಷ್ಮೇಶ್ವರ ದೇಸಾಯರಿಗೆ ಸಂಬಂಧಪಟ್ಟ ಅನೇಕ ಕಾಗದ ಪತ್ರಗಳು ಕನ್ನಡದಲ್ಲಿವೆ. ಮರಾಠಿಯಲ್ಲಿ ಇವುಗಳನ್ನು 'ರುಮಾಲು'ಗಳೆಂದು ಕರೆಯುತ್ತಿದ್ದುದಾಗಿ ತಿಳಿದು ಬರುತ್ತದೆ. "ಟಿಪ್ಪು ಮತ್ತು ಹೈದರ್ ಅವರು ಶೃಂಗೇರಿ ಮಠದ ಶ್ರೀ ಶಂಕರಾಚಾರ್ಯರಿಗೆ ಬರೆದ ನಾಲ್ವತ್ತಕ್ಕಿಂತಲೂ ಹೆಚ್ಚು ಕಾಗದ ಪತ್ರಗಳು ಕನ್ನಡ ಭಾಷೆಯಲ್ಲಿವೆ ಎಂದು ತಿಳಿದು ಬಂದಿದೆ".[೨೩]

ಹೀಗೆ ಬ್ರಿಟಿಶಪೂರ್ವ ಆಡಳಿತೆಯಲ್ಲಿ ಕನ್ನಡಬಳಕೆಯು ಸಾಕಷ್ಟು ನಡೆಯುತ್ತಿತ್ತೆಂಬುದನ್ನು ಪ್ರಸ್ತುತ ವಿವರಗಳು ಸಾಬೀತು ಪಡಿಸುತ್ತವೆ. ಹೀಗಿದ್ದು ಆಡಳಿತದಲ್ಲಿ ಇಂಗ್ಲೀಷ ತಲೆಹಾಕಲು ಪ್ರಾರಂಭಿಸಿತು. "ದೇಶಿಯರ ಮಾತೃಭಾಷೆಯ ಬೆಳವಣಿಗೆಗೆ ಇಂಗ್ಲೀಷ ಮಾರಕವಾಗುತ್ತದಲ್ಲದೆ ಇಂಗ್ಲೀಷ ಮಾದರಿಗಳನ್ನು ಅನುಕರಿಸುವ ಸೇವಾ ಮನೋವೃತ್ತಿಯನ್ನು ಬೆಳೆಸಿಕೊಳ್ಳುತ್ತಾರೆ"[೨೪] ಎಂಬ ಟ್ರೈಟ್ಲರನ ಅಭಿಪ್ರಾಯವಾಗಲೀ, "ಪ್ರಾದೇಶಿಕ ಭಾಷೆಗಳು ಈ ದೇಶದ ಜೀವಂತ ಭಾಷೆಗಳು. ಇಂಗ್ಲೀಷ ಕೆಲವೇ ಜನರ ಕಲಿಕೆಯ ಮತ್ತು ಪ್ರಗತಿ ಮಾಧ್ಯಮವಾಗಿದೆ. ಆದರೆ ಬಹಳಷ್ಟು ಜನರಿಗೆ ಅದು ಅನ್ಯಭಾಷೆಯೇ ಆಗಿದ್ದು, ಅವರು ಮಾತನಾಡಲು ಬಾರದವರೂ, ಕೇಳರಿಯದವರೂ ಆಗಿದ್ದಾರೆ"[೨೫] ಎಂಬ ಲಾರ್ಡಕರ್ಜನ್‌ನ ಅಭಿಮತವಾಗಲೀ ಒಂದು ಪ್ರದೇಶದ ಮಾತೃಭಾಷೆಯನ್ನು ಕಡೆಗಣಿಸಿ ಅದರ ಸ್ಥಾನದಲ್ಲಿ ಅನ್ಯಭಾಷೆಯನ್ನು ಆಡಳಿತದಲ್ಲಿ ಹೇರುವುದರಿಂದಾಗುವ ಅಪಾಯವನ್ನು ಸ್ಪಷ್ಟಪಡಿಸುತ್ತವೆ. ಹೀಗಿದ್ದೂ ಅನಿವಾರ್ಯವೆಂಬಂತೆ ಉರ್ದು-ಪಾರ್ಸಿ ಪದಗಳು, ಮರಾಠಿ ಪದಗಳು, ಆಮೇಲೆ ಇಂಗ್ಲೀಷ ಪದಗಳು ತೂರಿ ಬಂದು ಆಡಳಿತಾತ್ಮಕ ಕನ್ನಡಭಾಷೆಯ ಶಯ್ಯೆ ಕೆಟ್ಟುಹೋಯಿತು. ಮುತ್ತು-ಮೆಣಸು ಪವಣಿಸಿದ ರೀತಿಯಲ್ಲಿ ಕನ್ನಡ ವಾಕ್ಯಗಳು ಏರ್ಪಡುತ್ತಿದ್ದವು.

"ನಿಮ್ಮ ನಿಮ್ಮ ಗ್ರಾಮದಲ್ಲಿ ನೀವು ಹೀಂಗ ಖಬರದಾರಿ ಇಡಬೇಕಲ್ಲಾ. ಪ್ರತಿ ದಿವ್ಸ ಯಾವ ಜನರು ನಿಮ್ಮ ಊರಿಂದ ಯಾವ ಯಾವ ಗ್ರಾಮಕ್ಕೆ ಏನು ಕೆಲ್ಸದ ದೆಸೆಯಿಂದ ಹೋಗುತ್ತಾರೆ, ಯಾವ ಯಾವ ಕಡೆಯಿಂದ ನಿಮ್ಮ ಊರಿಗೆ ಯಾವ ಜನರು ಯಾರ ಮನಿಗೆ ಬರುತ್ತಾರೆ, ಎಷ್ಟು ದಿವಸ ಇರುತ್ತಾರೆ, ಯಾತರ ದಶೀಂದಾ ಬಂದಿರುತ್ತಾರೆ, ಯಿದರ ಬದಲು ತಾಲಾಷಿಯಿಡಬೇಕು. ಗ್ರಾಮದಲ್ಲಿ ಹೆಚ್ಚು ಸಂಶಯಕ್ಕೊಳಗಾದವರು ಗ್ರಾಮಬಿಟ್ಟು ಹೋಗದ ಹಾಗೆ ಮತ್ತು ಹೋಗಲೇಬೇಕಾದ ಸಂದರ್ಭಗಳಲ್ಲಿ ಎಲ್ಲಿಗೆ, ಎಷ್ಟು ದಿನ ಇತ್ಯಾದಿ ವಿವರಗಳನ್ನು ಸಂಗ್ರಹಿಸಿ ಇಡಲು ಮತ್ತು ಮೇಲಧಿಕಾರಿಗಳಿಗೆ ವಿವರಗಳನ್ನು ವರದಿ ಮಾಡಲು ಸಂಬಂಧಿಸಿದ ಅಧಿಕಾರಿಗಳಿಗೆ ಎಚ್ಚರಿಕೆ ನೀಡಿದೆ. ಇದರಲ್ಲಿ ಅಂತರ ಜರವಾದಲ್ಲಿ ಎಷ್ಟು ಮಾತ್ರಕ್ಕೂ ಕ್ಷಮಾ ಆಗಲಾರದು"[೨೬] ಇಂಥ ವಾಕ್ಯಗಳೇ ಅಂದು ರೂಪುಗೊಳ್ಳುತ್ತಿದ್ದವು. ಹೀಗಾಗಿ ಶಬ್ದಗಳನ್ನು

---

೨೩. ಬಣಕಾರ ಮಹದೇವ: ಅಂಗ್ಲರ ಆಡಳಿತದಲ್ಲಿ ಕನ್ನಡ. ಪುಟ. ೮೧.

೨೪. ಚಟರ್ಜಿ ಕೆ.ಕೆ.: ಇಂಗ್ಲೀಷ ಎಜ್ಯುಕೇಶನ್ ಇನ್ ಇಂಡಿಯಾ. ಪುಟ. ೧೨೭.

೨೫. "The vernaculars are the living languages of this great continent English is the vehicle of learning and advancement to the small minority, but, for the vest bulk it is a foreign tongue which they do not speak and rarely hear".
ಮುತ್ತಣ್ಣ ಐ.ಎಂ. ೧೯ನೇ ಶತಮಾನದಲ್ಲಿ ಪಾಶ್ಚಾತ್ಯವಿದ್ವಾಂಸರ ಕನ್ನಡ ಸೇವೆ. ಪುಟ, ೫೨೧: ಉಲ್ಲೇಖ.

೨೬. ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಸಂಗ್ರಹ. ದಾಸಂ. ೫೬೧. ಬಣಕಾರ ಮಹಾದೇವ

ಶುದ್ಧವಾಗಿ ಬರೆಯುವುದು, ವಾಕ್ಯಗಳನ್ನು ಕನ್ನಡಮುಖಿಗೊಳಿಸುವುದು ಅಂದಿನ ಮುಖ್ಯ ಜವಾಬ್ದಾರಿಯಾಗಿದ್ದಿತು.

ಹೀಗೆ ಒಂದು ಕಡೆ ವೀರಶೈವಮಠಗಳು ತಮ್ಮ ಇತಿಮಿತಿಯಲ್ಲಿಯೇ ಕನ್ನಡ ಭಾಷೆಯನ್ನು ಅಳಿದುಳಿದ ಸ್ಥಿತಿಯಲ್ಲಾದರೂ ರಕ್ಷಿಸಿಕೊಂಡು ಬರುವ ಕಾರ್ಯಮಾಡುತ್ತಿದ್ದರೆ, ಇನ್ನೊಂದೆಡೆಗೆ ಅಧಿಕಾರಶಾಹಿವರ್ಗ ಆಡಳಿತಾತ್ಮಕ ಉದ್ದೇಶಕ್ಕಾಗಿ ಈ ಭಾಷೆಯನ್ನು ಜೀವಂತವಾಗಿಡಲು ಆಸಕ್ತರಾಗಿದ್ದರೂ ಅದು ತುಂಬ ದುರ್ಬಲವಾಗಿದ್ದಿತು. ಅಂದರೆ ವೀರಶೈವ ಮಠಗಳಿಗೆ ಕನ್ನಡ ಭಾಷೆಯ ಬಗ್ಗೆ ಅನನ್ಯವಾದ ಪ್ರೀತಿಯಿದ್ದರೂ ಅದನ್ನು ಎಲ್ಲ ನೆಲೆಗಳಲ್ಲಿ ರಾರಾಜಿಸುವಂತೆ ಮಾಡುವ ಶಕ್ತಿಯಿರಲಿಲ್ಲ. ಇನ್ನು ಆಡಳಿತ ವರ್ಗಕ್ಕೆ ಆ ಶಕ್ತಿಯಿದ್ದರೂ ಕನ್ನಡ ಭಾಷೆಯನ್ನು ರಕ್ಷಿಸಿ ಪೋಷಿಸಿ, ಬೆಳೆಸಬೇಕೆಂಬ ಬಗ್ಗೆ ಆಸ್ಥೆಯಿರಲಿಲ್ಲ.

ಈ ರೀತಿ ಕನ್ನಡ ಭಾಷೆ ನಿಸ್ತೇಜವಾಗಿ, ನಿಸ್ಸಾಯಕವಾಗಿ, ಆತ್ಮಪ್ರತ್ಯಯವನ್ನು ಕಳೆದುಕೊಂಡ ಸಂದರ್ಭದಲ್ಲಿ ಮೂಡಿಬಂದವರು ಡೆಪ್ಯೂಟಿ ಚೆನ್ನಬಸಪ್ಪನವರು. ಅವರ ಶಕ್ತಿಸಾಮರ್ಥ್ಯಗಳನ್ನು ಒರೆಗೆ ಹಚ್ಚುವುದಕ್ಕಾಗಿಯೇ ಭೂಮಿಕೆಯೊಂದು ಸಿದ್ಧಗೊಂಡಿತ್ತೇನೋ ಎನ್ನುವಂತಹ ಪರಿಸ್ಥಿತಿ ಅಂದು. ತನ್ನ ಅಸ್ತಿತ್ವವನ್ನೇ ಕಳೆದುಕೊಂಡಿದ್ದ ಕನ್ನಡಕ್ಕೆ ಅಲ್ಪಸ್ವಲ್ಪ ಪ್ರಾಣವಾಯು ತುಂಬುತ್ತ ಬಂದಿದ್ದ ವೀರಶೈವಸಮಾಜದ ಮಾತೃಭಾಷಾನಿಷ್ಠೆಯೇ ರೂಪುಗೊಂಡಂತೆ, ಶಿಕ್ಷಣ ಕ್ಷೇತ್ರದ ಮಾಮೂಲಿ ಅಧಿಕಾರಿಯಾಗದೆ, ಆ ಹುದ್ದೆಗಳನ್ನು ನೆಪವಾಗಿಸಿಕೊಂಡು ಅವರು ಕನ್ನಡದ ಪುನರುತ್ಥಾನಕ್ಕಾಗಿಯೇ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡದ್ದು ನಿಜವಾಗಿಯೂ ಕನ್ನಡಿಗರ ಪಾಲಿಗೆ ಒಂದು ಆದರ್ಶಪ್ರಾಯವಾದ ರೋಮಾಂಚನಕಾರಿ ಕತೆಯಾಗಿದೆ.



## ಡೆಪ್ಯೂಟಿ ಚೆನ್ನಬಸಪ್ಪನವರ ಜೀವನ

ಬಾಹ್ಯ ಇಲ್ಲವೆ ಆಂತರಿಕ ಕಾರಣಗಳಿಂದಾಗಿ ಸ್ಥಿತ್ಯಂತರಗಳು ತಲೆದೋರಿದಾಗ ಯಾವುದೇ ಕಾಲದ ಸಾಮಾಜಿಕ ಬದುಕಿನಲ್ಲಿ ಏರು ಪೇರುಗಳಾಗುವುದು ಸಹಜ. ಈ ಪರಿವರ್ತನೆ ಪ್ರಗತಿಪರವಾಗಿದ್ದು, ಅದು ಬಹುಜನಹಿತಾಯವಾಗಿದ್ದರೆ ಅದನ್ನು ಸಮಾಜ ಮಾನ್ಯಮಾಡಿ ಸ್ವೀಕರಿಸುತ್ತದೆ. ಒಂದು ವೇಳೆ ಆ ಪರಿವರ್ತನೆ ಹಿಮ್ಮುಖವಾಗಿದ್ದು, ಜನ ವಿರೋಧಿಯಾಗಿತ್ತೆಂದರೆ, ಅದೇ ಸಮಾಜ ಅದನ್ನು ಧಿಕ್ಕರಿಸುತ್ತದೆಂಬುದಕ್ಕೆ ಬೇಕಾದಷ್ಟು ನಿದರ್ಶನಗಳುಂಟು. ಇನ್ನೊಂದು ಅಂಶವೆಂದರೆ, ಒಂದು ಸಮಾಜದ ಭೌತಿಕ ಮತ್ತು ಸಾಂಸ್ಕೃತಿಕ ಬದುಕಿಗೆ ಪರಸ್ಪರ ಪೂರಕ ಸಂಬಂಧವಿರುವುದರಿಂದ ಒಂದರ ಮೇಲಾಗುವ ಪರಿಣಾಮ ಅತ್ಯಂತ ತ್ವರಿತವಾಗಿ ಇನ್ನೊಂದರ ಮೇಲಾಗುವುದು ಅಷ್ಟೇ ಸ್ವಾಭಾವಿಕ. ರಾಜಕೀಯ ಉದ್ದೇಶಪೂರಿತವಾದ ಕಾರಣಗಳಿಂದಾಗಿ ಕರ್ನಾಟಕದ, ಅದರಲ್ಲೂ ಮುಂಬೈಕರ್ನಾಟಕದ ಸಾಮಾಜಿಕ ಬದುಕಿನಲ್ಲಿ ಕಾಣಿಸಿಕೊಂಡ ಅವಾಂತರಗಳನ್ನು ಪರಿಶೀಲಿಸುವಾಗ ೧೯ನೇ ಶತಮಾನದ ಅಂತ್ಯದವರೆಗಿನ ಸಾಂಸ್ಕೃತಿಕ ಬದುಕು ಎಷ್ಟೊಂದು ತೀವ್ರತರವಾಗಿ ಧಕ್ಕೆಗೊಳಗಾಗಿತ್ತೆಂಬುದನ್ನು ಈ ಹಿಂದೆ ನೋಡಿದ್ದೇವೆ. ಇಂಥ ಸಂದರ್ಭದ ಸಮಾಜವನ್ನು ತಟಸ್ಥಸಮಾಜ, ನಿಷ್ಕ್ರಿಯ ಸಮಾಜವೆಂದು ತಿಳಿಯಬೇಕಾಗಿಲ್ಲ. ಆ ಸಮುದಾಯದ ಮನಸ್ಸು ತಮ್ಮ ಸಾಂಸ್ಕೃತಿಕ ಬದುಕಿನ ಹರಿಕಾರನೊಬ್ಬನಿಗಾಗಿ ಕಾಯುತ್ತಿದ್ದಿತಷ್ಟೇ.

ಐತಿಹಾಸಿಕವಾಗಿ ನೋಡುವಾಗ ಸಾಂಸ್ಕೃತಿಕವಾದ ಸಾಕಷ್ಟು ದುಷ್ಪರಿಣಾಮಗಳನ್ನೇ ಬಳುವಳಿಯಾಗಿ ಪಡೆದಿದ್ದ ೧೯ನೆಯ ಶತಮಾನವು, ತನ್ನ ಆದಿಭಾಗದಲ್ಲಿ ಇಂಥ ಹರಿಕಾರನೊಬ್ಬನನ್ನು ಪಡೆಯಿತು. ಅವರೇ ಶ್ರೀ ಡೆಪ್ಯೂಟಿ ಚೆನ್ನಬಸಪ್ಪನವರು. ಕಳೆದ ಶತಮಾನಗಳಲ್ಲಿ ಸಾಂಸ್ಕೃತಿಕ ವಿಕೃತಿಗೆ ಕಾರಣವಾಗಿದ್ದ ಪರಿಸ್ಥಿತಿಯ ವಿರುದ್ಧ ಜೀವಿತದ ಕೊನೆಯ ವರೆಗೂ ಸೆಣೆಸುತ್ತ ಆಧುನಿಕ ಕರ್ನಾಟಕದ ಸಾಂಸ್ಕೃತಿಕ ಇತಿಹಾಸವನ್ನು ಬರೆದ ಈ ಚೆನ್ನಬಸಪ್ಪನವರ ಪ್ರಚಂಡ ಹೋರಾಟದ ಹಿಂದೆ ಸಾಕಷ್ಟು ಪ್ರೇರಣೆ, ಪ್ರಚೋದನೆಗಳಿರುವುದನ್ನು ಅಲ್ಲಗಳೆಯುವಂತಿಲ್ಲ. ಮಹದಾಶ್ಚರ್ಯದ ಸಂಗತಿಯೆಂದರೆ, ಇವತ್ತಿಗೂ ಹಲವು ನ್ಯಾಯಸಮ್ಮತವಾದ ಹೋರಾಟಗಳ ನೆಲೆವೀಡಾಗಿರುವ ಧಾರವಾಡವು, ಅವೊತ್ತೂ ಡೆಪ್ಯೂಟಿ ಚೆನ್ನಬಸಪ್ಪನವರಿಗೆ ಜನ್ಮಕೊಟ್ಟು, ಸಾರ್ಥಕ ಹೋರಾಟದ ಚೈತನ್ಯ ತುಂಬಿದ ನೆಲದಾಯಿ. ಈ ಹಿನ್ನೆಲೆಗಾಗಿ ಅಂದಿನ ಧಾರವಾಡದ ಪರಿಸರವನ್ನು ಪರಿಚಯಿಸಿಕೊಳ್ಳುವುದು ಇಲ್ಲಿ ಹೆಚ್ಚು ಪ್ರಸ್ತುತವೆನಿಸುತ್ತದೆ.

ಮೂಲ ಧಾರವಾಡವು ಒಂದು ಚಿಕ್ಕ ಸ್ವತಂತ್ರ ಕಂದಾಯಗ್ರಾಮ. ಈಗ ನಾವು ನೋಡುವ ಧಾರವಾಡ ಒಂಬತ್ತು ಹಳ್ಳಿಗಳಿಂದೊಡಗೂಡಿದ ಸಮುದಾಯ ಗ್ರಾಮವೆಂಬುದು ಇಂದಿಗೂ ಅನೇಕರಿಗೆ ಗೊತ್ತು. ಮೊದಮೊದಲು ಒಂದು ಚಿಕ್ಕವಸತಿ ಸ್ಥಳವಾಗಿದ್ದ ಈ ಗ್ರಾಮವನ್ನು ಕಾಲಾನಂತರ ಯುದ್ಧದೃಷ್ಟಿಯಿಂದ ಆಯಕಟ್ಟಿನ ಪ್ರದೇಶವೆಂದು ಪರಿಗಣಿಸಲ್ಪಟ್ಟು, ಇಲ್ಲಿ ಒಂದು ಕೋಟೆಯನ್ನೂ ರಚಿಸಲಾಯಿತು. ವಿಜಾಪೂರದ ಆದಿಲ್‌ಶಾಹಿಗಳು ಕಟ್ಟಿಸಿದ ಈ ಕೋಟೆಯ ಒಂದು ಮಹಾದ್ವಾರವನ್ನು ಈಗಿನ ಸಿವಿಲ್ ಆಸ್ಪತ್ರೆಯ ಹತ್ತಿರ ನೋಡಬಹುದು.

ಆದಿಲಶಾಹಿಗಳ ಬಳಿಕ ಧಾರವಾಡ ಪ್ರದೇಶ, ಮರಾಠಾ-ಪೇಶವೆಗಳ ಅಧಿಕಾರಕ್ಕೆ ಒಳಗಾಯಿತು. ಆಗ ಅಕ್ಷರಜೀವಿಗಳಾದ ಬ್ರಾಹ್ಮಣರು ಉಪಜೀವನಕ್ಕಾಗಿ ಮರಾಠಿಯನ್ನು ಕಲಿತರು. ಪೇಶವೆಗಳು ಬ್ರಾಹ್ಮಣರಾದುದರಿಂದ ಕರ್ನಾಟಕದ ಬ್ರಾಹ್ಮಣರಿಗೆ ತುಂಬ ಅನುಕೂಲವೇ ಆಯಿತು. ಇದೂ ಕಾರಣವಾಗಿ ಈ ಭಾಗದಲ್ಲಿ ಮರಾಠಿ ಹಬ್ಬಲು ಬ್ರಾಹ್ಮಣರು ಕಾರಣರಾದರು. ಇದಲ್ಲದೆ ಅಂದು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಇಲ್ಲಿಯ ಜನವರ್ಗ ಪುಣೆಗೆ ಹೋಗುವುದು ಅನಿವಾರ್ಯವಾಗಿದ್ದಿತು. ಆಗ ಪೇಶವೆಗಳ ರಾಜಧಾನಿಯಾಗಿದ್ದ ಪುಣೆ ಶಿಕ್ಷಣ-ಸಂಸ್ಕೃತಿಗಳ ನೆಲೆವೀಡೂ ಆಗಿದ್ದಿತು. ಟಿಳಕ, ಗೋಖಲೆಯವರಂಥ ಮೇಧಾವಿಗಳಿಂದ ಪುಣೆ ನಗರವು ಸಂಪರ್ಕ ಬಂದರ ಮೇಲೆ ಪ್ರಭಾವಬೀರುವುದಾಗಿದ್ದಿತು. ಹೀಗಾಗಿ ಧಾರವಾಡ ಭಾಗದಿಂದ ಪುಣೆಗೆ ಹೋದವರು ಹೊಸ ವಿಚಾರ ಹೊತ್ತುಕೊಂಡೇ ಮರಳುತ್ತಿದ್ದರು. ಧಾರವಾಡವನ್ನು ರೂಪಿಸಿದ ಹಲವು ಶಕ್ತಿಗಳಲ್ಲಿ ಪುಣೆ ಮಹತ್ವದ ಸ್ಥಾನ ಪಡೆಯಿತು.

೧೮೧೮ರಲ್ಲಿ ಪೇಶವೆಯರ ಕೈಯಿಂದ ಉತ್ತರ ಕರ್ನಾಟಕ, ಆಂಗ್ಲರ ವಶಕ್ಕೆ ಬಂದಿತು. ಇದರ ಫಲವಾಗಿ ಬ್ರಿಟೀಷರ ಸೈನ್ಯದ ತುಕಡಿಯೊಂದು ಧಾರವಾಡದಲ್ಲಿ ಶಾಶ್ವತ ನೆಲೆ ಪಡೆಯಿತು. ಅಂದಿನಿಂದ ಈ ಊರಿಗೆ ಆಂಗ್ಲ ಗಾಳಿಯ ಸ್ಪರ್ಷ ಪ್ರಾರಂಭವಾಯಿತು.

ಪುಣೆಯ ಸಂಪರ್ಕದಿಂದ ನವೀನ ರೂಪ ಪಡೆಯುತ್ತಲಿದ್ದ ಧಾರವಾಡಕ್ಕೆ ೧೮೩೭ರಲ್ಲಿ ಸ್ವಿಟ್ಝರ್ಲಂಡಿನ ಬಾಸೆಲ್ ಮಿಶನ್ನಿನ ಹೆಬಿಕ್ ಎನ್ನುವ ಮಿಶಿನರಿ ಬಂದು ಆಂಗ್ಲ ಸಂಸ್ಕೃತಿಯ ಶ್ರೀಕಾರ ಬರೆದು, ಮೊಗ್ಲಿಂಗ್‌ರಿಗೆ ಹೊಣೆ ಹೊರಿಸಿ ಹೋದರು. ಇವರಲ್ಲದೆ ಜೆ.ಲೆಯರ್, ಎಚ್.ಫ್ರೇ, ಜೆ.ಸಿ.ಲೆಹ್ನರ್, ಸಿ. ಹಿಲ್ಲರ್, ಸಿ. ಎಸ್ಮಿನ್, ಜಿ.ಸುಪ್ಪರ್, ಜೆ. ಮುಲ್ಲರ್ ಮೊದಲಾದ ಮಿಶನರಿಗಳು ಧಾರವಾಡದಲ್ಲಿ ಆಂಗ್ಲ ವಾತಾವರಣವನ್ನು ತುಂಬುತ್ತ ಬಂದರು. ಈ ಹೊತ್ತಿಗಾಗಲೇ ಅಂದರೆ ೧೮೨೨ರಲ್ಲಿ ಬೆಳಗಾವಿ ಒಂದು ಜಿಲ್ಲೆಯಾಗಿ ಮಾರ್ಪಟ್ಟಿದ್ದಿತು. ಮುಂದೆ ಎಂಟು ವರ್ಷಗಳ ತರುವಾಯ (೧೮೩೦) ಧಾರವಾಡವೂ ಸಹ ಜಿಲ್ಲೆಯಾಗಿ ರೂಪುಗೊಂಡಿತು. ಆ ವರೆಗೆ ಮಿಲಿಟರಿ ಆಡಳಿತವೇ ಇಲ್ಲಿತ್ತು.

ಪ್ರಾಚೀನ ಧಾರವಾಡದ ಎಷ್ಟೋ ವೈಶಿಷ್ಟ್ಯಗಳು ಈಗ ಸಂಪೂರ್ಣವಾಗಿ ಕಣ್ಮರೆಯಾಗಿವೆ. ಕೆಲವಷ್ಟು ಮಾರ್ಪಾಟು ಹೊಂದಿವೆ. ಇನ್ನೂ ಕೆಲವು ನಾಮಾವಶೇಷವಾಗಿ ಉಳಿದಿವೆ. ಇಂದಿನ ಮಾಳಮಡ್ಡಿಗೆ ಗಿಬ್‌ಟೌನ್ ಎಂದೂ, ಮದಿಹಾಳಕ್ಕೆ ನಿಸಬತಪೂರ ಎಂದೂ, ಹಾವೇರಿ ಪೇಟೆಗೆ ಸದಾಶಿವಪೇಟೆ ಎಂದೂ ಕರೆಯಲಾಗುತ್ತಿದ್ದಿತು. ಎಡ್ವರ್ಡ ಬಾದಶಃ ಪಟ್ಟಕ್ಕೆ ಬಂದದ್ದರ ಸ್ಮರಣಾರ್ಥ ರಚಿತವಾದ ಎಡ್ವರ್ಡಪಾರ್ಕ ಇಂದು ಆಝಾದ ಉಪವನವಾಗಿ ನಾಮಾಂತರಗೊಂಡಿದೆ. ಆಗಿನ ಏಳುಗುಡ್ಡ, ಏಳುಕೆರೆ ಈಗ ಮಾಯವಾಗಿವೆ. ಗುರುನಾಥರಾವ್ ಪಾಠಕ ಕಟ್ಟಿಸಿದ, ಈಗಲೂ ಇರುವ ಸಂಸ್ಕೃತ ಪಾಠಶಾಲೆ ಹಳೆಯ ಧಾರವಾಡದ ಕೊನೆಯ ಅಂಚು. (ಆಗ ಧಾರವಾಡದಲ್ಲಿ ನೋಡತಕ್ಕ ಸ್ಥಳಗಳಲ್ಲಿ ಇದೂ ಒಂದಾಗಿತ್ತು).

ಪೂರ್ವಭಾಗಕ್ಕೆ ಹೋದ ಹಾಗೆ ಎರೇಮಣ್ಣು ಇರುವುದರಿಂದ ಧಾರವಾಡವು ಪಶ್ಚಿಮ ಭಾಗಕ್ಕೇ ಹೆಚ್ಚು ಬೆಳೆಯಿತು. ಆಗಿನ ಪೇಟೆಯ ಭಾಗವೆಂದರೆ, ಈಗ ನವಕಲ್ಯಾಣಮಠ ಇರುವ ಬೂಸ (ಕಾಳಿನ) ಪೇಟೆ, ಚಿನಿವಾಲಗಟ್ಟಿ, ಪೋತ್ನೀಸಗಲ್ಲಿ ಮಾತ್ರ. ಬುಧವಾರ ದಿನ ಸಂತೆ ನಡೆಯುತ್ತಿತ್ತು. ಗುತ್ತೆಪ್ಪನವರ ಚೆನ್ನಬಸಪ್ಪಯೆಂಬವನು ಆಗಿನ ಪ್ರಮುಖ ವ್ಯಾಪಾರಿ. ಮಸಾಲೆ ವ್ಯಾಪಾರ ವಿಶೇಷವಾಗಿತ್ತು. ಹಳಮೆಯ ಕುರುಹುಗಳಾಗಿ ರವಿವಾರಪೇಟೆ, ಮಂಗಳವಾರಪೇಟೆ, ಹಾವೇರಿಪೇಟೆ, ಜವಳೀಪೇಟೆ, ಶುಕ್ರವಾರಪೇಟೆ, ಆಡಕಿಓಣಿ ಮುಂತಾದ ಪೇಟೆಗಳ ಹೆಸರುಗಳು ಈಗಲೂ ಜನರೂಢಿಯಲ್ಲಿವೆ. ಕೆ.ಸಿ.ಸಿ. ಬ್ಯಾಂಕ ಸ್ಥಾಪನೆಯಾಗಲು ಆಗಿನ ವ್ಯಾಪಾರ ವಹಿವಾಟವೇ ಕಾರಣ. ಲಿಂಗಾಯತ ಸಮಾಜ, ಅದರಲ್ಲೂ ವ್ಯಾಪಾರೀವರ್ಗದ ಶೆಟ್ಟರು, ಬಣಜಿಗ ಉಪಜಾತಿಯವರ ಪ್ರಾಬಲ್ಯ ಇಲ್ಲಿತ್ತು. ಇವರೊಂದಿಗೆ ಘಾಣೇಕರ, ಕರಂದೀಕರ, ಕಿರ್ಲೋಸ್ಕರ ಜಠಾರ, ಗೋಡಬೋಲೆ, ಕೇಳಕರ, ಜೋಶಿ, ನಾಡಗೇರ, ಗುತ್ತಲ, ದೇಶಪಾಂಡೆ, ಮುಂತಾದ ಬ್ರಾಹ್ಮಣ ನೌಕರಶಾಹಿ ಮನೆತನಗಳೂ ಇದ್ದವು. ಆಗಿನ ಹಳೇ ತಾಲೂಕ ಕಛೇರಿ(ಪಂಚಕಛೇರಿ) seat of political power ಆಗಿತ್ತೆಂದು ಹೇಳುತ್ತಾರೆ. ಅಲ್ಲದೆ ಆಗ ಗಲ್ಲಿಗೊಂದೊಂದು ಗುಡಿ ಇದ್ದುದಾಗಿ ತಿಳಿಯುತ್ತದೆ. ಉದಾಹರಣೆಗೆ, ಪೋತ್ನೀಸಗಲ್ಲಿಯಲ್ಲಿ ವಿರಕ್ತಮಠ, ಗಣಾಚಾರಿ ಓಣಿಯಲ್ಲಿ ಕಾಳಿಕಾದೇವಿಗುಡಿ, ಗಾಳೀ ಓಣಿಯೊಳಗೆ ಮುದೀಮಾರುತಿ ಗುಡಿ, ದೇಸಾಯರ ಓಣಿಒಳಗೆ ವೆಂಕಟೇಶ್ವರಗುಡಿ, ಓಂಕಾರೇಶ್ವರಗುಡಿ. ಇಂಥ ಹಿನ್ನೆಲೆಯುಳ್ಳ ಧಾರವಾಡವನ್ನು ಪ್ರಶಂಸಿಸುತ್ತ ಅಂದಿನ ಜನತೆಯ ಔದಾರ್ಯವನ್ನೂ, ಪ್ರಾಮಾಣಿಕತೆಯನ್ನೂ, ಜೀವನಮಟ್ಟವನ್ನೂ, ಪರಿಸರದ ಸಮೃದ್ಧಿಯನ್ನೂ ಡಾ. ದ.ರಾ.ಬೇಂದ್ರೆಯವರು ಕೂಡ ದಾಖಲಿಸಿದ್ದಾರೆ.[೧]

**ವಲಸೆ ಬಂದ ವಂಶಜರು :**

ಡೆಪ್ಯೂಟಿಯವರ ಪೂರ್ವಜರು ಏನು ಕಾರಣವೋ ಗೋಕಾಕದಿಂದ ಈ ಧಾರವಾಡಕ್ಕೆ ಬಂದು ನೆಲೆಯೂರಿದರು. ಡೆಪ್ಯೂಟಿಯವರದು ವೀರಶೈವ ವ್ಯಾಪಾರಿ ಮನೆತನ. ಇವರ ಅಜ್ಜಂದಿರಾದ ಅಪ್ಪಯ್ಯಪ್ಪನವರು ಸುಶೀಲರೂ, ನಿಷ್ಠಾವಂತರೂ ಆಗಿದ್ದರು. ಇವರಿಗೆ ಅಪ್ಪಣ್ಣಪ್ಪ ಮತ್ತು ಬಸಲಿಂಗಪ್ಪ ಎಂಬ ಇಬ್ಬರು ಮಕ್ಕಳು. ಇವರಲ್ಲಿ ಕಿರಿಯವನಾದ ಬಸಲಿಂಗಪ್ಪನೇ ಗೋಕಾಕದಿಂದ ಧಾರವಾಡಕ್ಕೆ ಬಂದು ಒಂದು ಕಿರಾಣಿಅಂಗಡಿ ಹಾಕಿದ್ದಾಗಿ ತಿಳಿಯುತ್ತದೆ. ಇಲ್ಲಿಂದ ಮುಂದೆ ಈ ಮನೆತನಕ್ಕೆ 'ಧಾರವಾಡ' ಎಂಬ ಅಡ್ಡಹೆಸರು ರೂಢಿಗೊಂಡಿರಬೇಕು. ಈ ಮೊದಲು ಇದ್ದ ಇವರ ಮನೆತನದ ಅಡ್ಡಹೆಸರು ಯಾವುದೆಂಬುದು ತಿಳಿಯುವುದಿಲ್ಲ. ಬಸಲಿಂಗಪ್ಪನವರ ಧರ್ಮಪತ್ನಿ, ತಿಪ್ಪವ್ವ. ಇವರ ಹೊಟ್ಟೆಯಿಂದ ದೊಡ್ಡಚೆನ್ನಬಸಪ್ಪ ಹಾಗೂ ಸಣ್ಣಚೆನ್ನಬಸಪ್ಪ ಎಂಬಿಬ್ಬರು ಗಂಡುಮಕ್ಕಳು ಜನಿಸಿದರು. ಕರೆಯುವ ಅನುಕೂಲಕ್ಕಾಗಿ ಇಬ್ಬರ ಹೆಸರುಗಳ ಹಿಂದೆ ಸಣ್ಣ, ದೊಡ್ಡ ಎಂಬ ವಿಶೇಷಣಗಳನ್ನು ಬಳಸುತ್ತಿದ್ದರೆಂದು ತೋರುತ್ತದೆ. ಸಣ್ಣ ಚೆನ್ನಬಸಪ್ಪನವರು ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದರು. ಇವರ ಬಗ್ಗೆ ವಿಶೇಷವಾದ ಯಾವ ಸಂಗತಿಗಳೂ ಗೊತ್ತಾಗುವುದಿಲ್ಲ.

---

೧. ಹಳೆಯ ಧಾರವಾಡದ ಬಗ್ಗೆ ವಿಶೇಷ ಮಾಹಿತಿ ಒದಗಿಸಿದವರು : ಕೌಜಲಗಿ ರಾಮಚಂದ್ರ ಮುಂಬೈ, ಮತ್ತು ಹೊನ್ನಾಪೂರಮಠ ಸಿ.ಜಿ. ವಕೀಲರು ಧಾರವಾಡ ಇವರುಗಳು.
ಕೌಜಲಗಿ ರಾಮಚಂದ್ರ ಅವರನ್ನು ಸಂದರ್ಶಿಸಿದ್ದು ೯.೬.೧೯೯೦ (ಹುಬ್ಬಳ್ಳಿ) ಮತ್ತು ಹೊನ್ನಾಪುರಮಠ ಸಿ.ಜಿ. ವಕೀಲರನ್ನು ಸಂದರ್ಶಿಸಿದ್ದು ೩೧.೫.೧೯೯೦ (ಧಾರವಾಡ)

**ಚೆನ್ನಬಸಪ್ಪನವರ ಬಾಲ್ಯ :**

ಹಿರಿಯವರಾದ ದೊಡ್ಡ ಚೆನ್ನಬಸಪ್ಪನವರು ಅಂದರೆ ಡೆಪ್ಯೂಟಿ ಚೆನ್ನಬಸಪ್ಪನವರು ಧಾರವಾಡದಲ್ಲಿ ೧೮೩೩, ಡಿಸೆಂಬರ ೧ರಂದು ಜನಿಸಿದರು. ಆದರೆ ಫ.ಗು.ಹಳಕಟ್ಟಿಯವರು ಸಂಪಾದಿಸಿದ "ಕೈ.ವಾ.ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು" (೨ನೇ ಆವೃತ್ತಿ, ೧೯೩೦) ಎಂಬ ಪುಸ್ತಕದಲ್ಲಿ ಚೆನ್ನಬಸಪ್ಪನವರ ಜನನಕಾಲವನ್ನು ೧೮೩೪ ಎಂದು ನಮೂದಿಸಲಾಗಿದೆ. ಡೆಪ್ಯೂಟಿಯವರನ್ನು ಕುರಿತು ಮಾಹಿತಿ ನೀಡುವ ಮೊದಲ ಕೃತಿ ಇದಾಗಿರುವುದರಿಂದ ಡಾ.ರಾ.ಯ. ಧಾರವಾಡಕರರೂ ತಮ್ಮ ಸಂಶೋಧನಾ ಪ್ರಬಂಧದಲ್ಲಿ ಚೆನ್ನಬಸಪ್ಪನವರನ್ನು ಕುರಿತು ಬರೆಯುವಾಗ ಬಹುಶಃ ಹಳಕಟ್ಟಿಯವರ ಕೃತಿಯನ್ನೇ ಅವಲಂಬಿಸಿ ಪ್ರಸ್ತುತ ಜನನಕಾಲವನ್ನು ೧೮೩೪ ಎಂದೇ ಉಲ್ಲೇಖಿಸಿದ್ದಾರೆ. ಆದರೆ ಡಾ. ಶ್ರೀನಿವಾಸ ಹಾವನೂರ, ಮ.ಗು. ಹಂದ್ರಾಳ, ಸ.ಸ.ಮಾಳವಾಡ, ವೆಂಕಟೇಶ ಸಾಂಗಲಿ, ಆರ್.ಎನ್.ಕರಡಿ ಮೊದಲಾದವರೆಲ್ಲ ೧೮೩೩ ಎಂದೇ ದಾಖಲಿಸಿದ್ದಾರೆ. ಇದೇ ಡೆಪ್ಯೂಟಿಯವರ ನಿಜವಾದ ಜನನ ವರ್ಷವಾಗಿದೆ.

ಚೆನ್ನಬಸಪ್ಪನವರ ಮನೆ ಧಾರವಾಡದ ಅಡಕೀ ಓಣಿಯಲ್ಲಿತ್ತೆಂದು ತಿಳಿಯಲು ಇಲ್ಲಿಯ ಬಡ್ಡಕೋರ್ಟ ವಕೀಲರಾಗಿದ್ದ ಮಲ್ಹಾರ ಮಾರ್ತಾಂಡ ನಾಡಗೇರ (ಬಿ.ಎ., ಎಲ್.ಎಲ್.ಬಿ.) ಇವರು ಜೂನ್ ೧೨, ೧೮೮೫ರಲ್ಲಿ ಹೊರಡಿಸಿದ್ದ ಮುದ್ರಿತ 'ಸೂಚನಾಪತ್ರ'ವೊಂದು ಉತ್ತಮ ದಾಖಲೆಯಾಗಿದ್ದು; ವಿವರ ಹೀಗಿದೆ : "ನಮ್ಮ ಕಡಿಗೆ ಕೆಲಸ ಕೊಡಲಿಚ್ಛಿಸುವವರು ಧಾರವಾಡ ಮಂಗಳವಾರ ಪೇಟೆಯಲ್ಲಿ ಅಡಕಿ ಓಣಿಯಲ್ಲಿ ಡೆಪ್ಯೂಟಿ ಚೆನ್ನಬಸಪ್ಪನವರ ಮನೆಯಲ್ಲಿ ನಮಗೆ ಭೆಟ್ಟಿಯಾಗಬೇಕು . . . . . ".[೨] ಈಗ ಆ ಮನೆಯ ಬಗ್ಗೆ ಹೆಚ್ಚಿನ ವಿವರಗಳು ಲಭ್ಯವಾಗುವದಿಲ್ಲವಾದರೂ, ಅಲ್ಲಿಯ ಸಾಂಬ್ರಾಣಿಯವರ ಮನೆಯ ಪರಿಸರದಲ್ಲಿ ಅದು ಇದ್ದಿತೆಂದು ತಿಳಿದು ಬರುತ್ತದೆ. ಚೆನ್ನಬಸಪ್ಪನವರ ಬಾಲ್ಯದ ದಿನಗಳು ಆ ಮನೆಯಲ್ಲಿಯೇ ಗತಿಸಿರಬೇಕು. ಆರು ವರ್ಷದವರಿರುವಾಗಲೇ ಚೆನ್ನಬಸಪ್ಪನವರು ತಂದೆಯನ್ನು ಕಳೆದುಕೊಂಡರು. ಈ ಅನಿರೀಕ್ಷಿತ ಆಘಾತದಿಂದ ಕುಟುಂಬದ ಹೊರೆಯನ್ನೆಲ್ಲ ತಾಯಿ ತಿಪ್ಪವ್ವನೇ ಹೊರುವುದು ಅನಿವಾರ್ಯವಾಯಿತು. ಇಂಥ ಸನ್ನಿವೇಶದಲ್ಲಿ ಅವಳು ಎದೆಗುಂದದೆ ಮಕ್ಕಳ ವಿದ್ಯಾಭ್ಯಾಸದ ಕಡೆಗೆ ಗಮನ ಹರಿಸಿದಳು.

**ಚೆನ್ನಬಸಪ್ಪನವರ ಪ್ರಾಥಮಿಕ ಶಿಕ್ಷಣ :**

ಆಗ ಮಕ್ಕಳನ್ನು ಏಳನೆಯ ವರ್ಷಕ್ಕೆ ಅಕ್ಷರಾಭ್ಯಾಸ ಮಾಡಿಸಲು ಕಳಿಸುವ ಪದ್ಧತಿ ಇತ್ತು. ಆದರೆ ಹೀಗೆ ಕಳಿಸಲು ಅಂದು ಸರಕಾರಿ ಅಥವಾ ಸರಕಾರದಿಂದ ಮನ್ನಣೆ ಪಡೆದ ಶಾಲೆಗಳು ಇದ್ದಿರಲಿಲ್ಲ. ಇದರಿಂದಾಗಿ ಬಾಲಕ ಚೆನ್ನಬಸಪ್ಪನವರ ಪ್ರಾಥಮಿಕ ಶಿಕ್ಷಣವು ಮಠದ ಅಯ್ಯನವರ ಶಾಲೆಯಲ್ಲಿಯೇ ನಡೆಯಿತು. ಆದರೆ ಇಂದು ಆ 'ಮಠಶಾಲೆ'ಯ ಕುರುಹುಗಳಾವವೂ ನೋಡಲು ನಮಗೆ ಲಭ್ಯವಾಗುವುದಿಲ್ಲವಾದರೂ, ಸಾಲಿಮಠ ಶಿವರುದ್ರಯ್ಯನವರ ಬಳಿಯಲ್ಲಿ ಅಕ್ಷರಾಭ್ಯಾಸವಾಯಿತೆಂದು ತಿಳಿಯುತ್ತದೆ. ತುಂಬಾ ಅಚ್ಚುಕಟ್ಟು ಸ್ವಭಾವದವರಾಗಿದ್ದ ಶಿವರುದ್ರಯ್ಯನವರು ಶಿಷ್ಯ ಚೆನ್ನಬಸಪ್ಪನವರಿಗೆ ಕನ್ನಡ, ಮರಾಠಿ, ಗಣಿತ ಮೊದಲಾದ ವಿಷಯುಗಳನ್ನು ಮನದಟ್ಟಾಗುವಂತೆ ಬೋಧಿಸಿದರು. ತಮ್ಮ ವಿಷಯ ಬೋಧನೆಯ

---

೨. ಸೂಚನಾ ಪತ್ರದ ಮೂಲಪ್ರತಿಯನ್ನು ಅನುಬಂಧ ೧ರಲ್ಲಿ ಕೊಡಲಾಗಿದೆ.

ವೈಖರಿಯಿಂದ ಎಳೆಯ ಮನಸ್ಸಿನ ಚೆನ್ನಬಸಪ್ಪನವರ ಮೇಲೆ ಗಾಢವಾದ ಪ್ರಭಾವ ಬೀರಿದರು. ಆದರೂ ಚೆನ್ನಬಸಪ್ಪನವರಲ್ಲಿ ಒಮ್ಮೊಮ್ಮೆ ಬಾಲ್ಯ ಸಹಜವಾದ ತುಂಟಾಟಗಳು ಸ್ವಲ್ಪ ಅತಿಯಾಗಿಯೇ ಕಾಣಿಸಿಕೊಳ್ಳುತ್ತಿದ್ದವು. ಬರಬರುತ್ತ ಶಿವರುದ್ರಯ್ಯನವರ ಶಿಷ್ಯ ವಾತ್ಸಲ್ಯ, ತಾಯಿ ತಿಪ್ಪವ್ವನ ಪುತ್ರ ವಾತ್ಸಲ್ಯ ಕ್ರಮೇಣ ಹುಡುಗನ ಹಠಮಾರಿತನವನ್ನು ನಿಯಂತ್ರಿಸುವಲ್ಲಿ ಯಶಸ್ವಿಯಾದವು. ಆಗ ಗೆಳೆಯರ ಗುಂಪಿನಲ್ಲಿ 'ಹುಲಿ' ಎಂದು ಕರೆಸಿಕೊಳ್ಳುತ್ತಿದ್ದ ಚೆನ್ನಬಸಪ್ಪನವರು ಮುಂದೊಂದು ದಿನ "ಕನ್ನಡದ ಹುಲಿ"ಯಾಗಬಹುದೆಂದು ಯಾರಿಂದಲೂ ಊಹಿಸುವುದೂ ಸಾಧ್ಯವಿರಲಿಲ್ಲ!

ಕ್ರಮೇಣ ಚೆನ್ನಬಸಪ್ಪನವರು ಶಿವರುದ್ರಯ್ಯನವರ ಅಚ್ಚುಮೆಚ್ಚಿನ ಶಿಷ್ಯರಾದರು. ಬಾಯಿಲೆಕ್ಕದಲ್ಲಿ ಮತ್ತು ಕಾವ್ಯವಾಚನದಲ್ಲಿ ಇವರು ಹೆಚ್ಚು ಆಸಕ್ತರಾಗಿರುತ್ತಿದ್ದರು. ಇದನ್ನರಿತ ಶಿವರುದ್ರಯ್ಯನವರು ಆ ವಿಷಯಗಳನ್ನು ಹೆಚ್ಚು ಕಳಕಳಿಯಿಂದ ಹೇಳಿಕೊಟ್ಟರು. ಬುದ್ಧಿ ಬೆಳೆದ ಹಾಗೆ ಚೆನ್ನಬಸಪ್ಪನವರು ಉತ್ಸಾಹದ ಚಿಲುಮೆಯಾದರು. ಪ್ರಾಥಮಿಕ ವಿದ್ಯಾಭ್ಯಾಸವು ಮುಗಿಯುವ ಹೊತ್ತಿಗೆ ಅವರಲ್ಲಿ ಹೊಸ ಆಸೆಗಳು ಗರಿಗೆದರಿದವು. ಇಷ್ಟೊತ್ತಿಗಾಗಲೆ ಸುತ್ತಲಿನ ಪರಿಸರವನ್ನು ಅರ್ಥೈಸಿಕೊಳ್ಳುವಷ್ಟು ಅವರು ಪ್ರೌಢರಾಗಿದ್ದರು. ಅದು ಆಂಗ್ಲರ ಆಡಳಿತದ ಕಾಲವಾದ್ದರಿಂದ ಇಂಗ್ಲೀಷ ಕಲಿತವರಿಗೆ ಸಿಗುತ್ತಿದ್ದ ಮಾನ ಮರ್ಯಾದೆಯನ್ನು ಗುರುತಿಸಿದರು. ತಾವೂ ಅದನ್ನೇಕೆ ಕಲಿಯಬಾರದು? ಎಂಬ ಆಸೆ ಅಂತರಂಗವನ್ನು ಮೀಟತೊಡಗಿತು. ಆದರೆ ಆ ಆಸೆ ಸುಲಭದಲ್ಲಿ ಕೈಗೂಡುವಂತಿರಲಿಲ್ಲ. ಯಾಕೆಂದರೆ ಆ ಕಾಲದಲ್ಲಿ ಧಾರವಾಡದಲ್ಲಿ ಇಂಗ್ಲೀಷ ಶಾಲೆಗಳೇ ಇದ್ದಿರಲಿಲ್ಲ.[೩] ಈ ಭಾಷೆಯನ್ನು ಕಲಿಯಬೇಕಾದರೆ ಪುಣೆಗೋ ಮುಂಬೈಗೋ ಹೋಗಿ ಅಭ್ಯಸಿಸುವುದು ಅನಿವಾರ್ಯವಾಗಿತ್ತು. ಚೆನ್ನಬಸಪ್ಪನವರಿಗೆ ಇದಾವುದೂ ಲೆಕ್ಕಕ್ಕೇ ಬರಲಿಲ್ಲ. ಏನಾದರೂ ಸರಿ, ಇಂಗ್ಲೀಷನ್ನು ಕಲಿಯಲೇಬೇಕೆಂಬ ದೃಢ ಸಂಕಲ್ಪ ಮಾಡಿದರು. ಈ ಸಂಕಲ್ಪಕ್ಕೆ ಆಗಲೇ ಗುರುಗಳಾದ ಶಿವರುದ್ರಯ್ಯನವರ ಆಶೀರ್ವಾದವೂ ದೊರಕಿತ್ತು. ಅವರೊಂದು ದಿನ "ಚನಬಸೂ, ನೀನು ಉಳಿದ ಹುಡುಗರಂತೆ ಮಠದಲ್ಲಿಯ ಓದು ಮುಗಿದ ಬಳಿಕ ಅಷ್ಟಕ್ಕೆ ನಿಲ್ಲಿಸಬಾರದು. ಹೇಗಾದರೂ ಪ್ರಯತ್ನಿಸಿ ಮುಂದೆ ಇಂಗ್ಲೀಷ ಕಲಿ, ನೀನು ಬಲು ಬುದ್ಧಿವಂತ. ಅದರ ಲಾಭ ಪಡೆದುಕೋ. ಇಂಗ್ಲೀಷ ಕಲಿತರೆ ದೊಡ್ಡ ಹುದ್ದೆ ಸಿಕ್ಕುತ್ತದೆ. ನಿನ್ನ ತಂದೆ ಬಸಲಿಂಗಪ್ಪನ ಹೆಸರಿಗೆ ಕೀರ್ತಿಬರುತ್ತದೆ. ನಿನ್ನ ತಾಯಿಯ ಹೊಟ್ಟೆ ಶಾಂತವಾಗುತ್ತದೆ"[೪] ಎಂದು ಹರಸಿದ್ದರು.

ಚೆನ್ನಬಸಪ್ಪ ಪುಣೆಗೆ ಹೋಗಿ ಇಂಗ್ಲೀಷ ಕಲಿಯಲು ನಿರ್ಧರಿಸಿದರು. ಕೈಯಲ್ಲಿ ಒಂದು ದುಗ್ಗಾಣಿಯೂ ಇಲ್ಲ, ತಾಯಿಯೂ ಕೊಡುವ ಸ್ಥಿತಿಯಲ್ಲಿರಲಿಲ್ಲ. ಏನು ಮಾಡಲೂ ತೋಚದೆ, ಕೊನೆಗೆ ತಾಯಿಯನ್ನೇ ಕೇಳುವುದೆಂದು ಗಟ್ಟಿ ಮನಸ್ಸುಮಾಡಿ ಒಂದು ದಿನ ಸಂಜೆ, ತಾಯಿ ಹಿತ್ತಲಲ್ಲಿ ಕೆಲಸ ಮಾಡುತ್ತಿದ್ದಾಗ, ಅಲ್ಲಿಯೇ ರೊಟ್ಟಿ ತಿನ್ನುತ್ತ ನಿಂತಿದ್ದ ಚೆನ್ನಬಸಪ್ಪನವರು ತಮ್ಮ 'ಪುಣೆಯ ಆಸೆ'ಯನ್ನು ಮುಂದಿಟ್ಟರು. ಅದನ್ನು ಕೇಳಿ ತಿಪ್ಪವ್ವ ಅಪ್ರತಿಭಳಾದಳು. ಒಂದು ಕಡೆ ಆರ್ಥಿಕ ಮುಗ್ಗಟ್ಟು, ಇನ್ನೊಂದು ಕಡೆ ಭಾಷೆ, ಸಂಸ್ಕೃತಿ ಭಿನ್ನವಾಗಿರುವ ಅಪರಿಚಿತವಾದ ನಾಡು. ಮೇಲಾಗಿ ಪ್ರಯಾಣಸೌಕರ್ಯವಂತೂ ಇಲ್ಲವೇ ಇಲ್ಲ. ಇಂಥ ಪರಿಸ್ಥಿತಿಯಲ್ಲಿ ಎಳೆಯ ಹುಡುಗನನ್ನು ಕಳಿಸುವುದಾದರೂ ಹೇಗೆ? ಯೋಚಿಸಿದಷ್ಟೂ ಅವಳಿಗೆ ಭಯವಾಯಿತು.

---

೩. ಧಾರವಾಡದಲ್ಲಿ ಬಾಸೆಲ್ ಮಿಶನ್ ಶಾಲೆ ಆರಂಭವಾಗಿದ್ದರೂ ಅದು ಕ್ರೈಸ್ತಶಾಲೆ ಎಂಬ ಕಾರಣದಿಂದ ತಮ್ಮ ಮಕ್ಕಳನ್ನು ಕಳಿಸಲು ಸಾಮಾನ್ಯವಾಗಿ ಇಲ್ಲಿಯ ಜನರು ಮುಂದೆ ಬರುತ್ತಿರಲಿಲ್ಲ.

೪. ಸಾಂಗಲಿ ವೆಂಕಟೇಶ : ಡೆಪ್ಯೂಟಿ ಚೆನ್ನಬಸಪ್ಪ. ಪುಟ. ೧೩-೧೪.

ಏನೊಂದೂ ಉತ್ತರಿಸದೆ ಸುಮ್ಮನಾದಳು, ದಿನಗಳೆದಂತೆ ವಿಷಯ ಮರೆತುಹೋಗಬಹುದೆಂದು ತರ್ಕಿಸಿದಳು. ಆದರೆ ಅವಳ ಆ ತರ್ಕ ತಲೆಕೆಳಗಾಯಿತು.

ಅಂದಿನ ರಾತ್ರಿ ಚೆನ್ನಬಸಪ್ಪನವರು ತಮ್ಮ ಆ ಆಸೆಯನ್ನೇ ಹೊದ್ದು ಮಲಗಿದರು, ನಿದ್ರೆ ಬರಲಿಲ್ಲ. ಬರುವುದು ಸಾಧ್ಯವೂ ಇರಲಿಲ್ಲ. ತಾಯಿಗೆ ನಿದ್ರೆ ಹತ್ತುವುದನ್ನೇ ಕಾಯುತ್ತಿದ್ದ ಅವರು ಮಧ್ಯರಾತ್ರಿ ಎದ್ದು ತಾಯಿಯ ಕೋಣೆಗೆ ನುಸುಳಿ ಅವಳ ಪೆಟ್ಟಿಗೆಯನ್ನು ಶೋಧಿಸಿದರು. ೩ ರೂಪಾಯಿ ೧೦ ಆಣೆ ಪುಡಿಕಾಸು ಕೈಗೆ ಹತ್ತಿತು. ಅದನ್ನು ಕಿಸೆಗೆ ಏರಿಸಿಕೊಂಡು ಜ್ಞಾನಾರ್ಜನೆಯ ಗರಬಡಿದವರಂತೆ ಮಧ್ಯರಾತ್ರಿಯೇ ಮನೆಬಿಟ್ಟು ಹೊರಟುಬಿಟ್ಟರು. ಆಗ ಅವರ ವಯಸ್ಸು ಸುಮಾರು ಹನ್ನೆರಡು. ಇಷ್ಟೊಂದು ಚಿಕ್ಕವಯಸ್ಸಿನಲ್ಲಿ ಚೆನ್ನಬಸಪ್ಪನವರು ಕೈಕೊಂಡ ನಿರ್ಧಾರದ ಬಗ್ಗೆ, ಕಂಡ ಕನಸಿನ ಬಗ್ಗೆ ಇವತ್ತಿಗೂ ವಿಸ್ಮಯವಾಗುತ್ತದೆ. ಪ್ರಯಾಣ ಸೌಕರ್ಯಗಳಿದ್ದ ಇಂದಿನ ದಿನಗಳಲ್ಲಿಕೂಡ ಪುಣೆಯ ಪ್ರವಾಸವೆಂದರೆ ತುಂಬ ದೂರವೆಂಬ ಭಾವನೆ ಬರುತ್ತದೆ. ಒಮ್ಮೆಲೇ ಮನಸ್ಸು ಒಪ್ಪುವುದಿಲ್ಲ. ಅಂದಮೇಲೆ ಯಾವ ಪ್ರಯಾಣ ಸೌಕರ್ಯಗಳೂ ಇಲ್ಲದಿದ್ದ ಆ ಕಾಲದಲ್ಲಿ ಕಾಲ್ನಡಿಗೆಯಿಂದಲೇ ಪುಣೆ ತಲುಪಿದ್ದು; ಚೆನ್ನಬಸಪ್ಪನವರ ವಿದ್ಯಾರ್ಜನೆಯ ತೀವ್ರ ಆಸಕ್ತಿ, ಅದನ್ನು ಪಡೆದೇ ತೀರಬೇಕೆಂಬ ಹಟ, ತಮ್ಮ ಸಾಮರ್ಥ್ಯದ ಬಗೆಗಿನ ಆತ್ಮವಿಶ್ವಾಸ, ನಿಷ್ಠುರಗಳನ್ನು ನುಂಗುವ ಜಿಗುಟುತನ, ಇವೆಲ್ಲವುಗಳಿಗೆ ಸ್ಪಷ್ಟವಾದ ನಿದರ್ಶನದಂತಿತ್ತು. ಅಷ್ಟೇ ಅಲ್ಲ, ಚೆನ್ನಬಸಪ್ಪನವರ ಭಾವೀ ಬದುಕಿನ ಜೀವ ದ್ರವ್ಯಗಳನ್ನೆಲ್ಲ ಈ ಹಂತದಲ್ಲಿಯೇ ನಾವು ಕಾಣಬಹುದಾಗಿದೆ.

ಧಾರವಾಡ, ಪುಣೆಗಳ ಅಂತರ ಸುಮಾರು ೪೨೦ ಕಿಲೋಮೀಟರ. ಈ ದೂರವನ್ನು ಕಾಲ್ನಡಿಗೆಯಿಂದಲೇ ಕ್ರಮಿಸಬೇಕು. ಅಲ್ಪವಯಿ, ಏಕಾಂಗಿ, ಕೈಯಲ್ಲಿ ಕಾಸಿಲ್ಲ. ಊಹಿಸಲೂ ಭಯವಾಗುತ್ತದೆ. ಚೆನ್ನಬಸಪ್ಪನವರಲ್ಲಿ ಹುದುಗಿದ್ದ ಅದಮ್ಯ ಆಸೆ; ಬೆನ್ನಟ್ಟುವ ಯಾವ ಕಷ್ಟಕಾರ್ಪಣ್ಯಗಳನ್ನೂ ಲೆಕ್ಕಿಸಲಿಲ್ಲ. "ಏನೇ ಆಗಲಿ, ಪುಣೆಗೆ ಹೋಗಿ ವಿದ್ಯಾಸಂಪಾದನೆ ಮಾಡಬೇಕು", ಎಂಬ ಗುರಿ ಇಟ್ಟುಕೊಂಡು ಧಾರವಾಡದಿಂದ ತಮ್ಮ ಅಜ್ಜನ ಊರಾದ ಗೋಕಾವಿಗೆ (ಬೆಳಗಾವಿ ಜಿಲ್ಲೆಯ ಗೋಕಾಕಕ್ಕೆ) ಬಂದರು. ಅಲ್ಲಿ ತಮ್ಮ ಚಿಕ್ಕಪ್ಪನ ಮಗನಾದ ಅಮರಪ್ಪನನ್ನು ಭೆಟ್ಟಿಯಾಗಿ ತಮ್ಮ ಉದ್ದೇಶವನ್ನು ಹೇಳಿಕೊಂಡರು. ಆದರೆ ಅಮರಪ್ಪನವರಿಂದ ಯಾವುದೇ ತರಹದ ಉತ್ತೇಜನ ದೊರಕಲಿಲ್ಲ. ಇದರಿಂದ ಚೆನ್ನಬಸಪ್ಪನವರೂ ಧೃತಿಗೆಡಲಿಲ್ಲ; ನಿರಾಸೆಗೊಳ್ಳಲಿಲ್ಲ. ಹಿಮ್ಮೆಟ್ಟುವುದು ಅವರ ಜಾಯಮಾನವೇ ಅಲ್ಲ. ತಮ್ಮ ತಂದೆಯ ಸ್ನೇಹಿತರಾದ ನಾಗಪ್ಪ ಗಿರಾಮರ[೫] ಎಂಬವರೊಬ್ಬರು ಗೋಕಾಕದಲ್ಲಿಯೇ ಇದ್ದರು. ಚೆನ್ನಬಸಪ್ಪನವರಿಗೆ ಥಕ್ಕನೆ ನೆನಪಾಯಿತು. ಹೋಗಿ ಕಂಡಾಗ ಅವರಿಂದ ನಿರೀಕ್ಷೆ ಮೀರಿದ ಪ್ರೋತ್ಸಾಹ, ಸಹಾಯಗಳೆರಡೂ ದೊರಕಿದವು. ಅವರು ಹುಡುಗನ ದಿಟ್ಟತನ, ಸಾಹಸಪ್ರವೃತ್ತಿ, ವಿದ್ಯಾರ್ಜನೆಯ ದಾಹ ಇವುಗಳನ್ನು ಕಂಡು ೫೦ ರೂಪಾಯಿಗಳ ಸಹಾಯಧನ ನೀಡಿ ಪುಣೆಯತ್ತ ಬೀಳ್ಕೊಟ್ಟರು. ಆವೊತ್ತಿನ ಲೆಕ್ಕದಲ್ಲಿ ೫೦ ರೂ. ದೊಡ್ಡ

---

೫. ಹಳಕಟ್ಟಿ ಫ.ಗು. ಅವರು ಬರೆದ ಚೆನ್ನಬಸಪ್ಪನವರ ಚರಿತ್ರೆಯಲ್ಲಿ ನಾಗಪ್ಪ ಗಿರಾಮರ ಎಂದಿದೆ. ಹುಕ್ಕೇರಿ ಬಾಳಪ್ಪನವರೂ ಸಂದರ್ಶನ (೧೬.೫.೧೯೯೦) ಸಂದರ್ಭದಲ್ಲಿ 'ಗಿರಾಮರ' ಎಂಬ ಹೆಸರನ್ನೇ ಸಮರ್ಥಿಸಿದರು. ಆದರೆ ಡೆಪ್ಯೂಟಿಯವರನ್ನು ಕುರಿತ 'ಸಂಸ್ಮರಣ ಗ್ರಂಥ' ಕನ್ನಡ ದೀಪ ಮತ್ತು ಇತ್ತೀಚೆ ಆರ್.ಎನ್. ಕರಡಿ ಬರೆದಿರುವ'ಕನ್ನಡದ ಶಕಪುರುಷ ಡೆಪ್ಯೂಟಿ ಚೆನ್ನಬಸಪ್ಪನವರು' ಎಂಬ ಕೃತಿಯಲ್ಲಿ 'ಗಿರಾಮರ' ಎಂಬುದರ ಬದಲಾಗಿ'ಗಿರಾಪೂರ' ಎಂಬುದನ್ನು ನಮೂದಿಸಿದ್ದಾರೆ. 'ಗಿರಾಮರ' ಎಂಬ ಹೆಸರಿರುವುದು ಸಹಜವೆನಿಸುವುದಿಲ್ಲ. ಬಹುಶಃ ಗಿರಾಪೂರ ಎಂಬುದೇ ಸರಿ ಇದ್ದಿರಬೇಕು, ಈಗ ಗೋಕಾಕದಲ್ಲಿ ಈ ಎರಡೂ ಹೆಸರಿನ ಮನೆತನಗಳಿಲ್ಲವೆಂಬುದು ನನ್ನ ಕ್ಷೇತ್ರಕಾರ್ಯದಿಂದ ತಿಳಿದು ಬಂದ ವಿಷಯ.

ಸಹಾಯವೇ. ಈ ನಿರಪೇಕ್ಷ ಸಹಾಯವು ನಾಗಪ್ಪನವರ ಹೆಸರನ್ನು ಚೆನ್ನಬಸಪ್ಪನವರ ಚರಿತ್ರೆಯಲ್ಲಿ ಅಜರಾಮರವಾಗಿ ಉಳಿಯುವಂತೆ ಮಾಡಿತು.

ಇತ್ತ ಚೆನ್ನಬಪ್ಪನವರು ದಾರಿಯಲ್ಲಿ ಎದುರಾದ ಕಷ್ಟಗಳಿಗೆ ಜಗ್ಗದೆ, ಕಾಲುಸೋತಲ್ಲಿ ತಂಗುತ್ತ, ಆಗ ಪ್ರಸಿದ್ಧ ವಿದ್ಯಾಕೇಂದ್ರವೆನಿಸಿದ್ದ ಪುಣೆ ನಗರವನ್ನು ತಲುಪಿದರು.

ಪುಣೆಯ ಪರಿಸರದಲ್ಲಿ ಚೆನ್ನಬಸಪ್ಪ :

ಆಗ ಪುಣೆಯಲ್ಲಿ ಹೊರನಾಡಿನಿಂದ ಬರುವ ವಿದ್ಯಾರ್ಥಿಗಳಿಗೆ ಸಹಾಯ ಮಾಡುವ ವಿದ್ಯಾಪ್ರೇಮಿಗಳಿದ್ದರು. ಅಂಥವರಲ್ಲಿ ಗೋವಿಂದರಾವ ಮೆಹಂದಳೇಕರ ಒಬ್ಬರು. ತಮ್ಮನ್ನು ಭೆಟ್ಟಿಯಾದ ಚೆನ್ನಬಸಪ್ಪನವರ ಇಂಗಿತ ಏನೆಂಬುದು ಅವರಿಗೆ ತಕ್ಷಣ ಮನದಟ್ಟಾಯಿತು. ಅವರು ಕೈಲಾದ ಸಹಾಯ ಮಾಡಲು ಒಪ್ಪಿಕೊಂಡರು. ಕನಸುಗಾರ ಚೆನ್ನಬಸಪ್ಪನವರಿಗೆ ಇಷ್ಟೇ ಬೇಕಿತ್ತು. ಇಂಗ್ಲೀಷ ಶಾಲೆಯೊಂದನ್ನು ಪತ್ತೆ ಹಚ್ಚಿದರು. ಆ ಶಾಲೆಯ ಹೆಡ್‌ಮಾಸ್ತರರನ್ನು ಭೆಟ್ಟಿಯಾಗಿ, ಅವರು ಕೇಳಿದ ಪ್ರಶ್ನೆಗಳಿಗೆ ಸಮರ್ಪಕ ಉತ್ತರಗಳನ್ನು ನೀಡಿ ಅಲ್ಲಿ ಪ್ರವೇಶ ಪಡೆದರು. ಇಲ್ಲಿಂದ ಅವರ 'ಬಾಳಸಂಪುಟದ' ಮತ್ತೊಂದು ಅಧ್ಯಾಯ ಪ್ರಾರಂಭವಾಯಿತೆನ್ನಬೇಕು.

'ಸ್ವದೇಶೇ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ' ಎಂಬ ಉಕ್ತಿಯಲ್ಲಿ ಅಪಾರ ನಂಬಿಗೆಯನ್ನಿರಿಸಿಕೊಂಡ ಚೆನ್ನಬಸಪ್ಪನವರು ತಮ್ಮ ಪಾದರಸ ಸದೃಶ ವ್ಯಕ್ತಿತ್ವದಿಂದಾಗಿ ಶಾಲೆಯ ಗುರುವರ್ಗದವರ ಗಮನಸೆಳೆದರು. ದಿನೇ ದಿನೇ ವಿದ್ಯಾಭ್ಯಾಸದಲ್ಲಿ ಸಾಧಿಸಿದ ಪ್ರಗತಿಯನ್ನು ಅನುಲಕ್ಷಿಸಿ ಅವರಿಗೆ ಬಡವಿದ್ಯಾರ್ಥಿಗಳ ನಿಧಿಯಿಂದ ಸಹಾಯ ಸಿಗುವ ಏರ್ಪಾಡಾಯಿತು. ಹೀಗೆ ಪುಣೆಯಲ್ಲಿ ತಮಗೊಂದು ನಿಶ್ಚಿತ ನೆಲೆ ದೊರಕಿದ ಮೇಲೆ, ತಾಯಿಗೆ ಸಾದ್ಯಂತವಾಗಿ ಪತ್ರ ಬರೆದು ಅವಳಿಗೂ ಪುಣೆಗೆ ಬರುವಂತೆ ಆಗ್ರಹಿಸಿದರು. ಮಗನ ಒತ್ತಾಸೆಗೆ ಸಂಭ್ರಮಿಸಿದ ತಿಪ್ಪವ್ವ ಅವನ ಭವಿಷ್ಯಕ್ಕಾಗಿ ಎಲ್ಲ ಕಷ್ಟಗಳನ್ನೂ ಕಡೆಗಣಿಸಿ ಪುಣೆಗೆ ತಾನೂ ಬಂದಳು. "ತಾಯಿ ಮಗ ಜೊತೆಯಾಗಿ ವಾಸಮಾಡತೊಡಗಿದರು. ಚೆನ್ನಬಸಪ್ಪನಿಗೆ ವಿದ್ಯಾಭ್ಯಾಸದಲ್ಲಿ ಆಸಕ್ತಿ, ತಿಪ್ಪವ್ವನಿಗೆ ಮಗನ ಆರೈಕೆಯಲ್ಲಿ ಆಸಕ್ತಿ...".[೬]

ಚೆನ್ನಬಸಪ್ಪನವರಿಗೆ ಧಾರವಾಡದಿಂದ ಸುಮಾರು ೪೨೦ ಕಿಲೋಮೀಟರ ಅಂತರವನ್ನು ಕಾಲ್ನಡಿಗೆಯಲ್ಲಿ ಕ್ರಮಿಸಿ ಪುಣೆಗೆ ಬಂದಿರುವುದರ ಉದ್ದೇಶ ಯಾವಾಗಲೂ ಕಣ್ಣೆದುರು ಹೊಳೆಯುತ್ತಿತ್ತು. ಹೀಗಾಗಿ ತಮ್ಮ ಶಕ್ತಿ ಸಾಮರ್ಥ್ಯಗಳನ್ನೆಲ್ಲಾ ಹಾಕಿ ದುಡಿದರು. ಆ ಪರಿಶ್ರಮಕ್ಕೆ ತಕ್ಕ ಪ್ರತಿಫಲವೂ ಇದ್ದೇ ಇತ್ತು. ಜೊತೆಗೆ ತಾಯಿಯ ಮಮತೆ, ತ್ಯಾಗ ಆರೈಕೆಗಳೂ ಹೊಸ ಚೈತನ್ಯ ನೀಡುತ್ತಿದ್ದವು. ಗಣಿತ, ವಿಜ್ಞಾನ, ಭಾಷಾ ವಿಷಯಗಳಲ್ಲಿ ಅವರಿಗೆ ಅಪಾರವಾದ ಆಸಕ್ತಿ ಬೆಳೆಯಿತು. ಗಣಿತ ವಿಷಯದಲ್ಲಿ ಪಾರಂಗತರಾಗಿದ್ದ ಶಿಕ್ಷಕರ ಅಚ್ಚುಮೆಚ್ಚಿನ ಶಿಷ್ಯರೆಂದು ಇವರ ಬಗ್ಗೆ ಪ್ರತೀತಿ ಬೆಳೆಯಿತು. ಒಟ್ಟಾರೆ ಶಾಲೆಯ ಶಿಕ್ಷಕವರ್ಗ ತಮ್ಮ ಮೇಲಿಟ್ಟ ಭರವಸೆ ಹುಸಿಯಾಗದಂತೆ ಹೆಚ್ಚಿನ ಗುಣಗಳನ್ನು ಪಡೆದು, ಮಾಧ್ಯಮಿಕ ಶಾಲಾ ಅಭ್ಯಾಸವನ್ನು ಮುಗಿಸಿ, ಸಹಾಯ ಮಾಡಿದ ಎಲ್ಲರಿಗೂ ಕೀರ್ತಿ ತಂದರು.

---

೬. ಹಂದ್ರಾಳ ಮ.ಗು. : ಕನ್ನಡದ ದೀಪ, ಪುಟ. ೧೭.

**ಇಂಜನೀಯರಿಂಗ್ ವಿದ್ಯಾರ್ಥಿ :**

ಆ ಬಳಿಕ ಚೆನ್ನಬಸಪ್ಪನವರು ಪುಣೆಯಲ್ಲಿಯೇ ನಿಂತು ಇಂಜನೀಯರಿಂಗ್ ಓದುವ ನಿಶ್ಚಯ ಮಾಡಿದರು."ಧೈರ್ಯಶಾಲಿ ಮಾತ್ರ ಸದವಕಾಶಗಳನ್ನು ದೋಚಬಲ್ಲ" ಎಂಬ ನಾಣ್ಣುಡಿಯೊಂದಿದೆ. ಇದು ಅಕ್ಷರಶಃ ಚೆನ್ನಬಸಪ್ಪನವರಿಗೆ ಅನ್ವಯಿಸುತ್ತದೆಂಬುದಕ್ಕೆ ಅವರು ತಮ್ಮ ಬದುಕನ್ನು ರೂಪಿಸಿಕೊಂಡ ಬಗೆಯೇ ಒಂದು ಉತ್ತಮ ಉದಾಹರಣೆ.

ಮನಸ್ಸಿಗೆ ಬಂದುದನ್ನು ಸಾಧಿಸಿಯೇ ತೀರುವುದು ಚೆನ್ನಬಸಪ್ಪನವರ ಸಹಜ ಗುಣ. ಇಂಜನೀಯರಿಂಗ್ ಓದಲೇಬೇಕೆಂದು ನಿಶ್ಚಯಿಸಿದ್ದೇ ತಡ 'ಪೂಣಾ ಇಂಜನೀಯರಿಂಗ್ ಕ್ಲಾಸಿ'ಗೆ ಪ್ರವೇಶ ಪಡೆದರು.[೭] ಅಲ್ಲಿಯ ಅವರ ಪ್ರಗತಿಯ ಬಗ್ಗೆ ಶ್ರೀ ಫ.ಗು.ಹಳಕಟ್ಟಿಯವರು ಬರೆದ ವಿಚಾರಗಳು ಹೀಗಿವೆ: "ಅವರು ಗಣಿತದಲ್ಲಿ ಬಹು ಮೇಲುಬುದ್ಧಿಯುಳ್ಳವರೂ, ಆಧುನಿಕ ಶಾಸ್ತ್ರೀಯ ವಿಷಯಗಳಲ್ಲಿ ಬಹಳೇ ಆಸಕ್ತಿಯುಳ್ಳವರೂ ಇದ್ದುದರಿಂದ ಈ ಕಾಲೇಜಿನಲ್ಲಿ ೧೦ ರೂಪಾಯಿಗಳ ಸ್ಕಾಲರಶಿಪ್ಪನ್ನು ಬೇಗನೇ ಸಂಪಾದಿಸಿದರು. ಇದರ ಸಹಾಯದಿಂದಲೂ ತಿಪ್ಪವ್ವನವರ ಹತ್ತಿರವಿದ್ದ ಅಲ್ಪಸ್ವಲ್ಪ ಹಣದಿಂದಲೂ ತಮ್ಮ ಖರ್ಚು ವೆಚ್ಚಗಳನ್ನು ಸಾಗಿಸಿಕೊಂಡು ಚೆನ್ನಾಗಿ ವಿದ್ಯಾಭ್ಯಾಸ ಮಾಡಹತ್ತಿದರು. ಇವರ ತೀಕ್ಷ್ಣಬುದ್ಧಿಯನ್ನು, ಗಣಿತಜ್ಞತೆಯನ್ನು ನೋಡಿ ಯಾವತ್ತೂ ಪ್ರೊಫೆಸರರು, ಅವರಲ್ಲಿ ಮುಖ್ಯವಾಗಿ ಮಹಾರಾಷ್ಟ್ರದಲ್ಲಿ ಪ್ರಸಿದ್ಧ ಗಣಿತಜ್ಞರೆಂದು ಅತ್ಯಂತ ಹೆಸರುವಾಸಿಗಳಾಗಿದ್ದ ಕೇರೋಪಂತ ನಾನಾ ಛತ್ರೆಯೆಂಬವರು ಚೆನ್ನಬಸಪ್ಪನವರನ್ನು ಬಹು ಪ್ರೀತಿಸಲಾರಂಭಿಸಿದರು. ಕಾಲೇಜಿನಲ್ಲಿ ಚೆನ್ನಬಸಪ್ಪನವರಿಗೆ ದಾಜೀ ನೀಲಕಂಠ ಎಂಬ ಸ್ನೇಹಿತರಿದ್ದರು. ಇವರಾದರೂ ಗಣಿತದಲ್ಲಿ ಬಹು ವಿಚಕ್ಷಣರಾಗಿದ್ದರು. ಇವರೆಲ್ಲರೂ ಕೂಡಿಕೊಂಡು ಗಣಿತದ ಪ್ರಶ್ನೆಗಳನ್ನು ಬಿಡಿಸುವುದರಲ್ಲಿ ಆನಂದದಿಂದ ಕಾಲಕಳೆಯುತ್ತಿದ್ದರು. ಚೆನ್ನಬಸಪ್ಪನವರು ತಮ್ಮ ಉಳಿದ ವೇಳೆಯನ್ನು ವ್ಯರ್ಥವಾಗಿ ಕಳೆಯದೆ ಗ್ರಂಥಾವಲೋಕನದಲ್ಲಿಯೇ ಹಾಕುತ್ತಿದ್ದರು......"[೮] ಇದರಿಂದ ಡೆಪ್ಯೂಟಿಯವರ ಸಾಧನೆಯ ಹಿಂದಿನ ಅವಿರತ ಪರಿಶ್ರಮ ಕಣ್ಣೆದುರು ನಿಲ್ಲುತ್ತದೆ. ಇಂಥವರಿಗೆ ಯಶಸ್ಸು ಕಟ್ಟಿಟ್ಟದ್ದು. ತಮ್ಮ ಇಂಜನೀಯರಿಂಗ್ ಕೊನೆಯ ಪರೀಕ್ಷೆಯಲ್ಲಿ ಉತ್ತಮಶ್ರೇಣಿ ಪಡೆದು ತೇರ್ಗಡೆಯಾದರು. ಆಗಿನ ಪ್ರಗತಿಪರವಾದ ಪುಣೆಯ ವಾಸ್ತವ್ಯ ಅವರ ಮೇಧಾಶಕ್ತಿ ಉಜ್ವಲಗೊಳ್ಳಲು ಅನುಕೂಲವಾಗಿತ್ತು. ಅಂದಿನ ಸಾಮಾಜಿಕ, ರಾಜಕೀಯ, ಸಾಹಿತ್ಯಿಕ ವಿದ್ಯಮಾನಗಳು ತರುಣ ಚೆನ್ನಬಸಪ್ಪನವರ ಮನಸ್ಸನ್ನು ಸಾಕಷ್ಟು ಪ್ರಭಾವಿಸಿದವು. ಸಾರ್ವಜನಿಕ

---

೭. ಆಗಿನ ಸರಕಾರ ಇಂಜನೀಯರಿಂಗ್ ಶಿಕ್ಷಣ ಕೊಡುವ ಮನಸ್ಸು ಮಾಡಿದ್ದು ೧೮೫೪ರಲ್ಲಿ. ಇಂಜನೀಯರಿಂಗ್ ಕಾಲೇಜು ಎಂದು ಕರೆಯುವ ರೂಢಿ ಆರಂಭವಾದದ್ದು ೧೮೬೪ರಲ್ಲಿ. ಅದಕ್ಕೂ ಮುಂಚೆ ಪುನಾ ಎಂಜನೀಯರಿಂಗ್ ಕ್ಲಾಸ್ ಎಂದು ಕರೆಯುವ ಪದ್ಧತಿ ಇತ್ತು. ಅಂದ ಮೇಲೆ ಡೆಪ್ಯೂಟಿ ಚೆನ್ನಬಸಪ್ಪನವರು ಇಂಜನೀಯರಿಂಗ್ ಓದಿದ್ದು ಪೂಣಾ ಇಂಜನೀಯರಿಂಗ್ ಕ್ಲಾಸಿನಲ್ಲಿ. ಈ ವಿಚಾರಗಳನ್ನು ತಿಳಿಸಿದವರು ಡಾ. ಹಾವನೂರ ಶ್ರೀನಿವಾಸ ಅವರು(ಬೆಳಗಾವಿ ಭಾಷಣ - ಸರಕಾರಿ ಟ್ರೇನಿಂಗ್ ಕಾಲೇಜು ೮.೨.೧೯೬೨). ಚೆನ್ನಬಸಪ್ಪನವರು ಇಂದು ನಾವು ಪುಣೆಯಲ್ಲಿ ನೋಡುವ ಸರಕಾರಿ ಇಂಜನೀಯರಿಂಗ್ ಕಾಲೇಜಿನ ಸುಸಜ್ಜಿತ ಕಟ್ಟಡದಲ್ಲಿ ಓದಿದವರಲ್ಲ. ಇದು ಬೇರೆ ಕಡೆಯಿಂದ ಸ್ಥಳಾಂತರಗೊಂಡು ನಿರ್ಮಿಸಲಾಗಿರುವ ಕಟ್ಟಡ. ಇದಕ್ಕೂ ಮುಂಚೆ ಇದು ಪೂಣಾ ಇಂಜನೀಯರಿಂಗ್ ಕ್ಲಾಸ್ ಎಂಬ ಹೆಸರಿನ ತಾತ್ಕಾಲಿಕ ಶೆಡ್ ಒಂದರಲ್ಲಿ ಕಾರ್ಯ ಮಾಡುತ್ತಿತ್ತು. ಈಗ ಅದರ ಯಾವ ಮೊದಲಿನ ಕುರುಹುಗಳೂ ಅಲ್ಲಿ ಉಳಿದಿಲ್ಲ. ಇದು ನನ್ನ ಕ್ಷೇತ್ರ ಕಾರ್ಯ (೧೧.೭.೧೯೬೦)ದಿಂದ ತಿಳಿದ ವಿಷಯ.

೮. ಹಳಕಟ್ಟಿ. ಫ.ಗು. : ಕೈ.ವಾ. ಚನ್ನಬಸಪ್ಪ ಬಸವಲಿಂಗಪ್ಪ ಇವರ ಚರಿತ್ರೆಯು. ಪುಟ. ೬,೭.

ಸಭೆಗಳಲ್ಲಿ ಭಾಗವಹಿಸುತ್ತ ತಮ್ಮ ವ್ಯಕ್ತಿತ್ವವನ್ನು ಒರೆಗೆ ಹಚ್ಚಿಕೊಳ್ಳಲೂ ಅವರು ಪ್ರಯತ್ನಿಸುತ್ತಿದ್ದರು. "..... ಇದೊಂದು ಆತನಿಗೆ ಸಾರ್ವಜನಿಕ ಜೀವನದ ತರಬೇತು, ಸಮಾಜಸೇವೆಯ ಪುರಸ್ಕಾರದ ಅರುಣೋದಯ"[೯]ವೆನಿಸಿತು.

ನಿಜವಾಗಿಯೂ ಪುಣೆಯ ಪರಿಸರ ಚೆನ್ನಬಸಪ್ಪನವರ ವ್ಯಕ್ತಿತ್ವವನ್ನು ಗಟ್ಟಿಗೊಳಿಸಿತು. ಅಂದು ಪುಣೆಯ ಪ್ರಮುಖ ಸಮಾಜಸೇವಕರಾಗಿದ್ದ ಜ್ಯೋತಿಬಾ ಫುಲೆಯವರನ್ನೂ, ಅವರ ವಿದ್ಯಾಸಂಸ್ಥೆಗಳ ಬೆಳವಣಿಗೆಯನ್ನೂ, ಅವರ ಬಹುಜನಸಮಾಜ ಚಳವಳಿಯನ್ನೂ ಅತ್ಯಂತ ಹತ್ತಿರದಿಂದ ನೋಡುವ ಅವಕಾಶ ಇವರಿಗೆ ದೊರಕಿತು. 'ಸಮಾಜದ ಉನ್ನತಿಗೆ ಶಿಕ್ಷಣವೇ ಅಡಿಪಾಯ' - ಎಂಬ ತಿಳುವಳಿಕೆ ಮೂಡಿದ್ದು ಈ ಪರಿಸರದಲ್ಲಿಯೇ. ಸಾಮಾನ್ಯವಾಗಿ ಒಂದು ವ್ಯಕ್ತಿ, ತನ್ನ ತಾಯ್ನಾಡನ್ನು ತೊರೆದು ಇನ್ನೊಂದು ನಾಡಿಗೆ ಹೋದಾಗ ಅಲ್ಲಿಯ ಆಡಂಬರಗಳನ್ನೇ ಮೈಗೂಡಿಸಿಕೊಳ್ಳುವುದು ಹೆಚ್ಚು. ವ್ಯಕ್ತಿತ್ವ ನಿರಸನವೆನ್ನುತ್ತಾರಲ್ಲ, ಹಾಗೆ. ಆದರೆ ಅಪವಾದಕ್ಕೆ ಚೆನ್ನಬಸಪ್ಪನಂಥವರೂ ಇರುತ್ತಾರೆ. ಆ ಕಾಲದಲ್ಲಿ ಪುಣೆಗೆ ಹೋಗಿ ಬಂದ ಅಚ್ಚಗನ್ನಡಿಗರು 'ಪುಣೇರಿ'ಗಳಾಗಿಯೇ ಹಿಂತಿರುಗುತ್ತಿದ್ದರೆಂಬುದಕ್ಕೆ ಸ್ಪಷ್ಟ ಉಲ್ಲೇಖಗಳಿವೆ. ಚೆನ್ನಬಸಪ್ಪನವರು ಮಾತ್ರ ಆ ಸೆಳೆತಕ್ಕೆ ಸಿಕ್ಕಲಿಲ್ಲವೆಂಬುದು ಆಶ್ಚರ್ಯದ ವಿಷಯ.

"ವಿದ್ಯಾರ್ಥಿದೆಸೆಯಲ್ಲಿಯೇ ಕಂಡುಬಂದ ಚೆನ್ನಬಸಪ್ಪನವರ ಗುಣಗಳು ಅವರ ಭವಿಷ್ಯದ ಬಾಳಿನಲ್ಲಿ ಸ್ಪಷ್ಟವಾಗಿ ಫಲಕಾರಿಯಾದವು. ಪುಣೆ ನಗರದ ಅಂದಿನ ಪರಿಸರವು ಚೆನ್ನಬಸಪ್ಪನವರ ವ್ಯಕ್ತಿತ್ವ ರೂಪಿಸುವಲ್ಲಿ ಸಹಾಯಕಾರಿಯಾಯಿತು. ಆಗ ಅಲ್ಲಿ ವಿದ್ಯಾರ್ಥಿಯ ಯೋಗ್ಯತೆಯನ್ನು ಮೆಚ್ಚಿಕೊಂಡು ಪ್ರೋತ್ಸಾಹಕೊಡುವ ಉದಾರ ದೃಷ್ಟಿಯ ಅಧ್ಯಾಪಕರಿದ್ದರು. ಅಂದಿನ ವಿದ್ಯಾಭ್ಯಾಸ ಕ್ರಮದಲ್ಲಿ ಒಂದು ಬಗೆಯ ಬಿಗಿ, ಶಿಸ್ತು ರೂಢವಾಗಿದ್ದವು. ಹಿರಿಯ ಧ್ಯೇಯದಿಂದ ಪ್ರೇರಿತರಾದ ಅಧ್ಯಾಪಕರು, ವಿದ್ಯಾರ್ಥಿಗಳಿಗೆ ಒಳ್ಳೆಯ ಮಾದರಿಗಳನ್ನು ಒದಗಿಸುತ್ತಿದ್ದರು. ಬಾಳಿನ ಬಗೆಗೆ ಆಗ ಗೌರವಪರ, ಗಂಭೀರದೃಷ್ಟಿ ಕಂಡುಬರುತ್ತಿತ್ತು. ಸಾರ್ವಜನಿಕ ಸೇವೆಯ ಮನೋಭಾವದಿಂದ ಕೂಡಿದ ಅನೇಕ ಗಣ್ಯವ್ಯಕ್ತಿಗಳು ಅಲ್ಲಿ ಇದ್ದರು. ಅವರೆಲ್ಲ ತಮ್ಮ ಮಾತೃಭಾಷೆಯ ಬಗೆಗೆ ಬಹಳ ಅಭಿಮಾನ ಇಟ್ಟುಕೊಂಡಿದ್ದರು".[೧೦] ಇಂಥ ಆರೋಗ್ಯಪೂರ್ಣವಾದ ವಾತಾವರಣ ಚೆನ್ನಬಸಪ್ಪನವರ ಮನೋಬುದ್ಧಿಗಳನ್ನು ಅಷ್ಟೇ ಆರೋಗ್ಯಪೂರ್ಣವಾಗಿ ಹದಗೊಳಿಸಿತು. ಇನ್ನೊಂದು ದೃಷ್ಟಿಯಿಂದ ನೋಡುವುದಾದರೆ, ಕನ್ನಡ ನಾಡಿನಿಂದ ಹೋದ ಇವರಿಗೆ ಸಾಕಷ್ಟು ಕಟು ಅನುಭವಗಳೂ ಆಗಿರಬೇಕು. ಮಾತೃಭಾಷೆಯ ವಿಷಯದಲ್ಲಿ ಕರ್ನಾಟಕದ ನೆರೆಯ ರಾಜ್ಯಗಳು ಬೆಳೆಸಿಕೊಂಡಿರುವ ಅಭಿಮಾನ ಮತ್ತು ಪ್ರೀತಿ ನಿಸ್ಸೀಮವಾದವುಗಳು. ಅದರಲ್ಲೂ ಮರಾಠಿಗರನ್ನು ಇವತ್ತಿಗೂ ಈ ವಿಷಯದಲ್ಲಿ ಸರಿಗಟ್ಟಲು ಕನ್ನಡಿಗರು ಹಲವು ಜನ್ಮಗಳನ್ನೇ ಎತ್ತಿ ಬರಬೇಕು. ಹೀಗಾಗಿ ಚೆನ್ನಬಸಪ್ಪನವರ ಜೀವನದಲ್ಲಿ ನಾಡು ನುಡಿಯ ವಿಷಯಕ್ಕೆ ಶಾಶ್ವತವಾದ ಅಭಿಮಾನ ಕೆರಳಿದ್ದು ಇಲ್ಲಿಯೇ ಎಂದು ಭಾವಿಸಬೇಕಾಗುತ್ತದೆ.

ಯಾವುದೇ ವಸ್ತುವಿನ ಬೆಲೆ ಅದು ಕೈಯಲ್ಲಿ ಇದ್ದಾಗ ತಿಳಿಯುವುದಿಲ್ಲ. ಅದರ ಬಗ್ಗೆ ಎಷ್ಟೋ ಸಂದರ್ಭಗಳಲ್ಲಿ ಅಸಡ್ಡೆ, ಅನಾದರಗಳಿರುತ್ತವೆ. ಆ ವಸ್ತುವಿನಿಂದ ದೂರವಾದಾಗ ಅಥವಾ ಅದು ಕೈತಪ್ಪಿ ಹೋದಾಗ ಅದರ ಬೆಲೆ ಗೊತ್ತಾಗುವುದು. ಅಂದರೆ ಚೆನ್ನಬಸಪ್ಪನವರಿಗೆ

---

೯. ಹಂದ್ರಾಳ ಮ.ಗು. : ಕನ್ನಡದ ದೀಪ, ಪುಟ. ೧೮.

೧೦. ಮಾಳವಾಡ ಸ.ಸ. : ಡೆಪ್ಯೂಟಿ ಚೆನ್ನಬಸಪ್ಪ. ಪುಟ. ೨೨.

ಕರ್ನಾಟಕದಲ್ಲಿಯೇ ವಿದ್ಯಾರ್ಜನೆಯ ಎಲ್ಲ ಪ್ರಯೋಜನಗಳು ದೊರಕಿ ಬಿಟ್ಟಿದ್ದರೆ ಪರಿಸ್ಥಿತಿ ಬೇರೆಯೇ ಆಗಿರುತ್ತಿತ್ತು. ಆಗ ಆಧುನಿಕ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಚೆನ್ನಬಸಪ್ಪನವರಿಗೆ ಸ್ಥಾನವೇ ಇರುತ್ತಿರಲಿಲ್ಲವೆನಿಸುತ್ತದೆ. ವಿದ್ಯಾರ್ಜನೆಯ ನಿಮಿತ್ತ ತಾಯ್ನೆಲವನ್ನು ಬಿಟ್ಟು ಬಹುದೂರ, ಹೆಚ್ಚುಕಾಲ ಚೆನ್ನಬಸಪ್ಪನವರು ಹೋದದ್ದೇ ಕನ್ನಡಿಗರ ಪಾಲಿಗೆ ವರವಾಯಿತೆನ್ನಬೇಕು. ಯಾಕೆಂದರೆ, ಕನ್ನಡ ಭಾಷೆ-ಸಂಸ್ಕೃತಿಗಳಿಂದ ಹೊರದೂಡಿದಂತಾಗಿದ್ದ ಚೆನ್ನಬಸಪ್ಪನವರಿಗೆ ಅನ್ಯಭಾಷಾಸಂಸ್ಕೃತಿಗಳ ಮಧ್ಯೆ ನಿಂತಾಗ ಸ್ವಕರ್ತವ್ಯದ ಅರಿವು ಸ್ಫುರಿಸಿತು.

**ಇಂಗ್ಲಂಡಿಗೆ ಹೋಗುವ ಅವಕಾಶ :**

ವಿದ್ಯಾರ್ಜನೆ ಮುಗಿದ ಮೇಲೆ ಕೆಲವು ದಿನ ತಾವು ಕಲಿತ ವಿದ್ಯಾಸಂಸ್ಥೆಯಲ್ಲಿಯೇ ಅಲ್ಪಕಾಲಾವಧಿಯ, ತಾತ್ಪೂರ್ತಿಕ ವ್ಯವಸ್ಥೆಯ ಅಧ್ಯಾಪಕರಾಗಿಯೂ ಅವರು ಕೆಲಸ ಮಾಡಿದರು. ಆಮೇಲೆ ಅವರನ್ನು ಇಂಗ್ಲಂಡಿಗೆ ಉಚ್ಚವ್ಯಾಸಂಗಕ್ಕಾಗಿ ಕಳಿಸಿಕೊಡಲು ದಾದಾಭಾಯಿ ನವರೋಜಿಯವರು ಪ್ರಯತ್ನಿಸಿದ ವಿಚಾರ ಹೀಗಿದೆ : When Coopers Hill Engineering college was in contemplation, some correspondence passed between me and His Grace the secretary of state. In this I gave detailed particulars of the cases of Messrs. Daji Nilkunt, Lullubhoy Kheshowlal, Chambas Appa, Gungadhur Venaik and Bomanji Sorabji. Now, the first four had duly qualified themselves, and were entitled to be promoted to the Engineering Department as for back as 1861, and the fifth in 1867, and yet they never got admission in to the Engineering Department as far as I was then (1873) aware, though a large number of appointments had been made during the period. I said, in connection with this part of my letter, that such treatment and bitter disappointments produced much mischief, that the Public works Department rules were mere force etc, etc, and requested enquiry. This His Grace promised to do but I do not know what has been done......[೧೧] ಇದನ್ನೇ ಶ್ರೀ ಹಳಕಟ್ಟಿಯವರು ಹೀಗೆ ವಿವರಿಸಿದ್ದಾರೆ: "ಇಂಗ್ಲಂಡಿನಲ್ಲಿ ಕೂಪರ್ಸಹಿಲ್ ಇಂಜನೀಯರಿಂಗ್ ಕಾಲೇಜವು ಸ್ಥಾಪಿಸಲ್ಪಟ್ಟಿತ್ತು. ಆ ಕಾಲೇಜಿಗೆ ಹಿಂದೀ (ಹಿಂದುಸ್ತಾನ) ವಿದ್ಯಾರ್ಥಿಗಳನ್ನು ಕಳಿಸುವ ವಿಷಯದಲ್ಲಿಯೂ ಮೇಲ್ತರದ ಉದ್ಯೋಗಗಳನ್ನು ಹಿಂದೀ ಜನರಿಗೆ ಕೊಡುವ ವಿಷಯದಲ್ಲಿಯೂ ದಾದಾಭಾಯಿ ನವರೋಜಿಯವರು ಪ್ರಯತ್ನ ನಡೆಸಿದ್ದರು. ಅವರು ಕೂಪರ್ಸಹಿಲ್ ಕಾಲೇಜಕ್ಕೆ ಕಳಿಸಿಕೊಡಲು ಯೋಗ್ಯರಾದ ೫ ಜನ ಹಿಂದೂಸ್ಥಾನದ ವಿದ್ಯಾರ್ಥಿಗಳನ್ನು ಆರಿಸಿ, ಅವರ ಬಗ್ಗೆ ಸೆಕ್ರೆಟರಿ ಆಫ್ ಸ್ಟೇಟ ಧೊರೆಗಳವರ ಕೂಡ ಪತ್ರ ವ್ಯವಹಾರ ನಡೆಸಿದ್ದರು. ಈ ಪ್ರಕಾರ ಅವರು ಆರಿಸಿದವರಲ್ಲಿ ಚೆನ್ನಬಸಪ್ಪನವರೂ ಒಬ್ಬರಾಗಿದ್ದರು. ಆದರೆ ದಾದಾಭಾಯಿಯವರ ಪ್ರಯತ್ನಗಳು ಸಫಲವಾಗದ್ದರಿಂದ ಚೆನ್ನಬಸಪ್ಪನವರು ಇಂಗ್ಲಂಡಿಗೆ ಹೋಗುವುದು ನಿಂತು ಹೋಯಿತು".[೧೨] ಇಲ್ಲಿ

---

೧೧. Navaroji DadaBhai : The Engineering Service – Powerty and un British Rule in India, p.105.

೧೨. ಹಳಕಟ್ಟಿ, ಫ.ಗು. : ಕೈ.ವಾ. ಚನ್ನಬಸಪ್ಪ ಬಸವಲಿಂಗಪ್ಪ ಧಾರವಾಡ ಇವರ ಚರಿತ್ರೆಯು. ಪುಟ. ೮.

ಗಮನಿಸಬೇಕಾದ ಒಂದು ಅತ್ಯಂತ ಮಹತ್ವದ ಅಂಶವೆಂದರೆ, ಚೆನ್ನಬಸಪ್ಪನವರು ದಾದಾಭಾಯಿ ನವರೋಜಿಯಂಥವರ ಗಮನ ಸೆಳೆದಿದ್ದರೆಂಬುದು. ನವರೋಜಿಯವರ ಈ ವಿಚಾರ ಕೈಗೂಡಿದ್ದರೆ, ಭಾರತಕ್ಕೆ ಮತ್ತೊಬ್ಬ ವಿಶ್ವೇಶ್ವರಯ್ಯನವರು ದೊರಕುತ್ತಿದ್ದರೆಂದು ಅಭಿಪ್ರಾಯಪಡುವವರೂ ಇದ್ದಾರೆ. ಡೆಪ್ಯೂಟಿಯವರ ಕರ್ತವ್ಯನಿಷ್ಠೆ, ಪ್ರಾಮಾಣಿಕತೆ, ಬುದ್ಧಿಮತ್ತೆಗಳನ್ನು ಗುರುತಿಸಿದ ಯಾರಿಗಾದರೂ ಹಾಗೆ ಅನ್ನಿಸುವುದು ಸಹಜವೇ. ಈ ಹಿನ್ನೆಲೆಯಲ್ಲಿ ವ್ಯಕ್ತವಾಗಿರುವ ಕೆಲವು ವಿಚಾರಗಳನ್ನು ನೋಡಿ : "..... ಚೆನ್ನಬಸಪ್ಪನವರು ಇಂಗ್ಲಂಡಿಗೆ ಹೋಗಬಹುದಾಗಿತ್ತು. ಉತ್ತಮ ದರ್ಜೆಯ ಇಂಜನೀಯರ್ ಆಗಬಹುದಾಗಿತ್ತು. ಉದ್ಯಮ ರಂಗದಲ್ಲಿ ಅವರು ಹೊಸದಾಖಲೆ ಮೂಡಿಸಬಹುದಾಗಿತ್ತು. ಡಾ.ಎಂ.ವಿಶ್ವೇಶ್ವರಯ್ಯನವರಂತೆ ಹೆಸರಾಂತ ಕಾರ್ಯಗಳನ್ನು ಫಲಪ್ರದವಾಗುವಂತೆ ಮಾಡಿ, ಅಖಂಡ ಭಾರತಕ್ಕೇನೇ ಕೀರ್ತಿತರಬಲ್ಲ ಪ್ರತಿಭಾವಂತ ವ್ಯಕ್ತಿ ಆಗಬಹುದಿತ್ತು. ಸಿರಿವಂತಿಕೆ ಅವರ ಬಾಗಿಲಿಗೆ ತಾನಾಗಿಯೇ ಪ್ರವೇಶಮಾಡುತ್ತಿತ್ತು". ಒಂದುವೇಳೆ ಹೀಗೇ ಆಗಿದ್ದರೆ, ಚೆನ್ನಬಸಪ್ಪನವರು ವಿಶ್ವೇಶ್ವರಯ್ಯನವರ ಹಾಗೆಯೇ ಹೆಸರಾಂತ ಇಂಜನೀಯರಾಗಬಹುದಿತ್ತು. ಆದರೆ ಒಂದು ನಾಡಿನ ಸಂಸ್ಕೃತಿಯನ್ನು ಕಟ್ಟುವ ಮೂಲಕ ಅಮೂಲ್ಯವಾದ ಸಾಂಸ್ಕೃತಿಕ ಸಂಪತ್ತನ್ನು ಉಳಿಸಿಕೊಡುವುದು, ಬೆಳೆಸಿಕೊಡುವುದು ತಪ್ಪಿಹೋಗುತ್ತಲಿದ್ದಿತು. ಇದು ಮನವರಿಕೆಯಾದಾಗ ಅವರ ಮೌಲಿಕಸೇವೆಯನ್ನು ತೂಗಲು ಮಾನದಂಡಗಳೇ ಇಲ್ಲವೆಂಬುದು ಋಜುವಾತಾಗುತ್ತದೆ. ಬಹುಶಃ ದೈವಸಂಕಲ್ಪವೇ ಹಾಗಿತ್ತೆಂದು ತೋರುತ್ತದೆ. ಆದ್ದರಿಂದಲೇ ೧೮೫೫ರಲ್ಲಿ ಅವರು ಪುಣೆ ಬಿಟ್ಟು ತಾಯಿಯೊಡನೆ ಮತ್ತೆ ತಮ್ಮ ಹುಟ್ಟೂರಾದ ಧಾರವಾಡಕ್ಕೆ ಮರಳಿದರು.

ಮರಳಿ ಕರ್ನಾಟಕಕ್ಕೆ :

ಚೆನ್ನಬಸಪ್ಪನವರ ಈ ತರುವಾಯದ ಬದುಕಿನ ವಿವರಗಳು ಸಿಗುವುದು ಅತ್ಯಂತ ಕಡಿಮೆ. ಟ್ರೇನಿಂಗ ಕಾಲೇಜಿನ ಶಿಕ್ಷಕ ವರ್ಗ ದಾಖಲೆಗಳನ್ನು ಸಂಗ್ರಹಿಸಿ, ಸಂರಕ್ಷಿಸುವಲ್ಲಿ ತೋರಿದ ಅನನ್ಯ ಆಸಕ್ತಿಯಿಂದಾಗಿ ಒಂದಿಷ್ಟನ್ನಾದರೂ ಪುನರ್ರಚಿಸಿ 'ಇದೇ ಡೆಪ್ಯೂಟಿ ಚೆನ್ನಬಸಪ್ಪನವರ ಚರಿತ್ರೆ' ಎಂದು ಹೇಳಲು ಸಾಧ್ಯವಾಗಿದೆ.

ತೀರ ಅಲ್ಪಾಯುಷ್ಯದಲ್ಲಿಯೇ ಹೋರಾಟದ ಮನೋಧರ್ಮದಿಂದಾಗಿ ಸಾಕಷ್ಟು ಹೆಸರು ಮಾಡಿದ ಚೆನ್ನಬಸಪ್ಪನವರ ಕೌಟುಂಬಿಕ ವಿವರಗಳನ್ನು ನೋಡಹೊರಟವರಿಗೆ ದೊಡ್ಡ ನಿರಾಸೆಯೇ ಎದುರಾಗುತ್ತದೆ. ಅವರ ಮದುವೆ ಎಲ್ಲಿ? ಯಾವಾಗ ಆಯಿತು ? ಇತ್ಯಾದಿಗಳ ಬಗ್ಗೆ ನಮಗೆ ಖಚಿತವಾದ ಆಧಾರಗಳು ದೊರಕದೆ ವಿವಂಚನೆಯಾಗುತ್ತದೆ. ಆದರೆ ದಿವಂಗತ ಅರಟಾಳ ರುದ್ರಗೌಡರ ಟಿಪ್ಪಣಿಯಿಂದ ಶ್ರೀ ಕಂಬಿಮಾಸ್ತರ ಅವರು ರಚಿಸಿದ ರುದ್ರಗೌಡರ ಅಪ್ರಕಟಿತ ಜೀವನ ಚರಿತ್ರೆಯಲ್ಲಿ ಸಿಗುವ ಒಂದಿಷ್ಟು ಮಾಹಿತಿ ಮೇರೆಗೆ ಡೆಪ್ಯೂಟಿಯವರಿಗೆ ಶಿವಲಿಂಗವ್ವ ಮತ್ತು ಗುರವ್ವ ಎಂಬ ಇಬ್ಬರು ಹೆಂಡರಿದ್ದರೆಂದು ಗೊತ್ತಾಗುತ್ತದೆ. ಈ ಇಬ್ಬರಲ್ಲಿ ಶಿವಲಿಂಗವ್ವನೇ ಚೆನ್ನಬಸಪ್ಪನವರ ಮೊದಲನೆಯ ಹೆಂಡತಿ. ಚೆನ್ನಬಸಪ್ಪನವರ ಅಜ್ಜನ ಊರಾದ ಗೋಕಾಕ ಇವಳ ತವರು ಮನೆ. ಇವಳ ಹೊಟ್ಟೆಯಿಂದ ಹುಟ್ಟಿದ ಒಬ್ಬಳೇ ಒಬ್ಬಳು ಮಗಳಾದ ತೇಜವ್ವನನ್ನು ಲಕ್ಷ್ಮೇಶ್ವರದ ದೇಸಾಯಿಯವರ ಮನೆಗೆ ಕೊಟ್ಟಿದ್ದರು. ಚೆನ್ನಬಸಪ್ಪನವರ ಎರಡನೆಯ ಹೆಂಡತಿ ಗುರವ್ವ ಧಾರವಾಡದ ಅಡಕಿ ಓಣಿಯಲ್ಲೇ ಇರುವ ಗೋದಿ ಎಂಬ ಅಡ್ಡಹೆಸರಿನ ಮನೆತನದವಳು. ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್ ಆದಮೇಲೆ ಇವಳನ್ನು ಮದುವೆಯಾಗಿದ್ದರು. ಈ ಹೆಸರಿನ ಮನೆತನ ಈಗಲೂ ಅಡಕಿ ಓಣಿಯಲ್ಲಿದೆ. ಕಿರಿಯ

ಹೆಂಡತಿಯಾದ ಈ ಗುರವ್ವನಿಗೆ ಬಸಲಿಂಗಪ್ಪ ಮತ್ತು ರುದ್ರಮ್ಮ ಎಂಬ ಇಬ್ಬರು ಮಕ್ಕಳಿದ್ದರು. ಚೆನ್ನಬಸಪ್ಪನವರು ತಮ್ಮ ಇಬ್ಬರೂ ಹೆಂಡಂದಿರಿಗಾಗಿ ಒಂದೇ ಮನೆಯಲ್ಲಿಯೇ ಪ್ರತ್ಯೇಕ ವಸತಿ ವ್ಯವಸ್ಥೆ ಮಾಡಿದ್ದರು.

ಆರಟಾಳ ರುದ್ರಗೌಡರು, ಚೆನ್ನಬಸಪ್ಪನವರು ಸ್ಥಾಪಿಸಿದ (ಬೆಳಗಾವಿ ಕೇಳಕರ ಭಾಗದಲ್ಲಿ) ಉಚಿತ ಬೋರ್ಡಿಂಗ ಬಗ್ಗೆ ಬರೆಯುತ್ತ "ಚೆನ್ನಬಸಪ್ಪನವರು ಸ್ವಂತ ಖರ್ಚಿನಿಂದ ಬೋರ್ಡಿಂಗನ್ನು ನಡೆಯಿಸಿದರು. ಅದರ ಸಲುವಾಗಿ ಅವರು ಸಾಲಮಾಡಿಕೊಂಡರು. ತಮ್ಮ ಮನೆಯನ್ನು ಮಾರಿದರು. ಅವರಿಗೆ ಸೌ.ಶಿವಲಿಂಗವ್ವ, ಸೌ. ಗುರವ್ವ ಎಂಬ ಇಬ್ಬರು ಹೆಂಡಂದಿರಿದ್ದರು. ಮೊದಲನೆ ಹೆಂಡತಿಯು ಸಾಲ ತೀರಿಸುವುದಕ್ಕಾಗಿ ತಮ್ಮ ಆಭರಣಗಳನ್ನು ಚೆನ್ನಬಸಪ್ಪನವರಿಗೆ ಕೊಟ್ಟಳು. ಎರಡನೇ ಹೆಂಡತಿ ಮಾತ್ರ ಆಭರಣಗಳನ್ನು ಕೊಡಲಿಲ್ಲ. ಆಗ ನಾನು ಮಧ್ಯಸ್ಥಿಕೆ ವಹಿಸಿ ಆಭರಣಗಳನ್ನು ಕೊಡಿಸಲು ಮನವೊಲಿಸಿದೆ. ಆ ಎಲ್ಲ ಆಭರಣಗಳನ್ನು ಮಾರಿ ಚೆನ್ನಬಸಪ್ಪನವರು ಸಾಲದ ಭಾರವನ್ನು ಇಳಿಸಿಕೊಂಡರು" ಎಂದು ಅಭಿಪ್ರಾಯಪಡುತ್ತಾರೆ. ಚೆನ್ನಬಸಪ್ಪನವರಿಗೆ ಇಬ್ಬರು ಹೆಂಡಂದಿರಿದ್ದ ಬಗ್ಗೆ ಇದನ್ನು ಬಿಟ್ಟು ಬೇರೆಡೆಗೆ ಎಲ್ಲಿಯೂ ಉಲ್ಲೇಖಗಳಿಲ್ಲ. ಆರಟಾಳ ರುದ್ರಗೌಡರು ಈ ವಿಷಯವನ್ನು ಇಷ್ಟೊಂದು ಸ್ಪಷ್ಟವಾಗಿ ಹೇಳಿರುವಾಗ ಡೆಪ್ಯೂಟಿಯವರ ವೈಯಕ್ತಿಕ ಬದುಕನ್ನು ಚಿತ್ರಿಸಹೊರಟ ಯಾವ ಚರಿತ್ರೆಕಾರರೂ ಈ ವಿಷಯವನ್ನು ಕುರಿತು ಈ ಮೊದಲು ಪ್ರಸ್ತಾಪಿಸದಿರುವುದಕ್ಕೆ ಸೋಜಿಗವೆನಿಸುತ್ತದೆ. ಇದೇ ರೀತಿ ಡೆಪ್ಯೂಟಿಯವರ ಜೀವನಕ್ಕೆ ಸಂಬಂಧಿಸಿದ ಅನೇಕ ಸಂಗತಿಗಳು ಇನ್ನೂ ನಿಗೂಢವಾಗಿಯೇ ಇವೆ.

ಚೆನ್ನಬಸಪ್ಪನವರಿಗೆ ಗುರವ್ವನ ಹೊಟ್ಟೆಯಿಂದ ಹುಟ್ಟಿದ ಬಸಲಿಂಗಪ್ಪ ಎಂಬ ಒಬ್ಬ ಮಗನೂ, ರುದ್ರಮ್ಮ ಎಂಬ ಒಬ್ಬ ಮಗಳೂ ಇದ್ದರು. ಮಗ ಬಸಲಿಂಗಪ್ಪನಿಗೆ ಹುಬ್ಬಳ್ಳಿಯ ತಂಬದವರ ಕನ್ಯೆಯೊಂದಿಗೆ ವಿವಾಹವಾಗಿತ್ತು.[೧೩] ಈ ಬಸಲಿಂಗಪ್ಪನಿಗೆ ಚಂದ್ರಶೇಖರ ಎಂಬ ಮಗನಿದ್ದ. ಇವನೇ ಚೆನ್ನಬಸಪ್ಪನವರ ಮೊಮ್ಮಗ. ರುದ್ರಮ್ಮನನ್ನು ಧಾರವಾಡದಲ್ಲೇ ಟೆಂಗಿನಕಾಯಿಯವರ ಮನೆತನದ ಚೆನ್ನಮಲ್ಲಪ್ಪನಿಗೆ ಕೊಡಲಾಗಿತ್ತು. ಇವಳಿಗೆ ಕಲ್ಯಾಣಮ್ಮ ಹೆಸರಿನ ಸವತಿಯಿದ್ದಳು. ಇವಳು ಹಾನಗಲ್ಲಿನ ಕೌದಿ ಮನೆತನದವಳು. ಇಬ್ಬರಿಂದಲೂ ಮಕ್ಕಳಾಗಲಿಲ್ಲ. ಕಲ್ಯಾಣಮ್ಮ ಗಂಡ ತೀರಿಕೊಂಡ ಕೂಡಲೇ ಶಿವಪ್ಪನೆಂಬ ಹುಡುಗನನ್ನು ದತ್ತು ತೆಗೆದುಕೊಂಡರು. ಇವನೂ ಕೌದಿ ಮನೆತನದವನೇ. ಇದರಿಂದ ಭಯಭೀತಳಾದ ರುದ್ರಮ್ಮನೂ ತನ್ನ ಅಣ್ಣ ಬಸಲಿಂಗಪ್ಪನ ಮಗನಾದ ಚಂದ್ರಶೇಖರನನ್ನು ದತ್ತು ತೆಗೆದುಕೊಳ್ಳಲು ಪ್ರಯತ್ನಿಸಿದಳು. ಇದರಿಂದ ಸವತಿ ಮಕ್ಕಳಲ್ಲಿ ವ್ಯಾಜ್ಯ ಬೆಳೆದು ಅದು ಮುಂಬಯಿ ಹಾಯ್‌ಕೋರ್ಟಿನ ವರೆಗೂ ಹೋಯಿತು. ಆದರೆ ಆ ವ್ಯಾಜ್ಯದಲ್ಲಿ ರುದ್ರಮ್ಮ ಸೋಲನ್ನು ಅನುಭವಿಸಿ, ಸಾಕಷ್ಟು ಮಾನಸಿಕ ಆಘಾತಕ್ಕೊಳಗಾದಳು. ಯಾಕೆಂದರೆ ನ್ಯಾಯಾಲಯ "ಹಿರಿಯ ಪತ್ನಿಗೆ ಮಾತ್ರ ದತ್ತು ಸ್ವೀಕಾರ ಮಾಡಲು ಬರುತ್ತದೆಂದೂ ಮತ್ತೊಬ್ಬರಿಗೆ ಕಾನೂನು ರೀತ್ಯಾ ಅವಕಾಶವಿಲ್ಲ"ವೆಂದೂ ತೀರ್ಪು ನೀಡಿತು. ಇದರಿಂದ ರುದ್ರಮ್ಮ ಕಿರಿಯ ಹೆಂಡತಿಯೆಂದು ಸ್ಪಷ್ಟವಾಗುತ್ತಿದ್ದು, ಕೋರ್ಟ ಆದೇಶದ ಮೇರೆಗೆ ಗಂಡನ ಆಸ್ತಿಯಲ್ಲಿ ಸವತಿಯ ದತ್ತುಪುತ್ರ ಶಿವಪ್ಪನಿಗೆ ಅರ್ಧ, ರುದ್ರಮ್ಮನಿಗೆ ಅರ್ಧ ಪಾಲು ಸಿಕ್ಕಿತು.

---

೧೩. ಹುಬ್ಬಳ್ಳಿಯಲ್ಲಿ ಈಗಲೂ 'ತಂಬದವರ ಓಣಿ' ಎಂಬ ಒಂದು ಓಣಿಯಿದೆ. ನನ್ನ ಕ್ಷೇತ್ರಕಾರ್ಯದಿಂದ ಅಲ್ಲಿ ಯಾವ ಮಾಹಿತಿಯೂ ಲಭ್ಯವಾಗಲಿಲ್ಲ.

"ರುದ್ರಮ್ಮನವರ ಪಾಲಿಗೆ ಜಿನ್ನಿಂಗ ಫ್ಯಾಕ್ಟರಿ, (೧೯೭೦ರ ವರೆಗೂ ಚಂದ್ರಶೇಖರ ಜಿನ್ನಿಂಗ್ ಫ್ಯಾಕ್ಟರಿ ಎಂದೇ ಹೆಸರಿತ್ತು. ಈಗ ಅದು ಆಯಿಲ್‌ಮಿಲ್ ಆಗಿದೆ) ವಖಾರ, ಕೆಲವು ಮನೆಗಳು ಮತ್ತು ಕಿಲ್ಲೆಯೊಳಗಿನ ದೊಡ್ಡ ಬಂಗ್ಲೆ ಹಾಗೂ ಖಾಲಿ ಪ್ರದೇಶ ಇವೆಲ್ಲ ಬಂದವು. ಊರೊಳಗೂ ಕೆಲವು ಮನೆಗಳು ಇದ್ದವು. ಆಗ ದೊಡ್ಡ ಬಂಗ್ಲೆಯಲ್ಲಿ ಕರ್ನಾಟಕ ಹೈಸ್ಕೂಲ ನಡೆಯುತ್ತಿತ್ತು. ಹೈಸ್ಕೂಲು ತನ್ನ ಸ್ವಂತ ಕಟ್ಟಡಕ್ಕೆ ಹೋದ ಮೇಲೆ, ಅರ್ಧ ಭಾಗದಲ್ಲಿ ರುದ್ರಮ್ಮನವರು ವಾಸಿಸುತ್ತಿದ್ದರು, ಉಳಿದ ಭಾಗವನ್ನೆಲ್ಲ ಬಾಡಿಗೆ ಕೊಟ್ಟಿದ್ದರು. ರುದ್ರಮ್ಮನವರು ಕೆಲವು ಕಾಲ ಜಿನ್ನಿಂಗ ಫ್ಯಾಕ್ಟರಿಯಲ್ಲಿಯೂ ಇರುತ್ತಿದ್ದರು".[೧೪]

ಡೆಪ್ಯೂಟಿಯವರ ಮೊಮ್ಮಗ ಚಂದ್ರಶೇಖರನ ವಿದ್ಯಾಭ್ಯಾಸವು ಕರ್ನಾಟಕ ಹೈಸ್ಕೂಲಿನಲ್ಲಿಯೇ ಆಯಿತು. ಅವನ ವಿದ್ಯಾರ್ಜನೆ ಅಷ್ಟೊಂದು ಆಶಾದಾಯಕವಾಗಿರಲಿಲ್ಲ. ಇದನ್ನು ಗಮನಿಸಿದ ರುದ್ರಮ್ಮ ತನ್ನ ಪಾಲಿನ ಆಸ್ತಿಯನ್ನೆಲ್ಲ ಚಂದ್ರಶೇಖರನ ಹೆಸರಿಗೆ ಬಕ್ಷೀಸು ಮಾಡಿಬಿಟ್ಟಳು. ಅವನು ಲಗ್ನ ಮಾಡಿಕೊಂಡು ಜಿನ್ನಿಂಗ ಫ್ಯಾಕ್ಟರಿ ನೋಡಿಕೊಂಡು ಹೋಗಬೇಕೆಂದು ರುದ್ರಮ್ಮನ ಅಪೇಕ್ಷೆಯಾಗಿದ್ದಿತು. ಲಗ್ನಮಾಡಲು ಹವಣಿಸಿದಾಗ ಚಂದ್ರಶೇಖರನಿಗೆ ಬೇಗ ವಿವಾಹಯೋಗ ಕೂಡಿ ಬರಲಿಲ್ಲ. ಯಾಕೆಂದರೆ ಆಗಾಗ ಅವನು ಮೂರ್ಛೆರೋಗದಿಂದ ಬಳಲುತ್ತಿದ್ದನು. ಕೊನೆಗೊಮ್ಮೆ ಸಮೀಪದ ಆಪ್ತರಾದ ಬುಡರಕಟ್ಟಿ ಗ್ರಾಮದ ಶಂಕರೆಪ್ಪ ವೀರಪ್ಪ ಕುಂದಗೋಳ ಎಂಬವರ ಕನ್ಯೆ ಪಾರ್ವತಿದೇವಿಯೊಂದಿಗೆ ಕಿಲ್ಲೆಯೊಳಗಿನ ಬಂಗ್ಲೆಯಲ್ಲಿ ಲಗ್ನಸಮಾರಂಭವು ನೆರವೇರಿತು (೧೯೩೪ ಎಪ್ರೀಲ್). ಈ ಸಂದರ್ಭದಲ್ಲಿ ಅತ್ತೆ ರುದ್ರಮ್ಮನವರ ಹಾಗೂ ಅಜ್ಜ ಚೆನ್ನಬಸಪ್ಪನವರ ಭಾವಚಿತ್ರಗಳನ್ನು ಬರೆಯಿಸಿ ಮನೆಯಲ್ಲಿ ಹಾಕಿದ ಶ್ರೇಯಸ್ಸು ಚಂದ್ರಶೇಖರ ಅವರದಾಗಿದೆ. ತತ್ತಿಯಾಕಾರದ(egg shape)ಲ್ಲಿರುವ ಚೆನ್ನಬಸಪ್ಪನವರ ಭಾವಚಿತ್ರವೊಂದು ತೋಟಪ್ಪನವರ ಹಳೆಮನೆಯಲ್ಲಿದೆ. ಆ ಭಾವಚಿತ್ರದ ಕೆಳಗಡೆ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್ ಧಾರವಾಡ ಎಂದು ಬರೆಯಲಾಗಿದೆ. ಇದು ಶಾರದಾ ಸ್ಟೋರ್ಸ ಧಾರವಾಡದಲ್ಲಿ ಸಿದ್ಧಗೊಂಡಿದೆ. ಇದೇ ಮಾದರಿಯ ಭಾವಚಿತ್ರವೊಂದು ಧಾರವಾಡದ ಲಿಂಗಾಯತ ಟೌನ್‌ಹಾಲ್‌ನಲ್ಲಿದೆ. ಬಹುಶಃ ಚಂದ್ರಶೇಖರ ಇದರ ಮರುಪ್ರತಿ ಮಾಡಿಸಿ ಮನೆಯಲ್ಲಿ ಹಾಕಿಸಿರಬೇಕು. ಮುಂದೆ ಚಂದ್ರಶೇಖರ ಯಾವುದೋ ಒಂದು ವ್ಯಾಧಿಯಿಂದ ಬಳಲಿ ಮೂವತ್ತನೆಯ ವಯಸ್ಸಿಗೇ ತೀರಿಕೊಂಡರು. ಇವರು ಸಾಯುವ ಮೂರು ದಿನ ಮುಂಚೆ ಪಾರ್ವತಿದೇವಿಗೆ ಒಂದು ಗಂಡುಮಗುವಾಯಿತು. ಆ ಹುಡುಗನೇ ಚೆನ್ನಬಸಪ್ಪನವರ ಮರಿಮೊಮ್ಮಗ ತೋಟಪ್ಪ. ಇವರ ಮೊದಲನೆಯ ಹೆಂಡತಿ ತೀರಿಕೊಂಡದ್ದರಿಂದ ಬಾಗಲಕೋಟೆಯ ಎಂ.ಜಿ.ಅಂಗಡಿಯವರ ಮಗಳೊಂದಿಗೆ ಎರಡನೆಯ ವಿವಾಹವಾಯಿತು. ಅವರ ಹೆಸರು ಸರ್ವಮಂಗಳಾದೇವಿ. ಈ ವಿವಾಹ ೧೯೭೩ ಮೇ ತಿಂಗಳಲ್ಲಿ ಟ್ಯಾಗೋರಹಾಲ್ ಧಾರವಾಡದಲ್ಲಿ ನೆರವೇರಿತು. ಈ ದಂಪತಿಗಳಿಗೆ ಸುಜ್ಞಾನಿ ಹೆಸರಿನ ಒಬ್ಬಳೇ ಒಬ್ಬ ಮಗಳಿದ್ದಾಳೆ. ಸುಮಾರು ೫೦ ವರ್ಷ ವಯಸ್ಸಿನ (೧೯೯೩) ಶ್ರೀ ತೋಟಪ್ಪ ಅವರು ಸೋದರಮಾವಂದಿರಾದ ಶ್ರೀ ಸಿದ್ದಣ್ಣ ಕಲಾದಗಿ (ಕುಂದಗೋಳ), ಶ್ರೀ ಅಪ್ಪಣ್ಣ ಕುಂದಗೋಳ ಅವರೊಂದಿಗೆ ಧಾರವಾಡದಲ್ಲಿ ವ್ಯಾಪಾರೋದ್ಯಮದಲ್ಲಿ ತೊಡಗಿದ್ದಾರೆ. ಈ ವರೆಗೆ ವಿವರಿಸಿದ ಚೆನ್ನಬಸಪ್ಪನವರ ವಂಶಚಿತ್ರ ಹೀಗಿದೆ :

---

೧೪. ಕನ್ನಡದದೀಪ : ಹಂಜಿ, ಸ.ವೀ. ಲಿಂಗೈಕ್ಯ ಡೆಪ್ಯೂಟಿ ಚೆನ್ನಬಸಪ್ಪನವರ ವಂಶಜರು. ಪುಟ. ೪.




ಚೆನ್ನಬಸಪ್ಪನವರು ಬಾಳಿದ್ದು ಕೇವಲ ೪೭ ವರ್ಷಗಳು ಮಾತ್ರ. ಇದರಲ್ಲಿ ಸುಮಾರು ೨೨ ವರ್ಷ ಬಾಲ್ಯ ಮತ್ತು ವಿದ್ಯಾರ್ಜನೆಯಲ್ಲೇ ಕಳೆದುಹೋದವು. ಒಂದು ವರ್ಷ ಅಂಚೆಖಾತೆಯ ಸೇವೆಗೆ ವ್ಯಯವಾಯಿತು. ಆಮೇಲೆ ಅವರು ೨೪ ವರ್ಷ ತಮ್ಮನ್ನು ಶಿಕ್ಷಣ ಇಲಾಖೆಗೆ ಅರ್ಪಿಸಿಕೊಂಡದ್ದು. ಸಾಮಾನ್ಯರ ಜೀವನದಲ್ಲಿ ಈ 'ಅವಧಿ' ಲೆಕ್ಕಕ್ಕೇ ಅಲ್ಲ. ಇದನ್ನೆಲ್ಲ ಮೆಲಕು ಹಾಕುತ್ತ ಹೋದ ಹಾಗೆ ಡೆಪ್ಯೂಟಿಯವರ ಮಹತ್ವಾಕಾಂಕ್ಷೆ-ಪರಿಶ್ರಮಗಳ ವಿರಾಟಸ್ವರೂಪ ಎದುರು ನಿಲ್ಲುತ್ತದೆ. ತಮ್ಮ ಆಯುಷ್ಯ ಜಲದ ಪ್ರತಿಕ್ಷಣಗಳನ್ನು ಅವರು ತೀರ್ಥದಂತೆ ಪವಿತ್ರವಾಗಿ ಎಚ್ಚರಿಕೆಯಿಂದ ಬಳಸಿದರು. ಆ ತೀರ್ಥದ ಫಲ ಕನ್ನಡದ ಅರುಣೋದಯ. ಮುಕ್ಕಾಲುಪಾಲುಜನ ಸಮಾಜದ ಋಣದಲ್ಲಿ ಸಾಯುತ್ತಾರೆ; ಡೆಪ್ಯೂಟಿಯಂಥವರು ಮಾತ್ರ ಸಮಾಜದ ಮೇಲೆ ಋಣ ಹೊರಿಸಿ ಹೋಗುತ್ತಾರೆ.

ಡೆಪ್ಯೂಟಿಯವರು ದೈವಾಧೀನರಾಗುವ ಒಂದು ವರ್ಷ ಮೊದಲಿನಿಂದಲೂ ಅವರು ಆಗಾಗ ಅಜಾರಿ ಬೀಳುತ್ತಿದ್ದ ವಿಷಯ ಕನ್ನಡ ಶಾಲಾ ಪತ್ರಕಗಳಲ್ಲಿ ಹಲವು ಬಾರಿ ಪ್ರಕಟವಾದುದುದನ್ನು ನೋಡಿದರೆ, ಆಗಲೇ ಅವರ ದೇಹಸ್ಥಿತಿ ಸಾಕಷ್ಟು ವಿಷಮಿಸಿದ್ದು ಗೊತ್ತಾಗುತ್ತದೆ. ಇದಕ್ಕಾಗಿ ಕೆಲವು ಸಲ ದೀರ್ಘ ರಜೆ ಪಡೆದದ್ದೂ ಉಂಟು. ಈ ವಿಷಯವನ್ನು ಸೂಚಿಸುವ ಕೆಲವು ವರದಿಗಳು ಹೀಗಿವೆ :

---

* 'ಕನ್ನಡದ ದೀಪ' ಪುಸ್ತಕದಲ್ಲಿ ಶಿವಲಿಂಗವ್ವನ ಮಗಳ ಹೆಸರು ಕಾಶವ್ವ ಎಂದು ಹೇಳಲಾಗಿದೆ. ಆದರೆ ಆಕೆಯ ನಿಜವಾದ ಹೆಸರು ತೇಜವ್ವ. ತೇಜವ್ವನ ಮಗಳು ಕಾಶವ್ವ ಎಂಬುದು ಈಗ ಸ್ಪಷ್ಟವಾಗಿದೆ.

"ರಾ.ಸಾ.ಚೆನ್ನಬಸಪ್ಪನವರಿಗೆ ಈ ತಿಂಗಳಲ್ಲಿ ಮೂರು ನಾಲ್ಕು ದಿವಸ ಸ್ವಲ್ಪ ಜ್ವರ ಬಂದು ಒಂದು ದಿವಸ ಒಮ್ಮಿಂದೊಮ್ಮೆ ವಾಯುವಾಗಿ ಸಂಕಟದ ಸಮಯ ಒದಗಿತ್ತು. ಆದರೆ ಡಾ.ಭೇಲ್ ದೊರೆಗಳೆ ಶ್ರಮಪಟ್ಟು ತಕ್ಕ ಕಾಲಕ್ಕೆ ಉಪಾಯ ಮಾಡಿದ್ದರಿಂದ ವಾಯುವು ತತ್ಕಾಲಕ್ಕೆ ಇಳಿದು ಅಣ್ಣಾನವರು ಈಗ ಕ್ಷೇಮವಾಗಿದ್ದಾರೆ".

"ರಾವ್‌ಸಾಹೇಬ ಚೆನ್ನಬಸಪ್ಪನವರು ೨ ತಿಂಗಳಿನ ರಜೆ ತಕ್ಕೊಂಡದರಿಂದ ಅವರ ಕೆಲಸವನ್ನು ರಾ.ಸಾ.ಶ್ರೀನಿವಾಸ ಕೊನೇರ ರೊದ್ದ ಇವರು ನಡೆಸುತ್ತಾರೆ".

"ರಾ.ಸಾ.ಚೆನ್ನಬಸಪ್ಪನವರ ಪ್ರಕೃತಿಯು ಮಧ್ಯದಲ್ಲಿ ಬಹಳ ಹೈರಾಣವಾಗಿತ್ತು. ಈಗ ವೊಳಿತಾಗಿದ್ದಾರೆ. ಅಣ್ಣಾವರು ಸಿಕ್ಕ (sick) ರಜೆಯನ್ನು ತಕ್ಕೊಂಡದ್ದರಿಂದ ಅವರ ಕೆಲಸಕ್ಕೆ ರಾ.ರಾ.ಶ್ರೀನಿವಾಸ ಕೊನೇರ ಇವರನ್ನು ನೇಮಿಸಿ, ಇವರ ಕೆಲಸಕ್ಕೆ ಇಲ್ಲಿಯ ಹೈಸ್ಕೂಲಿನಲ್ಲಿ ಅಸಿಸ್ಟಂಟ್ ಮಾಸ್ತರರಾದ ರಾ.ರಾ. ಬಾಬಾಚಾರ್ಯ ಕೆರೂರ ಇವರನ್ನು ನೇಮಿಸತಕ್ಕವರಿದ್ದಾರೆಂದು ಕೇಳುತ್ತೇವೆ". - ಈ ವೃತ್ತಾಂತಗಳು ಡೆಪ್ಯೂಟಿಯವರ ಪ್ರಕೃತಿಯಲ್ಲಿ ವ್ಯತ್ಯಾಸವಾಗುತ್ತಿರುವುದನ್ನು ದೃಢಪಡಿಸುತ್ತವೆ. ಬರಬರುತ್ತ ಅವರು ಕ್ಷೀಣಿಸುತ್ತಲೇ ಹೋದರೆಂದು ತೋರುತ್ತದೆ. ಪೂರ್ತಿ ಚೇತರಿಸಿಕೊಂಡು ಅವರು ಗುಣಮುಖರಾಗಲಿಲ್ಲ. ಸಾವು ಅವರನ್ನು ಸಮೀಪಿಸುತ್ತಲೇ ಬಂತು. ದಿನಾಂಕ ೪.೧.೧೮೮೧ ರಂದು ಅವರು ಕೊನೆಯುಸಿರೆಳೆದರು. ಆದರೆ ಕನ್ನಡದ ಪುಣ್ಯಪುರುಷ, ಕನ್ನಡದ ಶಕಪುರುಷ, ಕನ್ನಡದೀಪ, ನವಕರ್ನಾಟಕದ ನಿರ್ಮಾತೃ, ಕನ್ನಡ ಕುಲೋತ್ತೇಜಕ, ಮುಂತಾದ ಬಿರುದುಗಳ ಅನುರಣನೆ ಇನ್ನೂ ಕೇಳುತ್ತಲೇ ಇದೆ. ಮುಂದೆಯೂ ಕೇಳುತ್ತಲೇ ಇರುತ್ತದೆ. ಧಾರವಾಡದಲ್ಲೇ ಹುಟ್ಟಿ ಬೆಳೆದು ಇಲ್ಲಿಯೇ ದೇಹವಿಟ್ಟ ಡೆಪ್ಯೂಟಿಯವರನ್ನು ಇಲ್ಲಿಯ ಹೊಸಯಲ್ಲಾಪೂರ ಓಣಿಯಲ್ಲಿರುವ, ಈಗಲೂ ಪ್ರತಿಷ್ಠಿತರನ್ನೆಲ್ಲ ಸಮಾಧಿ ಮಾಡುವ ಹಿರೇಮಠದಲ್ಲಿ ಸಂಸ್ಕಾರಮಾಡಿರಬೇಕೆಂದು ಪ್ರತೀತಿ ಇದೆ. ಈ ಸಂಗತಿಯನ್ನು ಎಸ್.ಬಿ.ಹಳಕಟ್ಟಿಯವರೂ ಬೆಂಬಲಿಸುತ್ತಾರೆ. ಆದರೆ ನನ್ನ ಕ್ಷೇತ್ರಕಾರ್ಯದಲ್ಲಿ ಅಲ್ಲಿರುವ ಸಮಾಧಿಗಳಿಂದ, ಪ್ರತೀತಿಯನ್ನು ಖಾತ್ರಿಪಡಿಸುವ ಯಾವ ಕುರುಹೂ ಲಭಿಸಲಿಲ್ಲ.

ಚೆನ್ನಬಸಪ್ಪನವರ ಮರಣದ ಸುದ್ದಿ ಹಲವು ಕಡೆ ಉಲ್ಲೇಖವಾಗಿದೆ. ಈ ಬಗೆಗಿನ ಅತ್ಯಂತ ಪ್ರಮುಖ ದಾಖಲೆಯೆಂದರೆ ಆ ವರ್ಷದ ಕನ್ನಡ ಶಾಲಾಪತ್ರಕ. ಅದರಲ್ಲಿ 'ವೃತ್ತಾಂತ'ಗಳನ್ನು ಪ್ರಕಟಿಸುತ್ತ ಚೆನ್ನಬಸಪ್ಪನವರ ಮರಣ ಸುದ್ದಿಯನ್ನು ಹೀಗೆ ಪ್ರಕಟಿಸಲಾಗಿದೆ:

೧. "ನಾವು ಅತ್ಯಂತ ಕ್ಲೇಶದಿಂದ ತಿಳಿಯಪಡಿಸುವುದೇನೆಂದರೆ - ಈ ತಿಂಗಳಿನ ೪ನೇ ತಾರೀಖಿನಲ್ಲಿ ರಾವಸಾಹೇಬ ಚೆನ್ನಬಸಪ್ಪಣ್ಣನವರು ಮರಣಹೊಂದಿದರು. ಇವರಿಗೆ ಈಗ ಎರಡು ವರ್ಷದಿಂದ ಜ್ವರವು ಆಗಾಗ್ಗೆ ಬರುತ್ತಿತ್ತು. ಕಡೆಯಲ್ಲಿ ಅದೇ ಜ್ವರವು ಮರಣಕ್ಕೆ ಕಾರಣವಾಯಿತು. ವಿದ್ವತ್, ಉದ್ಯೋಗ ಧೈರ್ಯ, ಅಭಿಮಾನ ಮುಂತಾದ ಸದ್ಗುಣಗಳು ಅವರಲ್ಲಿ ಹೊಗಳತಕ್ಕಂಥವಿದ್ದವು. ಇವರ ಮರಣದಿಂದ ವಿದ್ಯಾಶಾಖೆಯೊಳಗಿಂದೊಂದು ಬೆಲೆಯುಳ್ಳ ರತ್ನವೇ ಹೋಯಿತೆಂದು ನೋಡಿ ನಾವು ಕಡು ಖಿನ್ನರಾಗಿರುತ್ತೇವೆ. ಇವರ ಹೆಸರಿನಿಂದ ಏನಾದರೂ ಸ್ಮಾರಕ ಕೃತ್ಯ ಮಾಡುವ ಉದ್ಯೋಗವನ್ನು ಇವರ ಸ್ನೇಹಿತರು ಮುಂತಾದವರು ನಡೆಸಿರುತ್ತಾರೆ".

೨. "ಟ್ರೇನಿಂಗ ಕಾಲೇಜ ವಿದ್ಯಾರ್ಥಿಯಾದ ಶಿವಾಜೀ ಯಜ್ಞೇಶ್ವರ ವಾಜಪೇಯಿಯೆಂಬವರು ರಾ.ಸಾ.ಚೆನ್ನಬಸಪ್ಪನವರ ಮರಣದ ಮೂಲಕವಾದ 'ಶೋಕಾರ್ತಗೀತ' ಎಂಬ ಸಂಣದೊಂದು ಕವಿತಾ ಗ್ರಂಥವನ್ನು ಛಾಪಿಸಿ, ಅದರದೊಂದು ಪ್ರತಿಯನ್ನು ನಮಗೆ ಕಳುಹಿಸಿದ್ದು ಮುಟ್ಟಿತು. ಇದರಲ್ಲಿ ಸರಸವಾದ ನಾಲ್ವತ್ತು ಪದ್ಯಗಳಿದ್ದು, ಗ್ರಂಥಕರ್ತನು ಅಂಣನವರ ಮರಣದ ಶೋಕವನ್ನು ಬಹುಮನೋವೇದಕವಾಗಿ ಪ್ರಕಟಿಸಿದ್ದಾನೆ. ಇದನ್ನು ಮಾಸ್ತರ ಜನರು ಓದಬೇಕೆಂದು ನಮ್ಮ ಸೂಚನೆಯುಂಟು. ಕ್ರಯ ೨ ಆಣೆ. ಈ ಪುಸ್ತಕಕೊಳ್ಳಲಿಚ್ಛಿಸುವರು ಸದರಿಯವರ ಕಡೆಗೆ ಸದರಿ ಹಣವನ್ನು ಹಾಗೂ ಅರ್ಧ ಆಣೆ ಟಪಾಲ ಹಾಸಲವನ್ನೂ ಕೊಟ್ಟುಕಳುಹಿಸಿದರೆ ಪುಸ್ತಕಗಳು ತಪ್ಪದೆ ಮುಟ್ಟುವವು".[೧೫]

೩. "ಧಾರವಾಡ ಜಿಲ್ಲೆಯ ಡೆಪ್ಯೂಟಿ ಇನ್‌ಸ್ಪೆಕ್ಟರ ಸ್ಥಳಕ್ಕೆ ಇನ್ನೂ ಯಾರೂ ಮೋಕರರು ಆದಂತೆ ಕಾಣುವದಿಲ್ಲ. ಮುಂದಿನ ತಿಂಗಳು ಕೆಲವು ಕಾಯಂ ನೇಮಣೂಕಿಗಳು ಆಗತಕ್ಕವಿರುತ್ತವೆಂದು ಕೇಳುತ್ತೇವೆ".[೧೬]

ಇಂಥದೇ ಇನ್ನೊಂದು ಉಲ್ಲೇಖ ೧೮೮೦-೮೧ನೇ ಸಾಲಿನ ವಿದ್ಯಾಖಾತೆಯ ವರದಿಯಲ್ಲಿ ನೋಡಲು ಸಿಗುತ್ತದೆ. ಆಗಿನ ಡೈರೆಕ್ಟರರು ಹೀಗೆ ಬರೆದಿದ್ದಾರೆ : "ಶ್ರೀ ಚೆನ್ನಬಸಪ್ಪನವರು ಪ್ರಾಮಾಣಿಕ, ಅನುಭವಿಕ, ಸಮರ್ಥ ಮತ್ತು ಉತ್ಸಾಹಿ ಇನ್‌ಸ್ಪೆಕ್ಟರ ಆಗಿದ್ದರು. ಅಂಥವರನ್ನು ೪.೧.೧೮೮೧ ರಂದು ವಿದ್ಯಾಇಲಾಖೆಯು ಕಳೆದುಕೊಂಡಿತು".[೧೭] ಡೆಪ್ಯೂಟಿಯವರನ್ನು ಕಳೆದುಕೊಂಡು ವಿದ್ಯಾಇಲಾಖೆ ಅಷ್ಟೇ ಅಲ್ಲ, ಇಡೀ ಕನ್ನಡನಾಡೇ ಬಹುದೊಡ್ಡ ನಷ್ಟವನ್ನು ಅನುಭವಿಸುವಂತಾಯಿತು. ಇದನ್ನು ಅರ್ಥಮಾಡಿಕೊಂಡ ವೆಂಕಟೇಶ ಸಾಂಗಲಿಯವರ "ಪೂರ್ಣಾಯುಷ್ಯವನ್ನು ಪಡೆದು ಇನ್ನಷ್ಟು ದುಡಿಯುವ ಅವಕಾಶ ಅವರಿಗೆ (ಚೆನ್ನಬಸಪ್ಪನವರಿಗೆ) ದೊರೆತಿದ್ದರೆ ನಮ್ಮ ನಾಡಿನ ಚಿತ್ರ ಇಂದಿನಂತಿರುತ್ತಿರಲಿಲ್ಲ. ಆದರೆ ಅವರು ಮಾಡಿದ ಕೆಲಸವನ್ನು ಸ್ಮರಿಸದಿರುವುದೂ, ಅವರು ಹೇಳಿಹೋದ ಮಾತುಗಳನ್ನು ದುರ್ಲಕ್ಷಿಸುವುದೂ, ನಮ್ಮ ಆತ್ಮವಿಸ್ಮರಣೆಯ ಲಕ್ಷಣ" ಎಂಬ ಮಾತುಗಳು ಮನನೀಯವಾಗಿವೆ.

ಅರಟಾಳ ರುದ್ರಗೌಡರು ಎರಡು ಸಂದರ್ಭಗಳಲ್ಲಿ ಈ ವಿಷಯವನ್ನು ಟಿಪ್ಪಣಿ ಮಾಡಿದ್ದಾರೆ. ಡೆಪ್ಯೂಟಿಯವರ ಬುದ್ಧಿಮತ್ತೆ, ಸಮಾಜ ಹಿತದೃಷ್ಟಿ, ಅವರ ಗುಣಸ್ವಭಾವ ಇವುಗಳನ್ನು ಕೊಂಡಾಡುತ್ತ "ಇವರು ಧಾರವಾಡದಲ್ಲಿ ತಮ್ಮ ಮನೆಯಲ್ಲಿಯೇ ಕ್ರಿ.ಶ.೧೮೮೧ನೇ ಇಸವಿಯ ಜಾನೇವರಿ ತಿಂಗಳಲ್ಲಿ ಮೃತರಾದರು. ಇವರ ಮರಣದಿಂದ ವೀರಶೈವ ಜನಾಂಗಕ್ಕೆಲ್ಲ ಮಹಾದುಃಖವಾಯಿತು"[೧೮] ಎಂದು ಹೇಳಿದರೆ, ಮತ್ತೊಂದು ಸಂದರ್ಭದಲ್ಲಿ ಚೆನ್ನಬಸಪ್ಪನವರು ಬೋರ್ಡಿಂಗ ಸಲುವಾಗಿ ಮಾಡಿದ ಸಾಲವನ್ನು ತೀರಿಸಿದ ಪ್ರಸಂಗವನ್ನು ವಿವರಿಸುತ್ತ ಅವರೇ

---

೧೫. ವಾಜಪೇಯಿ ಯಜ್ಞೇಶ್ವರ ಶಿವಾಜೀ ಬರೆದ 'ಶೋಕಾರ್ತಗೀತ' ಈಗ ಎಲ್ಲಿಯೂ ದೊರಕುವುದಿಲ್ಲ. ಅದು ಸಿಕ್ಕಿದರೆ ಚೆನ್ನಬಸಪ್ಪನವರ ವ್ಯಕ್ತಿತ್ವದ ಬಗ್ಗೆ ಹೆಚ್ಚಿನ ಸಂಗತಿಗಳು ತಿಳಿಯಬಹುದಾಗಿತ್ತು.

೧೬. ಕನ್ನಡ ಶಾಲಾ ಪತ್ರಕವು: ೧೮೮೧ ಜನೇವರಿ (ವೃತ್ತಾಂತಗಳು).

೧೭. Mr. Chanabassappa in whom this department has lost much more than an honest, experienced, able and zealous Inspector, died on 4th Jan. 1881.

೧೮. ಉಲ್ಲೇಖ : ಕನ್ನಡದದೀಪ, ಪುಟ. ೪೪.
ಅರಟಾಳ ರುದ್ರಗೌಡಾ ಚೆನ್ನವೀರಗೌಡಾ : ಜೀವನಚರಿತ್ರ ಭಾಗ-೧.
(ಹಿರೇಮಠ ಚೆನ್ನಬಸವಯ್ಯಾ ಬಸವಯ್ಯಾ, ಉರ್ಫ ಕಂಬಿ) ಪುಟ. ೮೭.

"ಮಿ.ಚೆನ್ನಬಸಪ್ಪನವರಿಗೆ ಧಾರವಾಡ ಜಿಲ್ಲೇದ ಡೆಪ್ಯೂಟಿ ಎಜ್ಯುಕೇಶನಲ್ ಇನ್ಸಪೆಕ್ಟರ್ ಜಾಗಕ್ಕೆ ವರ್ಗವಾಯಿತು. ಮುಂದೆ ಸ್ವಲ್ಪಕಾಲದಲ್ಲಿಯೇ ಅಂದರೆ ಸನ್ ೧೮೮೦ನೇ ಇಸವಿಯ ಡಿಸೆಂಬರ ಅಥವಾ ಜನೆವರಿ ತಿಂಗಳಲ್ಲಿ ಧಾರವಾಡ ಮುಕ್ಕಾಂನಲ್ಲಿ ಅಣ್ಣನವರು ಶಿವಾಧೀನರಾದರು. ಇವರ ಮರಣ ಸಮಯದಲ್ಲಿ ನಾನು ಜ್ವರದಿಂದ ಪೀಡಿತನಾಗಿ ಹುಣಿಸೆಹಣ್ಣಿನ ಬಸೆಟ್ಟಿಯವರ ಮನೆಯಲ್ಲಿದ್ದೆನು. ಕಾರಣ ಇವರ ದಪನ ಕಾಲಕ್ಕೆ ಹೋಗುವುದು ನನ್ನಿಂದಾಗಲಿಲ್ಲ"[೧೯] ಎಂದಿದ್ದಾರೆ. ಇಲ್ಲಿ ಡೆಪ್ಯೂಟಿಯವರ ಮರಣದ ಕಾಲಾವಧಿಯಲ್ಲಿ ಇರುವ ವ್ಯತ್ಯಾಸ ಗಮನಾರ್ಹ. ರುದ್ರಗೌಡರೇ ಒಮ್ಮೆ ಜನೆವರಿ ೧೮೮೧ ಎಂದೂ ಇನ್ನೊಮ್ಮೆ ಡಿಸೆಂಬರ ಅಥವಾ ಜನೆವರಿ ೧೮೮೦ ಎಂದೂ ಹೇಳಿರುವುದು ಅಭಿಪ್ರಾಯ ವೈರುಧ್ಯಕ್ಕೆ ಎಡೆಮಾಡಿಕೊಟ್ಟಿದೆ. ಇದು ಕಣ್ತಪ್ಪಿನಿಂದಾದ ವ್ಯತ್ಯಾಸವಾಗಿದ್ದು, ಅವರು ತೀರಿಕೊಂಡ ನಿರ್ದಿಷ್ಟ ದಿನಾಂಕ ೪.೧.೧೮೮೧ ಆಗಿದೆ.

ಶ್ರೀ ಫ.ಗು.ಹಳಕಟ್ಟಿಯವರೂ ಡೆಪ್ಯೂಟಿಯವರು ತೀರಿಕೊಂಡ ವಿಷಯವನ್ನು ಮನಸ್ಸಿಗೆ ಅಚ್ಚೊತ್ತುವಂತೆ ಬಣ್ಣಿಸಿದ್ದಾರೆ. ಅವರು "ಚೆನ್ನಬಸಪ್ಪನವರಲ್ಲಿ ಅನೇಕ ಅಮೂಲ್ಯವಾದ ಗುಣಗಳಿದ್ದವು. ಆದ್ದರಿಂದ ಅವರು ತಮ್ಮ ನಾಡಿನವರಲ್ಲಿ ಬಹು ಪ್ರಿಯರಾಗಿದ್ದರು. ಅವರು ತಮ್ಮ ಜನರಲ್ಲಿ ಕೇವಲ ಒಬ್ಬ ಸರಕಾರೀ ಅಧಿಕಾರಿಯಂತೆ ವ್ಯವಹರಿಸದೆ, ಒಬ್ಬ ಬೋಧಕನಂತೆ ವ್ಯವಹರಿಸಿದರು. ಆದ್ದರಿಂದ ಅವರು ನಮ್ಮ ಕರ್ನಾಟಕಸ್ಥರು ಸದಾ ನೆನಪಿಸತಕ್ಕವರಾದ ಒಬ್ಬ ದೊಡ್ಡ ಮನುಷ್ಯರಾಗಿದ್ದಾರೆ. ಅವರು ಇನ್ನೂ ಹೆಚ್ಚು ದಿವಸ ಬಾಳಿದ್ದರೆ ಅವರು ಹೆಚ್ಚಿನ ಪದವಿಗೆ ಏರಿ ನಮ್ಮ ದೇಶಕಲ್ಯಾಣ ಮಾಡಬಹುದಾಗಿತ್ತು. ಯಾಕೆಂದರೆ ಅವರ ಮೇಲೆ ಸರಕಾರದವರ ಮತ್ತು ಸ್ವಜನರ ಪ್ರೀತಿಯು ಸಂಪೂರ್ಣವಾಗಿತ್ತು. ಆದರೆ ಅವರು ಬಹಳ ದಿವಸ ಬಾಳಲಿಲ್ಲ. ಅವರಿಗೆ ಬಹುಮೂತ್ರ ವಿಕಾರ ಉಂಟಾಗಿ ಅವರು ತಮ್ಮ ವಯಸ್ಸಿನ ೪೭ನೆಯ ವರ್ಷದಲ್ಲಿಯೇ ಅಂದರೆ ಸನ್ ೧೮೮೧ನೇ ಇಸವಿಯ ಜನೇವರಿ ೪ನೇ ತಾರೀಖಿನ ದಿವಸ ಧಾರವಾಡದಲ್ಲಿ ದೇಹಬಿಟ್ಟರು.

ಅವರು ಈ ಮೇರೆಗೆ ಅಲ್ಪವಯಸ್ಸಿನಲ್ಲಿ ತೀರಿಕೊಂಡದ್ದಕ್ಕೆ ಆಗಿನ ಕಾಲದ ಜನರು ಬಹಳ ಹಳಹಳಿಸಿದರು. ಅವರ ನಿಧನ ಸಮಯ ಒಬ್ಬ ಸಾರ್ವಜನಿಕ ದೊಡ್ಡ ಗೃಹಸ್ಥನಿಗೆ ಕೊಡಬೇಕಾದ ಮಾನಮರ್ಯಾದೆಗಳನ್ನು ಧಾರವಾಡ ಪಟ್ಟಣದೊಳಗಿನ ಎಲ್ಲ ಜಾತಿಯ ಜನರು ಕೊಟ್ಟು ಅವರ ಮೇಲಿದ್ದ ತಮ್ಮ ಪ್ರೀತಿಯನ್ನು ವ್ಯಕ್ತಗೊಳಿಸಿದರು. ಇಂಥ ಕರ್ತೃತ್ವ ಶಕ್ತಿಯುಳ್ಳ ಮಹಾಪುರುಷರು ನಮ್ಮ ಕರ್ನಾಟಕಶೀಮಿಯಲ್ಲಿ ಜನಿಸಲೆಂದು ನಾವು ಕೋರಿ ಈ ಚಿಕ್ಕ ಚರಿತ್ರೆಯನ್ನು ಸಮಾಪ್ತಿಗೊಳಿಸುತ್ತೇವೆ"[೨೦] ಎಂದಿದ್ದಾರೆ. ಈ ಪ್ರಾಂಜಲ ಮನಸ್ಸಿನ ಮಾತುಗಳನ್ನು ಗಮನಿಸಿದಾಗ ಬದುಕಿನ ಅರ್ಥವೇನೆಂಬುದು ಥಟ್ಟನೆ ಹೊಳೆಯುತ್ತದೆ.



---

೧೯. ಅರಟಾಳ ರುದ್ರಗೌಡಾ ಚೆನ್ನವೀರಗೌಡಾ : ಜೀವನಚರಿತ್ರೆ ಭಾಗ-೨. ಪುಟ. ೧೦೬೭.

೨೦. ಹಳಕಟ್ಟಿ. ಫ.ಗು. : ಕೈ.ವಾ. ಚನ್ನಬಸಪ್ಪ ಬಸವಲಿಂಗಪ್ಪ ಧಾರವಾಡ ಇವರ ಚರಿತ್ರೆಯು. ಪುಟ. ೪೨.

ಅಧ್ಯಾಯ : ನಾಲ್ಕು

## ಡೆಪ್ಯೂಟಿ ಚೆನ್ನಬಸಪ್ಪನವರ ಕಾರ್ಯ ಮತ್ತು ಸಾಧನೆ :

೧. ನಾರ್ಮಲ್ ಸ್ಕೂಲ್ ಪ್ರಿನ್ಸಿಪಾಲ

೨. ಬೆಳಗಾವಿ ಟ್ರೇನಿಂಗ್ ಕಾಲೇಜಿನ ಪ್ರಥಮ ಪ್ರಿನ್ಸಿಪಾಲರು

೩. ಮಠಪತ್ರಿಕೆಯ ರೂವಾರಿ

೪. ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್

೫. ಲಿಂಗಾಯತ ಬೋರ್ಡಿಂಗ್ ಸಂಸ್ಥಾಪಕರು

## ನಾರ್ಮಲ್ ಸ್ಕೂಲ್ ಪ್ರಿನ್ಸಿಪಾಲ

ಹಲವು ವರ್ಷಗಳ ವರೆಗೆ ಧಾರವಾಡ ಪರಿಸರದಿಂದ ದೂರವಿದ್ದ ಚೆನ್ನಬಸಪ್ಪನವರಿಗೆ ಪುನಃ ಇಲ್ಲಿಯ ವಾತಾವರಣಕ್ಕೆ ಹೊಂದಿಕೊಳ್ಳುವ ತನಕ ಸ್ವಲ್ಪ ಕಷ್ಟವೆನಿಸಿತು. ಕ್ರಮೇಣ ಮುಖ್ಯ ಪ್ರವಾಹದೊಳಗೆ ಸೇರಿಕೊಂಡರು. ಪುಣೆಯಿಂದ ಹಿಂದಿರುಗಿದ ಆರಂಭದ ದಿನಗಳಲ್ಲಿ ಅಂಚೆ ಖಾತೆಯಲ್ಲಿ ಕೆಲವು ದಿನ ನೌಕರಿ ಮಾಡಿದರು.[೧] "ಧಾರವಾಡದ (ಆಗಿನ) ಪ್ರಧಾನ ಅಂಚೆ ಕಚೇರಿಯು ಕಿತ್ತೂರ ಚೆನ್ನಮ್ಮ ಪಾರ್ಕ ಹತ್ತಿರದ ಕಟ್ಟಡದಲ್ಲಿತ್ತು. ಈ ಕಟ್ಟಡವು ಮೊದಲು ಮಿಲಿಟರಿ ಬರಾಕ್ ಆಗಿದ್ದು ಆಮೇಲೆ ಅಂಚೆ ಕಚೇರಿಗೆ ಹಸ್ತಾಂತರವಾಗಿರಬಹುದು. ಇದು ಧಾರವಾಡದಲ್ಲಿರುವ ಅತಿ ಹಳೆಯ ಸರಕಾರಿ ಕಟ್ಟಡ. ಇದೇ ಕಟ್ಟಡದ ಒಂದು ಭಾಗದಲ್ಲಿ ಕಿತ್ತೂರು ಚೆನ್ನಮ್ಮನನ್ನು ಕೆಲವು ದಿನ ಬಂಧಿಯಾಗಿ ಇಡಲಾಗಿತ್ತೆಂದೂ ಪ್ರತೀತಿ ಇದೆ".[೨] ಚೆನ್ನಬಸಪ್ಪನವರೂ ಇದೇ ಅಂಚೆ ಕಚೇರಿಯಲ್ಲಿ ಕೆಲಸ ಮಾಡಿರಬೇಕು.[೩] ಈ ಕೆಲಸದಲ್ಲಿ ಅವರು ಹೆಚ್ಚುಕಾಲ ಮುಂದುವರಿಯಲಿಲ್ಲ. ಒಂದು ವರ್ಷಕ್ಕಿಂತಲೂ ಕಡಿಮೆ ಅವಧಿ ಇಲ್ಲಿ ಕೆಲಸ ಮಾಡಿರಬೇಕು. ಧಾರವಾಡ, ಪುಣೆ, ಮತ್ತೆ ಧಾರವಾಡ ಹೀಗೆ ಒಟ್ಟು ಮೂರು ಹಂತಗಳಲ್ಲಿ ತಿರುವು ತೆಗೆದುಕೊಂಡ ಚೆನ್ನಬಸಪ್ಪನವರ ಜೀವನ ಕೊನೆಗೊಮ್ಮೆ ಧಾರವಾಡ ನಾರ್ಮಲ್ ಸ್ಕೂಲ್ ಪ್ರಿನ್ಸಿಪಾಲ ಆಗುವ ಮೂಲಕ ಶಿಕ್ಷಣ ಇಲಾಖೆಯತ್ತ ಹೊರಳಿತು.

---

೧. ಚೆನ್ನಬಸಪ್ಪನವರು ಅಂಚೆಖಾತೆಯಲ್ಲಿ ಯಾವ ಹುದ್ದೆ (Capacity)ಯಲ್ಲಿ ಕೆಲಸ ಮಾಡಿದರೆಂಬುದಕ್ಕೆ ನಿಖರವಾದ ಆಧಾರಗಳು ದೊರಕುವುದಿಲ್ಲ.
ಡಾ. ದ.ರಾ. ಬೇಂದ್ರೆ ಡಾ. ಶಂಬಾ. ಜೋಶಿ ಅವರೂ ಅಂಚೆ ಇಲಾಖೆಯಲ್ಲಿ ಕೆಲಸ ಮಾಡಿದ ಉಲ್ಲೇಖವಿದೆ.

೨. ಇನಾಂದಾರ ಎಂ.ಎಂ. ಅಂಚೆಪ್ರಪಂಚ ಪುಟ-೨೬

೩. "ಮೊದಲು ಅಂಚೆ ವ್ಯವಸ್ಥೆ ಒಂದು ಸ್ವಾಯತ್ತ ಸ್ವರೂಪದಲ್ಲೆ ಬೆಳೆದು ಬಂದು, ತರುವಾಯ ವಾರನ್ ಹೇಸ್ಟಿಂಗ್ಸ್‌ನ ಕಾಲದಲ್ಲಿ ಕಲಕತ್ತಾ ಜಿ.ಪಿ.ಓ (೧.೪.೧೭೭೪), ಮದ್ರಾಸ ಜಿ.ಪಿ.ಓ. (೧.೬.೧೭೮೬) ಮತ್ತು ಮುಂಬೈ ಜಿ.ಪಿ.ಓ (೧೭೮೭)ಗಳ ಸ್ಥಾಪನೆಯಿಂದ ಭಾರತದಾದ್ಯಂತ ಸಾರ್ವಜನಿಕ ಅಂಚೆವ್ಯವಸ್ಥೆ ವಿಸ್ತರಿಸಲ್ಪಟ್ಟಿತು." (ಅಂಚೆ ಪ್ರಪಂಚ (ಎಂ.ಎಂ. ಇನಾಂದಾರ-ಪು.೭) ಇದರ ಪ್ರತಿಫಲವಾಗಿ ಉತ್ತರ ಕರ್ನಾಟಕಕ್ಕೂ ಕ್ರಮೇಣ ಈ ಅಂಚೆವ್ಯವಸ್ಥೆಯ ಲಾಭ ತಟ್ಟಿತು. ೧೮೩೦ರ ಮುಂಬೈ ಗ್ಯಾಜೆಟ್ ಪ್ರಕಾರ ಧಾರವಾಡ, ಬೆಳಗಾವಿಗಳಲ್ಲಿ ಮಾತ್ರ ಅಂಚೆ ಕಚೇರಿಗಳಿದ್ದವು. ೧೮೧೮ರಿಂದ ೧೮೩೦ರ ವರೆಗೆ ಸೈನಿಕ ಆಡಳಿತದಲ್ಲಿದ್ದ ಧಾರವಾಡ ಪ್ರದೇಶವು ಸರಿಸುಮಾರು ಇದೇ ಹೊತ್ತಿಗೆ ಜಿಲ್ಲೆಯೆಂದು ಪರಿಗಣಿಸಲ್ಪಟ್ಟು ಮುಂಬೈ ಇಲಾಖೆಗೆ ಜೋಡಿಸಲ್ಪಟ್ಟಿತು. ೧೮೩೦ರ ಮುಂಬೈ ಇಲಾಖೆಯ ಅಂಚೆ ಕಚೇರಿಗಳ ದಾಖಲೆಯಲ್ಲಿಯೂ ಧಾರವಾಡದ ಹೆಸರಿದೆ. ಅಂದಮೇಲೆ ಇದಕ್ಕೂ ಒಂದು ದಶಕದ ಮೊದಲೇ(೧೮೨೦) ಧಾರವಾಡದ ಅಂಚೆಕಚೇರಿಯು ಪ್ರಾರಂಭವಾಗಿರಬಹುದು. ಮತ್ತು ಆ ಅಂಚೆ ವ್ಯವಸ್ಥೆ ಆಗ ಮಿಲಟರಿ ವ್ಯವಸ್ಥೆಗಾಗಿ ಇರಬಹುದು. ಮುಂದೆ ಚೆನ್ನಬಸಪ್ಪನವರು ಪುಣೆಯಿಂದ ಮರಳಿ ಬಂದ ಮೇಲೆ (೧೮೫೫-೫೬) ಇದೇ ಅಂಚೆಕಚೇರಿಯಲ್ಲಿ ತಾತ್ಕಾಲಿಕ ಸೇವೆ ಸಲ್ಲಿಸಿರಬೇಕು.

## ನಾರ್ಮಲ್ ಸ್ಕೂಲ್ ಪ್ರಿನ್ಸಿಪಾಲ

ಹಲವು ವರ್ಷಗಳ ವರೆಗೆ ಧಾರವಾಡ ಪರಿಸರದಿಂದ ದೂರವಿದ್ದ ಚೆನ್ನಬಸಪ್ಪನವರಿಗೆ ಪುನಃ ಇಲ್ಲಿಯ ವಾತಾವರಣಕ್ಕೆ ಹೊಂದಿಕೊಳ್ಳುವ ತನಕ ಸ್ವಲ್ಪ ಕಷ್ಟವೆನಿಸಿತು. ಕ್ರಮೇಣ ಮುಖ್ಯ ಪ್ರವಾಹದೊಳಗೆ ಸೇರಿಕೊಂಡರು. ಪುಣೆಯಿಂದ ಹಿಂದಿರುಗಿದ ಆರಂಭದ ದಿನಗಳಲ್ಲಿ ಅಂಚೆ ಖಾತೆಯಲ್ಲಿ ಕೆಲವು ದಿನ ನೌಕರಿ ಮಾಡಿದರು.[೧] "ಧಾರವಾಡದ (ಆಗಿನ) ಪ್ರಧಾನ ಅಂಚೆ ಕಚೇರಿಯು ಕಿತ್ತೂರ ಚೆನ್ನಮ್ಮ ಪಾರ್ಕ ಹತ್ತಿರದ ಕಟ್ಟಡದಲ್ಲಿತ್ತು. ಈ ಕಟ್ಟಡವು ಮೊದಲು ಮಿಲಿಟರಿ ಬರಾಕ್ ಆಗಿದ್ದು ಆಮೇಲೆ ಅಂಚೆ ಕಚೇರಿಗೆ ಹಸ್ತಾಂತರವಾಗಿರಬಹುದು. ಇದು ಧಾರವಾಡದಲ್ಲಿರುವ ಅತಿ ಹಳೆಯ ಸರಕಾರಿ ಕಟ್ಟಡ. ಇದೇ ಕಟ್ಟಡದ ಒಂದು ಭಾಗದಲ್ಲಿ ಕಿತ್ತೂರು ಚೆನ್ನಮ್ಮನನ್ನು ಕೆಲವು ದಿನ ಬಂಧಿಯಾಗಿ ಇಡಲಾಗಿತ್ತೆಂದೂ ಪ್ರತೀತಿ ಇದೆ".[೨] ಚೆನ್ನಬಸಪ್ಪನವರೂ ಇದೇ ಅಂಚೆ ಕಚೇರಿಯಲ್ಲಿ ಕೆಲಸ ಮಾಡಿರಬೇಕು.[೩] ಈ ಕೆಲಸದಲ್ಲಿ ಅವರು ಹೆಚ್ಚುಕಾಲ ಮುಂದುವರಿಯಲಿಲ್ಲ. ಒಂದು ವರ್ಷಕ್ಕಿಂತಲೂ ಕಡಿಮೆ ಅವಧಿ ಇಲ್ಲಿ ಕೆಲಸ ಮಾಡಿರಬೇಕು. ಧಾರವಾಡ, ಪುಣೆ, ಮತ್ತೆ ಧಾರವಾಡ ಹೀಗೆ ಒಟ್ಟು ಮೂರು ಹಂತಗಳಲ್ಲಿ ತಿರುವು ತೆಗೆದುಕೊಂಡ ಚೆನ್ನಬಸಪ್ಪನವರ ಜೀವನ ಕೊನೆಗೊಮ್ಮೆ ಧಾರವಾಡ ನಾರ್ಮಲ್ ಸ್ಕೂಲ್ ಪ್ರಿನ್ಸಿಪಾಲ ಆಗುವ ಮೂಲಕ ಶಿಕ್ಷಣ ಇಲಾಖೆಯತ್ತ ಹೊರಳಿತು.

---

೧. ಚೆನ್ನಬಸಪ್ಪನವರು ಅಂಚೆಖಾತೆಯಲ್ಲಿ ಯಾವ ಹುದ್ದೆ (Capacity)ಯಲ್ಲಿ ಕೆಲಸ ಮಾಡಿದರೆಂಬುದಕ್ಕೆ ನಿಖರವಾದ ಆಧಾರಗಳು ದೊರಕುವುದಿಲ್ಲ.
ಡಾ. ದ.ರಾ. ಬೇಂದ್ರೆ ಡಾ. ಶಂಬಾ. ಜೋಶಿ ಅವರೂ ಅಂಚೆ ಇಲಾಖೆಯಲ್ಲಿ ಕೆಲಸ ಮಾಡಿದ ಉಲ್ಲೇಖವಿದೆ.

೨. ಇನಾಂದಾರ ಎಂ.ಎಂ. ಅಂಚೆಪ್ರಪಂಚ ಪುಟ-೨೬

೩. "ಮೊದಲು ಅಂಚೆ ವ್ಯವಸ್ಥೆ ಒಂದು ಸ್ವಾಯತ್ತ ಸ್ವರೂಪದಲ್ಲೆ ಬೆಳೆದು ಬಂದು, ತರುವಾಯ ವಾರನ್ ಹೆಸ್ಟಿಂಗ್ಸ್‌ನ ಕಾಲದಲ್ಲಿ ಕಲಕತ್ತಾ ಜಿ.ಪಿ.ಓ (೧.೪.೧೭೭೪), ಮದ್ರಾಸ ಜಿ.ಪಿ.ಓ. (೧.೬.೧೭೮೬) ಮತ್ತು ಮುಂಬೈ ಜಿ.ಪಿ.ಓ (೧೭೮೭)ಗಳ ಸ್ಥಾಪನೆಯಿಂದ ಭಾರತದಾದ್ಯಂತ ಸಾರ್ವಜನಿಕ ಅಂಚೆವ್ಯವಸ್ಥೆ ವಿಸ್ತರಿಸಲ್ಪಟ್ಟಿತು." (ಅಂಚೆ ಪ್ರಪಂಚ (ಎಂ.ಎಂ. ಇನಾಂದಾರ-ಪು.೭) ಇದರ ಪ್ರತಿಫಲವಾಗಿ ಉತ್ತರ ಕರ್ನಾಟಕಕ್ಕೂ ಕ್ರಮೇಣ ಈ ಅಂಚೆವ್ಯವಸ್ಥೆಯ ಲಾಭ ತಟ್ಟಿತು. ೧೮೩೦ರ ಮುಂಬೈ ಗ್ಯಾಜಿಟ್ ಪ್ರಕಾರ ಧಾರವಾಡ, ಬೆಳಗಾವಿಗಳಲ್ಲಿ ಮಾತ್ರ ಅಂಚೆ ಕಚೇರಿಗಳಿದ್ದವು. ೧೮೧೮ರಿಂದ ೧೮೩೦ರ ವರೆಗೆ ಸೈನಿಕ ಆಡಳಿತದಲ್ಲಿದ್ದ ಧಾರವಾಡ ಪ್ರದೇಶವು ಸರಿಸುಮಾರು ಇದೇ ಹೊತ್ತಿಗೆ ಜಿಲ್ಲೆಯೆಂದು ಪರಿಗಣಿಸಲ್ಪಟ್ಟು ಮುಂಬೈ ಇಲಾಖೆಗೆ ಜೋಡಿಸಲ್ಪಟ್ಟಿತು. ೧೮೩೦ರ ಮುಂಬೈ ಇಲಾಖೆಯ ಅಂಚೆ ಕಚೇರಿಗಳ ದಾಖಲೆಯಲ್ಲಿಯೂ ಧಾರವಾಡದ ಹೆಸರಿದೆ. ಅಂದಮೇಲೆ ಇದಕ್ಕೂ ಒಂದು ದಶಕದ ಮೊದಲೇ(೧೮೨೦) ಧಾರವಾಡದ ಅಂಚೆಕಚೇರಿಯು ಪ್ರಾರಂಭವಾಗಿರಬಹುದು. ಮತ್ತು ಆ ಅಂಚೆ ವ್ಯವಸ್ಥೆ ಆಗ ಮಿಲಟರಿ ವ್ಯವಸ್ಥೆಗಾಗಿ ಇರಬಹುದು. ಮುಂದೆ ಚೆನ್ನಬಸಪ್ಪನವರು ಪುಣೆಯಿಂದ ಮರಳಿ ಬಂದ ಮೇಲೆ (೧೮೫೫-೫೬) ಇದೇ ಅಂಚೆಕಚೇರಿಯಲ್ಲಿ ತಾತ್ಕಾಲಿಕ ಸೇವೆ ಸಲ್ಲಿಸಿರಬೇಕು.

೧೮೫೫ ಮೇ ೧ನೇ ತಾರೀಖು ಡಿ.ಪಿ.ಐ (ಡಾಯ್‌ರೆಕ್ಟೋರೇಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಶನ್) ಕಚೇರಿ ಮೊದಲಬಾರಿಗೆ ಮುಂಬೈ ಪ್ರಾಂತದಲ್ಲಿ ಅಸ್ತಿತ್ವಕ್ಕೆ ಬಂದಮೇಲೆ, ಅಲ್ಲಿಯ ವರೆಗೆ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಪ್ರಾಥಮಿಕ ಶಿಕ್ಷಣಕ್ಕೂ ಒಂದು ಹೊಸ ದಿಗಂತ ತೆರೆದುಕೊಳ್ಳುವ ಸೂಚನೆಗಳು ತಲೆದೋರಿದವು. ಆಗ ದಕ್ಷಿಣ ವಿಭಾಗದ ಶಿಕ್ಷಣ ಇಲಾಖೆಯ ಇನ್‌ಸ್ಪೆಕ್ಟರ ಆಗಿದ್ದ ಕ್ಯಾಪ್ಟನ್ ಜೆ.ಎಫ್. ಲಿಸ್ಟರ್‌ರೇ ಶಿಕ್ಷಕರ ತರಬೇತಿ ಶಾಲೆಗಳನ್ನು ತೆರೆಯುವ ಬಗ್ಗೆ ಪ್ರಪ್ರಥಮವಾಗಿ ರೂಪರೇಷೆ ಹಾಕಿದರು. ಮುಂಬಯಿರಾಜ್ಯದ ಸಾರ್ವಜನಿಕ ಶಿಕ್ಷಣ ಇಲಾಖೆಯ ೧೮೫೫-೫೬ನೇ ಸಾಲಿನ ವಾರ್ಷಿಕ ವರದಿಯಲ್ಲಿ ಈ ಬಗ್ಗೆ ಗಮನ ಸೆಳೆದರು.[೪] ಇವರ ಈ ಹಂಬಲವನ್ನು ಕಾರ್ಯಗತಗೊಳಿಸುವಂತೆ ಪ್ರಾಥಮಿಕ ಶಿಕ್ಷಕರ ತರಬೇತಿಗಾಗಿ (ಫೆಬ್ರುವರಿ ೧೮೫೭) ಭಾಷಾವಾರು ಎಂಬಂತೆ ಮರಾಠಿ, ಗುಜರಾತಿ ಹಾಗೂ ಕನ್ನಡ ಪ್ರಾಂತಗಳಲ್ಲಿ ನಾರ್ಮಲ್ ಸ್ಕೂಲುಗಳನ್ನು ತೆಗೆಯಲು ನಿರ್ಧರಿಸಲಾಯಿತು.

ಈ ನಿರ್ಣಯದಂತೆ, ಧಾರವಾಡದಲ್ಲಿ ತೆರೆಯಲಾಗುವ ಇಂಥ ಸಂಸ್ಥೆಯಲ್ಲಿ ತರಬೇತಿಗಾಗಿ ೧೦ ಅಭ್ಯರ್ಥಿಗಳಿರಬೇಕು. ಅವರಿಗೆ ೩ ರೂಪಾಯಿಗಳಂತೆ ಪ್ರತಿ ತಿಂಗಳು ಶಿಷ್ಯವೇತನ ದೊರೆಯಬೇಕೆಂದು ಸರಕಾರ ಅಭಿಪ್ರಾಯಪಟ್ಟಿತು. ಯಾಕೆಂದರೆ ಆ ಮುಂಚಿನ ಶಿಕ್ಷಣ ಪದ್ಧತಿಯಲ್ಲಿ ಬೀಡು ಬಿಟ್ಟಿದ್ದ, ಅವ್ಯವಸ್ಥೆ, ಅದರಿಂದಾಗುತ್ತಿದ್ದ ಅನನುಕೂಲಗಳು ಮತ್ತು ದುಷ್ಪರಿಣಾಮಗಳು ಆಗಲೇ ಸರಕಾರಕ್ಕೆ ಮನವರಿಕೆಯಾಗಿದ್ದವು. ತರಬೇತಿ ಇಲ್ಲದ ಶಿಕ್ಷಕರಲ್ಲಿ ಪಾಂಡಿತ್ಯದ ಕೊರತೆ ಇರದಿದ್ದರೂ ಅದನ್ನು ಬಳಸಿಕೊಳ್ಳುವ ರೀತಿಯ ಕೊರತೆ ಎದ್ದುಕಾಣುತ್ತಿತ್ತು. ಕೆಲವೊಮ್ಮೆ ಶಿಕ್ಷಕರು, ಏನನ್ನು ಹೇಳುತ್ತಿದ್ದಾರೆಂಬುದೇ ತಿಳಿಯದೆ ಕಕ್ಕಾವಿಕ್ಕಿಯಾಗುತ್ತಿದ್ದ ವಿದ್ಯಾರ್ಥಿಗಳು, ಕಾರಣ ಕೂಡ ತಿಳಿಯದೆ ದೈಹಿಕ-ಮಾನಸಿಕ ದಂಡನೆಗೆ ಗುರಿಯಾಗುವುದು ಮಾಮೂಲಿಯಾಗಿ ಹೋಗಿತ್ತು. ವಿದ್ಯಾರ್ಥಿಗಳ ಅಭಿರುಚಿ, ಮಾನಸಿಕಸ್ಥಿತಿ, ಬೌದ್ಧಿಕ ಮಟ್ಟವನ್ನು ಅರಿತು ಬೋಧಿಸುವ ಮಾತೇ ಇರಲಿಲ್ಲ. ಶಿಕ್ಷಕರು ತಮಗೆ ಗೊತ್ತಿದ್ದನ್ನೆಲ್ಲ ವಿದ್ಯಾರ್ಥಿಗಳಿಗೆ ಧಾರೆಯೆರೆಯಬೇಕೆನ್ನುವ ಚಪಲವುಳ್ಳವರಾಗಿದ್ದರು. ಇದೆಲ್ಲವನ್ನು ಅರಗಿಸಿಕೊಳ್ಳಲಾಗದೆ ತಮ್ಮ ಶಿಕ್ಷಕರ ಬಗ್ಗೆ, ಶಾಲೆಯ ಬಗ್ಗೆ ವಿದ್ಯಾರ್ಥಿಗಳಲ್ಲಿ ಭಯ, ಅನಾಸಕ್ತಿಗಳು ಬೆಳೆಯುತ್ತಿದ್ದುದು ಸಹಜವೆ ಆಗಿತ್ತು. ಇಂಥ ಸನ್ನಿವೇಶದಲ್ಲಿ ಧಾರವಾಡದ ನಾರ್ಮಲ್ ಸ್ಕೂಲು ಆರಂಭಗೊಂಡಿತೇನೋ ನಿಜ, ಆದರೆ ಆ ಸ್ಕೂಲಿನ ಸ್ಥಿತಿ ಹೇಗಿತ್ತೆಂದರೆ "ನಾರ್ಮಲ್ ಸ್ಕೂಲಿಗೆ ಬರಲಿಚ್ಛಿಸುವ ವಿದ್ಯಾರ್ಥಿಗಳ ಸಂಖ್ಯೆ ತೀರ ಕಡಿಮೆ. ೧೮೫೭ ರಿಂದ ೧೮೬೩ರ ವರೆಗೆ ಈ ನಾರ್ಮಲ್ ಸ್ಕೂಲಿನಲ್ಲಿ ಹೆಚ್ಚಾಗಿ ಮರಾಠಿ ಉಮೇದವಾರರಿದ್ದರೆಂದೂ ಅವರಿಂದಲೇ ಈ ಸ್ಕೂಲಿಗೆ ಜೀವದಾನ ದೊರೆತಿತ್ತೆಂದೂ ಕಾಣುತ್ತದೆ. ಯಾಕೆಂದರೆ ಕನ್ನಡ ತರುಣರಿಗೆ ಶಿಕ್ಷಕರಾಗಬೇಕೆಂಬ ಹವ್ಯಾಸವಿರಲಿಲ್ಲ. ಹೀಗಿದ್ದಾಗ ಅವರನ್ನು ನಾರ್ಮಲ್ ಸ್ಕೂಲ ಆಕರ್ಷಿಸುವದೆಂತು? ಅದೇ ಆಗ ಅಲ್ಲಲ್ಲಿ ಕಣ್ಣು ತೆರೆಯಲು ಹವಣಿಸುತ್ತಿದ್ದ ಕನ್ನಡ ಶಾಲೆಗಳಿಗೆ ಶಿಕ್ಷಕರನ್ನು ತಯಾರಿಸುವ ಉದ್ದೇಶದಿಂದ ಸ್ಥಾಪಿಸಲ್ಪಟ್ಟ ಈ ತರಬೇತಿ ಕೇಂದ್ರದಲ್ಲಿ ಕನ್ನಡ ಉಮೇದುವಾರರು ಇಲ್ಲದಿರುವುದು ದುರ್ದೈವದ ಸಂಗತಿ. ಹೀಗಾಗಿ ಕನ್ನಡಿಗರ ಪಾಲಿಗೆ ಆ ನಾರ್ಮಲ್ ಸ್ಕೂಲು ಇದ್ದೂ ಇಲ್ಲದಂತಾಗಿತ್ತು. ಅದನ್ನು ಉಳಿಸಿ, ಕನ್ನಡ ಶಿಕ್ಷಕರಿಗೆ ಉಪಯೋಗಿಸಿಕೊಳ್ಳುವುದೊಂದು ದೊಡ್ಡ ಸಮಸ್ಯೆಯಾಗಿತ್ತೆಂದು

---

೪. "Until we have a better set of teachers, there will be very little real use in rapidly expanding ourvernacular schools. What we want is most normal schools and candidates for teachers classes-D.P.I. Report 1855-56, Page-240.

ಕಾಣುತ್ತದೆ''.[೫] ಹೀಗಾಗಿ ಚೆನ್ನಬಸಪ್ಪ ಈ ಸಂಸ್ಥೆಗೆ ಕಾಲಿಟ್ಟಾಗ ಮೂರು ಹಂತಗಳಲ್ಲಿ ತಮ್ಮನ್ನು ತಕ್ಷಣ ತೊಡಗಿಸಿಕೊಳ್ಳಬೇಕಾಗಿತ್ತು. ಮುಖ್ಯವಾಗಿ ಯಾರಿಗಾಗಿ ನಾರ್ಮಲ್ ಸ್ಕೂಲು ಆರಂಭವಾಗಿದೆಯೋ ಅವರೇ ಅದರ ಪ್ರಯೋಜನವನ್ನು ಪಡೆಯುವಂತೆ ಹುರಿದುಂಬಿಸುವುದು. ಎರಡನೆಯದಾಗಿ ಇಲ್ಲಿಯ ಮರಾಠಿ ಉಮೇದುವಾರರ ಪ್ರಾಬಲ್ಯವನ್ನು ತಗ್ಗಿಸುವುದು. ಕೊನೆಯದಾಗಿ ಸ್ಕೂಲನ್ನು ಉಳಿಸಿಕೊಳ್ಳುವುದು.

ಆದರೆ ನಾರ್ಮಲ್ ಸ್ಕೂಲನ್ನು ತೆರೆಯುವಾಗ ಪ್ರಯೋಗಾತ್ಮಕ ದೃಷ್ಟಿಯನ್ನಿಟ್ಟುಕೊಂಡಿದ್ದ ಸರಕಾರಕ್ಕೆ ಅದನ್ನು ಖಾಯಂ ಆಗಿ ಮುಂದುವರಿಸಿಕೊಂಡು ಹೋಗುವ ಉದ್ದೇಶವು ಇರಲಿಲ್ಲವೆಂದು ತೋರುತ್ತದೆ. ಕಾಲಾಂತರದಲ್ಲಿ 'ತರಬೇತಿ' ಹೆಚ್ಚು ಗುಣಾತ್ಮಕವೆನಿಸಿದ್ದರಿಂದ ಆ ಯೋಜನೆಯನ್ನು ಹಾಗೇ ಮುಂದುವರಿಸಲಾಯಿತು. ಮೊದಮೊದಲು ಈ ತರಬೇತಿಗೆ ಆಯ್ಕೆಯಾಗುವುದೆಂದರೆ, ಅಯೋಗ್ಯತೆಯ ಹಣೆಪಟ್ಟಿಯನ್ನು ಅಂಟಿಸಿಕೊಂಡಂತೆಯೇ ಎಂದು ಅನೇಕ ಶಿಕ್ಷಕರು ಭಾವಿಸಿದ್ದರು. ಈ ಬಗ್ಗೆ ಕೆಲವು ಸ್ವಾರಸ್ಯಕರವಾದ ವಿವರಗಳು ಲಭಿಸುತ್ತವೆ: ಬೆಳಗಾವಿ ಕನ್ನಡಶಾಲೆಯ ಸಿದ್ಧಯ್ಯ, ಬೈಲಹೊಂಗಲ ಶಾಲೆಯ ಸ್ವಾಮಿರಾವ್ ಅಪ್ಪಾಜಿ, ಪಾಶ್ಚಾಪುರ ಶಾಲೆಯ ಮುಪ್ಪಯ್ಯ ಈ ಮೂವರು ಈ ಟ್ರೇನಿಂಗ್‌ನ್ನು ಅಪಮಾನವೆಂದು ಭಾವಿಸಿ, ರಾಜೀನಾಮೆ ಕೊಟ್ಟ ಶಿಕ್ಷಕರು. ಇಂಥ ಕಟುವಾಸ್ತವಗಳ ಜೊತೆಗೇ ಚೆನ್ನಬಸಪ್ಪನವರು ನಾರ್ಮಲ್ ಸ್ಕೂಲಿನ ಪ್ರಿನ್ಸಿಪಾಲರಾಗಿ ಕೆಲಸ ಮಾಡುವ ಎದೆಗಾರಿಕೆ ತೋರಿಸಬೇಕಾಗಿತ್ತು.

ಈ ಎಲ್ಲ ಹಿನ್ನೆಲೆಯಲ್ಲಿ ಅಂಚೆಖಾತೆಯನ್ನು ತ್ಯಜಿಸಿದ ಚೆನ್ನಬಸಪ್ಪನವರು, ಧಾರವಾಡದಲ್ಲಿ ಆರಂಭವಾಗಿದ್ದ (೧೮೫೬ಫೆಬ್ರುವರಿ) ನಾರ್ಮಲ್‌ಸ್ಕೂಲಿನ ಪ್ರಿನ್ಸಿಪಾಲರೆಂದು ಸೇವೆ ಸಲ್ಲಿಸಲು ೧೮೬೧ರಲ್ಲಿ ನೇಮಣೂಕಿ ಹೊಂದಿದರು.[೬] ದಕ್ಷಿಣ ವಿಭಾಗದ ವಿದ್ಯಾ ಇಲಾಖೆಯ ಇನ್‌ಸ್ಪೆಕ್ಟರರ ಕಚೇರಿಯು ಆಗ ಬೆಳಗಾವಿಯಲ್ಲಿದ್ದ ಕಾರಣ, ಈ ನಾರ್ಮಲ್‌ಸ್ಕೂಲ್ ೧೮೬೧ರಲ್ಲಿ ಧಾರವಾಡದಿಂದ ಬೆಳಗಾವಿಗೆ ಸ್ಥಳಾಂತರಿಸಲ್ಪಟ್ಟು ಚೆನ್ನಬಸಪ್ಪನವರೂ ಸ್ಕೂಲಿನೊಂದಿಗೇ ಧಾರವಾಡದಿಂದ ಬೆಳಗಾವಿಗೆ ಹೋಗಿ ಅಲ್ಲಿ ಕಾರ್ಯನಿರತರಾಗುವಂತಾಯಿತು. ಈ ಸ್ಕೂಲು ಬೆಳಗಾವಿಗೆ ಸ್ಥಳಾಂತರಗೊಂಡು ಕಾರ್ಯಾರಂಭ ಮಾಡಿದ ಕೂಡಲೇ ಇದರ ಪ್ರಗತಿ ಒಮ್ಮೆಲೆ ಇಳಿಮುಖಗೊಂಡಿತು. ಧಾರವಾಡದಲ್ಲಿ ೧೦ ರಿಂದ ೨೦ಕ್ಕೇರಿದ್ದ ಸ್ಕೂಲಿನ ಉಮೇದುವಾರರ ಸಂಖ್ಯೆ ಇಲ್ಲಿ ೧೨ಕ್ಕೆ ಜರಿಯಿತು. ಹೀಗಾದಾಗ ಸ್ಕೂಲಿನ ಆಕರ್ಷಣೆಯನ್ನು ಇನ್ನಷ್ಟು ಹೆಚ್ಚಿಸಲು ೩ ರೂಪಾಯಿ ಶಿಷ್ಯವೇತನವನ್ನು ೫ ರೂಪಾಯಿಗಳಿಗೆ ಏರಿಸಲಾಯಿತು. ಅಲ್ಲದೆ ೧೮೬೧ರಲ್ಲಿ ಇದೇ ಉದ್ದೇಶದಿಂದ ಸ್ಕೂಲಿನ ನಿಬಂಧನೆಗಳಲ್ಲಿ ಒಂದು ಹೊಸ ಬದಲಾವಣೆ ತರಲಾಯಿತು. ಅದೆಂದರೆ, ಈ ಸ್ಕೂಲಿನಲ್ಲಿ ಕಲಿಯುವವರು ಶಿಕ್ಷಕರಾಗಿರಲೇಬೇಕೆಂಬ ಆ ವರೆಗಿನ ನಿರ್ಬಂಧವನ್ನು ತೆಗೆದು ಹಾಕಿ, ಶಿಕ್ಷಕರಾಗಿರದವರಿಗೂ ಇಲ್ಲಿ ಮುಕ್ತ ಅವಕಾಶವನ್ನುಕಲ್ಪಿಸಿಕೊಡಲಾಯಿತು. ಆದಾಗ್ಯೂ ಅಂದಿನ ವಾರ್ಷಿಕ ವರದಿಗಳನ್ನು ನೋಡಲಾಗಿ ಉಮೇದುವಾರರ ಸಂಖ್ಯೆಯಲ್ಲಿ ವಿಶೇಷ ಹೆಚ್ಚಳತೆ ಏನೂ ಕಾಣಲಿಲ್ಲವೆಂದು ತೋರುತ್ತದೆ.

---

೫. ಪಾಟೀಲ ಎಸ್.ಪಿ. ಜೀವನ ಶಿಕ್ಷಣ: ಸರಕಾರೀ ಟ್ರೇನಿಂಗ್ ಕಾಲೇಜಿನ ಸಂಕ್ಷಿಪ್ತ ಇತಿಹಾಸವು. ಪುಟ ೧೦-೧೧

೬. ಹಳಕಟ್ಟಿ ಫ.ಗು. ಅವರ 'ಕೈವಾ ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು' ಎಂಬ ಕೃತಿಯಲ್ಲಿ ಚೆನ್ನಬಸಪ್ಪನವರು'' ''ಸನ್ ೧೮೫೬ನೇ ಇಸ್ವಿಯ ಜನವರಿ ತಿಂಗಳಿನಲ್ಲಿ ಬೆಳಗಾವಿಯಲ್ಲಿದ್ದ ನಾರ್ಮಲ್‌ಸ್ಕೂಲಿನ ಪ್ರಿನ್ಸಿಪಾಲರಾಗಿ ನೇಮಿಸಲ್ಪಟ್ಟರು'' ಎಂದಿದೆ ಪುಟ ೯.

೧೮೬೩ರ ಸುಮಾರಿಗೆ ಇದರಲ್ಲಿ ಎರಡು ಪ್ರತ್ಯೇಕ ವ್ಯವಸ್ಥೆಗಳನ್ನು ಕಲ್ಪಿಸಲಾಯಿತು. ಇದರನ್ವಯ ಕೆಲವರು ೬ ತಿಂಗಳ ಮಟ್ಟಿಗೆ ಮಾತ್ರ ಶಿಕ್ಷಣ ಪಡೆದು ಹಳ್ಳಿಗಳ ಶಾಲೆಗೆ ಶಿಕ್ಷಕರಾಗಿ ಹೋದರೆ, ಇನ್ನು ಕೆಲವರು ಎರಡು ವರ್ಷದ ವರೆಗೆ ಇದ್ದು, ಗಣಿತ, ವಿಜ್ಞಾನ, ಇತಿಹಾಸ, ಭೂಗೋಲ, ಸಂಸ್ಕೃತ ಮೊದಲಾದ ವಿಷಯಗಳನ್ನು ಆಳವಾಗಿ ಅಭ್ಯಾಸಮಾಡಿ ದೊಡ್ಡ ಊರುಗಳಿಗೆ ಶಿಕ್ಷಕರಾಗಿ ಹೋಗುತ್ತಿದ್ದರು. ಶಿಕ್ಷಕರಾಗಿ ಕೆಲಸ ಮಾಡುವ ಕರಾರಿಗೆ ಒಪ್ಪಿ ನಾರ್ಮಲ್‌ಸ್ಕೂಲಿಗೆ ಬಂದರೆ, ಅಂಥವರಿಗೆ ವಿದ್ಯಾರ್ಥಿವೇತನ ದೊರೆಯುತ್ತಿತ್ತು. ಇಂಥವರು 'ಶಿಕ್ಷಣಪದ್ಧತಿ' ಕಲಿಯುತ್ತಿದ್ದರಷ್ಟೇ ಅಲ್ಲ, ಮುಂದೆ ನಾರ್ಮಲ್‌ಸ್ಕೂಲಿಗೆ 'ಪ್ರಾಕ್ಟೀಸಿಂಗ್‌ಸ್ಕೂಲ್' ಜೋಡಿಸಿದ ನಂತರ ಅಲ್ಲಿ ದಿನಾಲು ಒಂದು ತಾಸಿನ ವರೆಗೆ ಇವರನ್ನು ಕಲಿಸುವ ಕೆಲಸದಲ್ಲಿ ತೊಡಗಿಸಲಾಗುತ್ತಿತ್ತು. ಸರಿಸುಮಾರು ಇದೇ ಹೊತ್ತಿಗೆ ಚೆನ್ನಬಸಪ್ಪನವರು ನಾರ್ಮಲ್‌ಸ್ಕೂಲನ್ನು ಟ್ರೇನಿಂಗ್‌ಕಾಲೇಜಿನ ಅಂತಸ್ತಿಗೆ ಏರಿಸಲು ಸರಕಾರವನ್ನು ಒತ್ತಾಯಿಸತೊಡಗಿದರು. ಇದರ ಪರಿಣಾಮವಾಗಿ (೧೮೬೪)ರಲ್ಲಿ ಈ 'ನಾರ್ಮಲ್‌ಸ್ಕೂಲ' ಟ್ರೇನಿಂಗ್ ಕಾಲೇಜಾಗಿ ಊರ್ಜಿತಗೊಂಡಿತು. ನಿರೀಕ್ಷಿಸದಂತೆ ಚೆನ್ನಬಸಪ್ಪನವರೇ ಆ 'ಕಾಲೇಜಿನ, ಪ್ರಥಮ ಪ್ರಿನ್ಸಿಪಾಲ'ರೆಂದು ಕಾರ್ಯನಿರ್ವಹಿಸುವ ಹೊಣೆ ಹೊರುವುದು ಅನಿವಾರ್ಯವಾಯಿತು. ಸತ್ಯಸಂಗತಿ ಎಂದರೆ, ಚೆನ್ನಬಸಪ್ಪನವರು ಈ ಕ್ಷೇತ್ರದಲ್ಲಿ ಪಾದಾರ್ಪಣೆ ಮಾಡಿದ ಗಳಿಗೆ ಕನ್ನಡಿಗರ ಪಾಲಿಗೆ ಎಂದೆಂದೂ ಅವಿಸ್ಮರಣೀಯವಾಯಿತು. ಅಷ್ಟೇ ಅಲ್ಲ; ಕರ್ನಾಟಕ ಸಾಂಸ್ಕೃತಿಕ ಇತಿಹಾಸದ ಉಜ್ವಲ ಅಧ್ಯಾಯವೊಂದಕ್ಕೆ ಇಲ್ಲಿಂದಲೇ ಶ್ರೀಕಾರ ಹಾಕಿದಂತಾಯಿತು.



## ಬೆಳಗಾವಿ ಟ್ರೇನಿಂಗ್ ಕಾಲೇಜಿನ ಪ್ರಥಮ ಪ್ರಿನ್ಸಿಪಾಲರು

ಒಂದು ಸಂಸ್ಥೆಯ ಏಳುಬೀಳುಗಳು, ಖ್ಯಾತಿ ಅಪಖ್ಯಾತಿಗಳು ಆ ಸಂಸ್ಥೆಯ ಮುಖ್ಯಸ್ಥನ ದಕ್ಷತೆ, ಪ್ರಾಮಾಣಿಕತೆ, ಶಿಸ್ತು ಮತ್ತು ಯೋಜನೆಗಳನ್ನಲ್ಲದೆ ತನ್ನ ಸಹೋದ್ಯೋಗಿಗಳಲ್ಲಿಯೂ ಇದೇ ವಿಧವಾದ ಮನೋಧರ್ಮವನ್ನು ಹುಟ್ಟುಹಾಕುವುದನ್ನು ಅವಲಂಬಿಸಿರುತ್ತವೆ. ಒಂದು ಶಿಕ್ಷಣ ಸಂಸ್ಥೆಯನ್ನು ಕಟ್ಟುವಾಗಲಂತೂ ಈ ಬಗ್ಗೆ ಎಷ್ಟು ಎಚ್ಚರ ವಹಿಸಿದರೂ ಕಡಿಮೆಯೇ. ಸ್ವಲ್ಪ ಜೋಕೆ ತಪ್ಪಿದರೆ ಸಾಕು, ಒಂದು ತಲೆಮಾರಿನ ಇಡೀ ಬದುಕನ್ನೇ ಅದು ದಾರುಣಗೊಳಿಸುತ್ತದೆ. ಯಾಕೆಂದರೆ, ಒಂದು ಶಿಕ್ಷಣಸಂಸ್ಥೆ ಕೇವಲ ಕಲ್ಲು, ಕಟ್ಟಿಗೆ, ಗಚ್ಚು, ಗಾರೆಗಳ ಇಮಾರತಿ ಅಲ್ಲ, ಅದು ಬೌದ್ಧಿಕವಾಗಿ, ನೈತಿಕವಾಗಿ, ಸಾಂಸ್ಕೃತಿಕವಾಗಿ ತನ್ನ ಜನಾಂಗವನ್ನು ರೂಪಿಸುವ ಶೈಕ್ಷಣಿಕ ಕಮ್ಮಟ.

ಈ ಪ್ರಜ್ಞೆಯ ಸತ್ಪಥದಲ್ಲಿ ಸಂಸ್ಥೆಯನ್ನು' ಕೊಂಡೊಯ್ಯುವುದು ನೇತಾರನ ಆಸಕ್ತಿಯಾಗಿದ್ದಾಗ ಮಾತ್ರ ಅಪೂರ್ವವಾದುದನ್ನು, ಅಪರೂಪವಾದದುದನ್ನು ಆ ಸಂಸ್ಥೆ ಸಾಧಿಸಬಲ್ಲುದು. ಬಹುಪಾಲು ಜನ ಸೋಲುವುದು ಇಲ್ಲಿಯೇ. ಕರ್ತವ್ಯಕ್ಕಾಗಿ ಕರ್ತವ್ಯ ಮಾಡುವ ಜನ ಸಂಸ್ಥೆಯನ್ನು ಕಟ್ಟಬಹುದು, ಬೆಳೆಸಬಹುದು. ಆದರೆ ಸಾಮಾಜಿಕ ಕರ್ತವ್ಯವೆಂಬ ಭಾವನೆಯಿಂದ ದುಡಿಯುವವರು ಮಾತ್ರ ಸಂಸ್ಥೆಯನ್ನು ಮೀರಿ, ಸಂಸ್ಥೆಯನ್ನು ಕಟ್ಟುತ್ತಾರೆ. ಡೆಪ್ಯೂಟಿಯ್ಯವರು ಈ ಮನೋಧರ್ಮದ ವ್ಯಕ್ತಿಯಾಗಿದ್ದರು. ಬೆಳಗಾವಿಯಲ್ಲಿ ನಾರ್ಮಲ್ ಸ್ಕೂಲಿನ ಪ್ರಿನ್ಸಿಪಾಲರಾಗಿದ್ದ ಚೆನ್ನಪಸಪ್ಪನವರು ಆ ಸ್ಕೂಲಿನ ಪರಿವರ್ತಿತ ರೂಪವಾದ ಟ್ರೇನಿಂಗ್ ಕಾಲೇಜಿನ ಪ್ರಥಮ ಪ್ರಿನ್ಸಿಪಾಲರಾಗಿ (೧೮೬೪) ಅದನ್ನು ಸರ್ವಾಂಗಸುಂದರವಾಗಿ ಬೆಳೆಸುವ ಮೂಲಕ ಒಂದು ಜನಾಂಗದ ಸಮಗ್ರ ಬದುಕನ್ನು ಅರ್ಥಪೂರ್ಣವಾಗಿ ಕಟ್ಟಿದರು. ಜೊತೆಗೆ ಅವೆರಡಕ್ಕೂ ಪರಸ್ಪರ ಸಂಬಂಧವನ್ನು ಕಲ್ಪಿಸಿದರು. ಇದರಿಂದಾಗಿಯೇ ಕನ್ನಡನಾಡಿನ ಆಧುನಿಕ ಇತಿಹಾಸದಲ್ಲಿ ಅವರಿಗೂ, ಅವರು ಕಟ್ಟಿದ ಟ್ರೇನಿಂಗ್ ಕಾಲೇಜಿಗೂ, ಅದು ಮಾಡುತ್ತ ಬಂದ ಕೆಲಸಕ್ಕೂ, ಆ ಕೆಲಸದಲ್ಲಿ ಸಹಭಾಗಿಗಳಾದವರಿಗೂ ಒಂದು ಅಬಾಧಿತವಾದ ಹೆಮ್ಮೆಯ ಸ್ಥಾನ ದಕ್ಕುವಂತಾಯಿತು.

ಟ್ರೇನಿಂಗ್ ಕಾಲೇಜು ಎಂಥ ದುರವಸ್ಥೆಯ ವಾತಾವರಣದಲ್ಲಿ ಕಣ್ಣುತೆರೆಯಿತೆಂಬುದನ್ನು ಈ ಹಿಂದೆ ಪ್ರಾಸಂಗಿಕವಾಗಿ ನೋಡಿದ್ದೇವೆ. ಚೆನ್ನಬಸಪ್ಪನವರು ಪುಣೆಯಲ್ಲಿ ಶಿಕ್ಷಣ ಪಡೆದು ಕನ್ನಡನಾಡಿಗೆ (೧೮೫೫) ಮರಳಿ ಬಂದಾಗ ಅವರ ತಿಳುವಳಿಕೆಯಲ್ಲಿ, ಆಲೋಚನೆಗಳಲ್ಲಿ, ನಂಬುಗೆಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿದ್ದುದು ತೀರ ಸಹಜವೇ ಆಗಿತ್ತು. ಪುಣೆಯ

ವಾತಾವರಣದಲ್ಲಿ ಅವರು ಅಸಾಮಾನ್ಯವಾಗಿ ಬೆಳೆದಿದ್ದರು. ಪರಿಸರದ ವಿದ್ಯಮಾನಗಳನ್ನ ಗುರುತಿಸುವಷ್ಟು, ಅವುಗಳ ಗತ್ತುಗಾರಿಕೆಗಳನ್ನು ಅರ್ಥೈಸಿಕೊಳ್ಳುವಷ್ಟು, ಅವುಗಳೊಳಗಿನ ಅರ್ಥಹೀನತೆಯನ್ನು ಧಿಕ್ಕರಿಸುವಷ್ಟು, ಅವಶ್ಯಬಿದ್ದರೆ ಅವುಗಳಿಗೆ ಚಿಕಿತ್ಸೆ ಮಾಡುವಷ್ಟು, ಇಚ್ಛೆಪಟ್ಟರೆ ಪ್ರಯೋಜನಾತ್ಮಕವಾದವುಗಳನ್ನು ಸೃಷ್ಟಿಸಬಲ್ಲಷ್ಟು ಅವರು ಪ್ರಜ್ಞಾವಂತರಾಗಿದ್ದರು. ಆಗ ಮಹಾರಾಷ್ಟ್ರದಲ್ಲಿ ಭಾಷೆ, ಸಂಸ್ಕೃತಿ, ಶಿಕ್ಷಣ, ಇತ್ಯಾದಿಗಳ ವಿಚಾರದಲ್ಲಿ ವಿಚಿತ್ರ ಸ್ವಾಭಿಮಾನ. ಅದೇ ಕನ್ನಡನಾಡಿಗೆ ಬಂದರೆ ಎಲ್ಲವೂ ತಿರುವು ಮುರುವು. ಶಿಕ್ಷಣದ ವಿಷಯವಾಗಿಯಂತೂ ಕನ್ನಡ ನಾಡಿನ ಜನ, ಮರಾಠಿಗರಿಗಿಂತ ಶತಮಾನದಷ್ಟು ಹಿಂದೆ. ಮಠಶಾಲೆಗಳ, ಅಯ್ಯನವರ ಪರಂಪರೆಯ ಜಾಡಿನಲ್ಲೇ ಕುಂಟುತ್ತ ಸಾಗಿರುವ ಅನಾಸಕ್ತ ಅಭ್ಯಾಸ ಕ್ರಮ. ಎಲ್ಲಿ ನೋಡಿದಲ್ಲೆಲ್ಲ ಕನ್ನಡತನವನ್ನು ಮೆಟ್ಟಿನಿಂತ ಮರಾಠಿಮಯ ವಾತಾವರಣ. ಕನ್ನಡನಾಡಿನಲ್ಲಿ ಕನ್ನಡ ಶಾಲೆಗಳಿಲ್ಲ; ಕನ್ನಡ ಕ್ರಮಿಕ ಪುಸ್ತಕಗಳಿಲ್ಲ; ಕನ್ನಡ ಜನರಿಗೆ ಕನ್ನಡದಲ್ಲಿ ಬರೆಯುವ, ಓದುವ, ಮಾತಾಡುವ ಮನಸ್ಸಿಲ್ಲ; ಮನಸ್ಸಿದ್ದವರಿಗೆ ಅವಕಾಶಗಳಿಲ್ಲ; ಕನ್ನಡ ಅಚ್ಚುಕೂಟಗಳಂತೂ ಇರಲೇ ಇಲ್ಲ. ಹೊರನಾಡುಗಳಲ್ಲಿ ಏನು ನಡೆದಿದೆ, ಅವು ಎತ್ತ ಸಾಗಿವೆ ಎಂಬ ಕನಿಷ್ಟ ತಿಳುವಳಿಕೆಗಳಿಂದಲೂ ವಂಚಿತರಾದವರು, ಇಲ್ಲಿಯ ಜನ. ಕೆಲವರಿಗೆ ಈ ಬಗ್ಗೆ ಜ್ಞಾನವಿದ್ದರೂ ಅವರು 'ಸ್ಥಾಪಿತ ಪರಿಸ್ಥಿತಿ'ಯೊಂದಿಗೆ ರಾಜೀ ಮಾಡಿಕೊಂಡು ವೈಯಕ್ತಿಕ ಹಿತಾಸಕ್ತಿಗಳನ್ನು ಸಾಧಿಸಿಕೊಳ್ಳುವ ಚಪಲವುಳ್ಳವರಾಗಿದ್ದರು. ಒಟ್ಟಾರೆ ಕನ್ನಡಿಗರು, ತಮಗೊಂದು ಭಾಷೆ, ಇತಿಹಾಸ ಮತ್ತು ಸಂಸ್ಕೃತಿಗಳು ಇವೆ ಎಂಬುದನ್ನೇ ಮರೆತುಹೋದ ಸಂದರ್ಭವದು. ಇಂಥದರಲ್ಲಿ ಸ್ತ್ರೀಶಿಕ್ಷಣವನ್ನು ಕೊಡಿಸುವುದು ಹೋಗಲಿ; ಆ ಬಗ್ಗೆ ಆಲೋಚಿಸುವದೇ ಅಪರಾಧ ಎಂಬಂತಹ ಸ್ಥಿತಿ. ನಿರ್ಮಿತ ವಾತಾವರಣಕ್ಕೆ ಒಗ್ಗಿಹೋಗಿರುವ ಮತ್ತು ಹೊಸದನ್ನು ಸ್ವೀಕರಿಸಲು ಸುತಾರಾಂ ಒಪ್ಪದ ಭಯಭೀತ ಮನಸ್ಸುಗಳು. ಈ ಎಲ್ಲ 'ಇಲ್ಲ'ಗಳ ನಿರ್ವಾತ ವಾತಾವರಣದಲ್ಲಿ ಟ್ರೇನಿಂಗ್ ಕಾಲೇಜು ಕಾರ್ಯಾರಂಭ ಮಾಡಿದ್ದು ನಿಜಕ್ಕೂ ಪವಾಡಸದೃಶವಾದ ಸಂಗತಿ. ಇಂಥ ಹಲವಾರು ಪ್ರತಿಕೂಲಗಳನ್ನು ಕಟ್ಟಿಕೊಂಡೇ ಚೆನ್ನಬಸಪ್ಪನವರು ೧೮೬೮ರಲ್ಲಿ ಆ ಸಂಸ್ಥೆಯ ಮೊದಲ ಪ್ರಿನ್ಸಿಪಾಲರಾದುದು ಅವರ ಅಸಾಮಾನ್ಯ ಧೈರ್ಯದ, ಪ್ರಚಂಡ ಆತ್ಮವಿಶ್ವಾಸದ ನಿದರ್ಶನವೆಂಬುದನ್ನು ಯಾರೂ ಅಲ್ಲಗಳೆಯಲಾರರು.

ಪ್ರಿನ್ಸಿಪಾಲರು ಆಗ ಯಾರೂ ಆಗಬಹುದಿತ್ತು. ಆದರೆ ಆವೊತ್ತಿನ ಪರಿಸ್ಥಿತಿಯಲ್ಲಿ ಅದಷ್ಟೇ ಮುಖ್ಯವಾಗಿರಲಿಲ್ಲ. ಇಡೀ ಸಾಮಾಜಿಕ ಬದುಕೇ ತಿರುವು ತೆಗೆದುಕೊಳ್ಳುವ ಒಂದು ಅತ್ಯಂತ ಆಯಕಟ್ಟಿನ ಸಂದರ್ಭ ಅದಾಗಿತ್ತು. ಬ್ರಿಟೀಶ್ ಅಧಿಕಾರಿಗಳ ಮನಸ್ಸಿನಲ್ಲಿ ಈ ಪ್ರದೇಶವು 'ದಕ್ಷಿಣಮಹಾರಾಷ್ಟ್ರ', ಇಲ್ಲಿಯ ಪ್ರದೇಶಭಾಷೆ ಮರಾಠಿ, ಎಂದು ಆಳವಾಗಿ ಬೇರೂರಿದ್ದಿತು. ಆ ಭಾವನೆಯ ಬೇರುಗಳನ್ನು ಉತ್ಪಾಟನ ಮಾಡಿ 'ವಾಸ್ತವ'ವನ್ನು ಅವರಿಗೆ ಚೆನ್ನಬಸಪ್ಪನವರು ಮನವರಿಕೆಮಾಡಿ ಕೊಡದೇ ಇದ್ದಿದ್ದರೆ, ಕರ್ನಾಟಕದ ಅದರಲ್ಲೂ ಮುಂಬೈಕರ್ನಾಟಕದ ಚಿತ್ರವೇ ಬೇರೆಯಾಗಿರುತ್ತಿತ್ತು. ಈ ಕಳಕಳಿ ಅವರು ಸಂಪಾದಕರಾಗಿ ಪ್ರಕಟಿಸಿದ "ಮಠಪತ್ರಿಕೆ"ಯ ಪ್ರಥಮ ಸಂಚಿಕೆ(೧೮೬೫)ರಿಂದಲೇ ವ್ಯಕ್ತವಾಗುತ್ತದೆ. ೧೮೬೮ರಲ್ಲಿ ಚೆನ್ನಬಸಪ್ಪನವರು ಪ್ರಿನ್ಸಿಪಾಲರಾದುದು, ೧೮೬೫ರಲ್ಲಿ ಲೀಟಲ್‌ಅವರ ಬದಲು ರಸೆಲ್‌ರು ಅಧಿಕಾರಿಗಳಾದುದು ಒಂದು ಯೋಗಾಯೋಗ. ಚೆನ್ನಬಸಪ್ಪನವರು ರಸೆಲ್ಲರ ಪ್ರೀತಿಯನ್ನು ಸಂಪಾದಿಸಿಕೊಂಡು ಕ್ರಮೇಣ ನಿಜಸ್ಥಿಯ ಅರಿವು ಮೂಡಿಸಿದರು. ಇನ್ನಷ್ಟು ಖಚಿತವಾಗಿ ಹೇಳಬೇಕೆಂದರೆ, ಇಲ್ಲಿಂದಲೇ ಕನ್ನಡದ ಪುನರುತ್ಥಾನಕ್ಕಾಗಿ, ಕನ್ನಡಿಗನೊಬ್ಬನಿಂದ

ಪ್ರಪ್ರಥಮವಾಗಿ ಕೆಲಸ ಆರಂಭವಾಯಿತೆನ್ನುವುದು ಮಹತ್ವದ ಸಂಗತಿ. ಇವರ ಒತ್ತಾಸೆಯಿಂದಲೇ ನಾರ್ಮಲ್‌ಸ್ಕೂಲು ಟ್ರೇನಿಂಗ್ ಕಾಲೇಜಾಯಿತೆಂಬುದನ್ನು ಈಗಾಗಲೇ ಗಮನಿಸಿದ್ದೇವಾದರೂ ಅದರ ಪ್ರಥಮ ಪ್ರಿನ್ಸಿಪಾಲರೂ ಚೆನ್ನಬಸಪ್ಪನವರೇ ಎಂಬ ಸಂಗತಿಯನ್ನು ಹಗುರವಾಗಿ ಹೇಳಿಕೊಂಡು ಹೋದರೆ ಅದು ಇಡಿಯಾಗಿ ಒಂದು ಸಂದರ್ಭದ ಇತಿಹಾಸಕ್ಕೆ ಮಾಡಿದ ಅಪಚಾರವಾಗುತ್ತದೆಂಬ ಬಗ್ಗೆ ಸಂದೇಹವೇ ಇಲ್ಲ. ಯಾಕೆಂದರೆ ಆಧುನಿಕ ಕನ್ನಡ ಸಾಹಿತ್ಯದ ಸುವರ್ಣಪುಟಗಳು ತೆರೆದುಕೊಳ್ಳುವುದು ಇಲ್ಲಿಂದಲೇ. ಅನೇಕ ಜ್ಞಾನಶಾಖೆಗಳು ಹೊಸ ಆವಿಷ್ಕಾರಗಳೊಂದಿಗೆ ಮೊತ್ತಮೊದಲ ಬಾರಿಗೆ ಶ್ರೀಸಾಮಾನ್ಯ ಕನ್ನಡಿಗರ ಮನೆಬಾಗಿಲಿನ ವರೆಗೆ ಕೈಚಾಚಿ ಅವರಿಗೆ ಹೊಸ ಜಾಗೃತಿಯ ಫಲಗಳನ್ನು ನೀಡಿದ್ದೂ ಚೆನ್ನಬಸಪ್ಪನವರ ಕರ್ಣಧಾರತ್ವವೇ. ಈ ನಾಡಿನ ಶೈಕ್ಷಣಿಕ, ಸಾಂಸ್ಕೃತಿಕ ಇತಿಹಾಸಕ್ಕೆ ಅವರು ಎಷ್ಟೊಂದು ಸುಭದ್ರವಾದ ತಳಪಾಯವನ್ನು ಹಾಕಿದರೆಂಬುದನ್ನು ಶತಮಾನದೀಚೆಗೆ ನಿಂತು ಪುನರಾವಲೋಕನ ಮಾಡುವಾಗ ಎಂಥವರೂ ಗೌರವದಿಂದ ತಲೆಬಾಗಬೇಕಾಗುತ್ತದೆ. ಶಿಕ್ಷಣರಂಗದಿಂದ ಯಾವ ಸಮಾಜ ಹಿಂದೆ ಬೀಳುತ್ತದೆಯೋ, ವಂಚಿತವಾಗುತ್ತದೆಯೋ ಆ ಸಮಾಜಕ್ಕೆ ಇತಿಹಾಸವೇ ಇರುವದಿಲ್ಲ; ಇದ್ದರೂ ಅದು ಉಳಿಯುವದಿಲ್ಲ. ಇದನ್ನು ಶತಮಾನಕ್ಕಿಂತಲೂ ಹಿಂದೆಯೇ ಗ್ರಹಿಸಿದ ಚೆನ್ನಬಸಪ್ಪನವರನ್ನು ಒಬ್ಬ 'ಮಹಾನ್ ದೃಷ್ಟಾರ್'ರೆಂದು ಕರೆದರೆ ತಪ್ಪಾಗಲಿಕ್ಕಿಲ್ಲ.

ಟ್ರೇನಿಂಗ್ ಕಾಲೇಜು ಎಂದಕೂಡಲೇ ನಮ್ಮ ಕಲ್ಪನೆಗೆ ಬರುವ ವಿಷಯಗಳೆಂದರೆ, ಅದರ ಕಟ್ಟಡ, ಅದರ ಬೋಧಕ, ಬೋಧಕೇತರ ಸಿಬ್ಬಂದಿ, ಅಲ್ಲಿಯ ಪೀಠೋಪಕರಣಗಳು, ಪಾಠೋಪಕರಣಗಳು, ಅದರ ಆವರಣದ ವಿಸ್ತೀರ್ಣ, ಭೌಗೋಲಿಕ ಪರಿಸರ ಹಾಗೂ ಶಿಕ್ಷಕ ವಿದ್ಯಾರ್ಥಿಗಳ ಸಂಖ್ಯೆ ಇತ್ಯಾದಿ, ಇತ್ಯಾದಿಗಳು. ಆದರೆ ಚೆನ್ನಬಸಪ್ಪನವರ ಆಸೆ, ಅಂತಃಕರಣ, ಯೋಜನೆಗಳನ್ನು – ಅವರ ನಿಷ್ಠೆ, ದಕ್ಷತೆ, ಪ್ರಾಮಾಣಿಕತೆಗಳನ್ನು ಜೀವದ್ರವ್ಯವಾಗಿ ಪಡೆದ – ಈ ಸಂಸ್ಥೆ, ಹಲವು ವಿಶ್ವವಿದ್ಯಾಲಯಗಳೂ, ಅಕಾಡಮಿಗಳೂ, ಪರಿಷತ್ತುಗಳೂ ಕೂಡಿ ಮಾಡಲಾರದಷ್ಟನ್ನು ಮಾಡಿತೋರಿಸಿರುವುದಕ್ಕೆ, ಅದರ ಪ್ರಥಮ ಪ್ರಿನ್ಸಿಪಾಲರ ಕೃತುಶಕ್ತಿಯೇ ಕಾರಣವೆಂಬುದನ್ನು ನಾವು ಮನವರಿಕೆಮಾಡಿಕೊಳ್ಳಬೇಕು.

ಶಿಕ್ಷಕರಿಗೆ ಟ್ರೇನಿಂಗ್ ಕೊಡುವ ನೆವದಲ್ಲಿ ಆಗ ಹುಟ್ಟಿಕೊಂಡ ಈ ಸಂಸ್ಥೆ, ಬರೀ ಅಷ್ಟನ್ನು ಮಾತ್ರ ಮಾಡಿಬಿಟ್ಟಿದ್ದರೆ ಇಂದಿಗೂ ಕನ್ನಡಿಗರು ತಲೆಯೆತ್ತುವುದು ಸಾಧ್ಯವಾಗುತ್ತಿರಲಿಲ್ಲ. ಚೆನ್ನಬಸಪ್ಪನವರು ತಮ್ಮ ವಿವಿಧ ಧ್ಯೇಯೋದ್ದೇಶಗಳಿಗಾಗಿ ಟ್ರೇನಿಂಗ್ ಕಾಲೇಜನ್ನು ದುಡಿಸಿಕೊಂಡರು. ತರಬೇತಿಗಾಗಿ ಬಂದುಹೋಗುವ ವಿದ್ಯಾರ್ಥಿಶಿಕ್ಷಕರ ಅಂತರಾಳಗಳಲ್ಲಿ, ಆ ಮೂಲಕ ಅವರ ಶಿಷ್ಯ–ಪ್ರಶಿಷ್ಯರ ಮನಸ್ಸುಗಳಲ್ಲಿ ಸಾಹಿತ್ಯ, ಶಿಕ್ಷಣ, ಇತಿಹಾಸ, ಸಂಸ್ಕೃತಿ, ವಿಜ್ಞಾನ, ಕಲೆ, ಧರ್ಮಶಾಸ್ತ್ರ, ವ್ಯವಸಾಯ, ವಾಣಿಜ್ಯ, ಇತ್ಯಾದಿಗಳ ಬೀಜಗಳನ್ನು ಬಿತ್ತಿದರು. ಜೊತೆಗೆ ದಕ್ಷತೆ, ಪ್ರಾಮಾಣಿಕತೆ, ಶಿಸ್ತು, ಸಂಯಮಗಳ ಸಸಿನೆಟ್ಟು ಕಳಿಸುವ ಕೆಲಸ ಅಲ್ಲಿ ಅವ್ಯಾಹತವಾಗಿ ನಡೆಯಿತು. ಇದೆಲ್ಲಕ್ಕಿಂತ ಹೆಚ್ಚಾಗಿ ತಮ್ಮ ಭಾಷೆಯನ್ನೇ ಮರೆತುಬಿಟ್ಟಿದ್ದ ಕನ್ನಡಿಗರಿಗೆ ಕನ್ನಡಭಾಷೆಯನ್ನು ಕಲಿಸಲು ನಡೆಸಿದ ಹೋರಾಟದ್ದೇ ಒಂದು ಪ್ರತ್ಯೇಕವಾದ ಸಾಧನೆ. ಪ್ರಾಯಶಃ ಆ ಸಂದರ್ಭದಲ್ಲಿ ಚೆನ್ನಬಸಪ್ಪನವರಲ್ಲದೆ ಮತ್ತೆ ಬೇರೆ ಯಾರೇ ಆಗಿದ್ದರೂ ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲ ಹುದ್ದೆಯಲ್ಲಿ ನಿಂತುಕೊಂಡು 'ಭಾಷಾಸಮಸ್ಯೆ'ಯನ್ನು ಕೈಗೆತ್ತಿಕೊಳ್ಳುವುದು ಮತ್ತು ಹೋರಾಟದ ಕಣಕ್ಕೆ ಇಳಿಯುವದು ಸಾಧ್ಯವಾಗುತ್ತಿರಲಿಲ್ಲ. ಇದು ಸಾಧ್ಯವಾದದ್ದು ಟ್ರೇನಿಂಗ್ ಕಾಲೇಜು, ಚೆನ್ನಬಸಪ್ಪನವರು ಮತ್ತು

ಮಠಪತ್ರಿಕೆ ಈ ಮೂರರ ಸಾತತ್ಯದಿಂದಾಗಿ. ಈ ಮಾತನ್ನು ಹೇಳುತ್ತಿರುವ ಸಂದರ್ಭದಲ್ಲೇ ಚೆನ್ನಬಸಪ್ಪನವರ ಹೋರಾಟದ ಸ್ವರೂಪ ಕೂಡಾ ನಮಗೆ ಅಷ್ಟೇ ಮುಖ್ಯವಾಗುತ್ತದೆ. ಅವರು ಎಂಥ ಪರಿಸ್ಥಿತಿಯಲ್ಲಿ ಈ ಕೆಲಸಕ್ಕೆ ಕೈ ಹಾಕಿದರೆಂಬುದರ ಅರಿವು ಈಗಾಗಲೇ ನಮಗೆ ಇರುವುದರಿಂದ ಆ ಮಿತಿಯಲ್ಲಿ ಅವರ ಹೋರಾಟದ ನೆಲೆ ಮತ್ತು ಸ್ವರೂಪವನ್ನು ಕಂಡುಕೊಳ್ಳಲು ಪ್ರಯತ್ನಿಸುವದೂ ನ್ಯಾಯಸಮ್ಮತವೆನಿಸುತ್ತದೆ.

ಚೆನ್ನಬಸಪ್ಪನವರು ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರಾಗಿ ಅಧಿಕಾರವಹಿಸಿಕೊಂಡಾಗಿನ ಸಂದರ್ಭದ ಬಗ್ಗೆ ಹೇಳಿಕೊಳ್ಳುತ್ತಾ "ನಾನು ೧೮೬೪ರ ಜಾನೇವರಿ ತಿಂಗಳ ೨೧ರಂದು ಇಲ್ಲಿ ಹಾಜರಾದಾಗ ೧೨ ಹಾಗೂ ೧೪ ಜನರ ಎರಡು ವರ್ಗಗಳಿದ್ದವು. ಇವರಲ್ಲಿ ಅರ್ಧದಷ್ಟು ಕೊಂಕಣಿಗಳಾಗಿದ್ದು, ಅವರಲ್ಲಿ ಕೆಲವರು ಒಂದು ವರ್ಷದ ವರೆಗೂ ಶಾಲೆಯಲ್ಲಿದ್ದರೂ ಮೊದಲಿನ ಒಂಬತ್ತು (೯) ಅಂಕಿಗಳನ್ನು ಎಣಿಸಲು ಬಾರದಿರುವುದು ನನಗೆ ಆಶ್ಚರ್ಯವಾಗಿ ತೋರಿತು. ಕನ್ನಡ ಶಿಕ್ಷಕರನ್ನು ತಯಾರಿಸುವ ಈ ಸಂಸ್ಥೆಯಲ್ಲಿ ಇಂಥವರಿಗೆ ಹೇಗೆ ಪ್ರವೇಶ ದೊರೆಯಿತೆಂಬುದು ತಿಳಿಯದಾಯಿತು. ವಿಚಾರಿಸಲಾಗಿ ಕನ್ನಡ ಮಾತೃಭಾಷೆಯಾದ ಯೋಗ್ಯ ಉಮೇದುವಾರರು ಸಿಗುವುದು ಕಠಿಣವಾಗಿತ್ತೆಂದು ಕಾಣಿಸಿತು. ಆದರೆ ನಾನು ಇಲ್ಲಿಗೆ ಬಂದನಂತರ ಶುದ್ಧ ಕನ್ನಡಿಗರಾದ ೨೫ ಉಮೇದುವಾರರು ದೊರೆತರೆಂದು ಹೇಳಲು ಸಂತೋಷವೆನಿಸುತ್ತದೆ".[೧] ಎಂದು ವಿವರಿಸಿರುವುದನ್ನು ನೋಡಿದರೆ ಅಂದಿನ ಕನ್ನಡಿಗರ ಮತ್ತು ಕನ್ನಡದ ದುರವಸ್ಥೆಯ ಒಂದು ಚಿತ್ರ ಸ್ಪಷ್ಟವಾಗಿ ಕಣ್ಣೆದುರು ನಿಲ್ಲುತ್ತದೆ. ಹೀಗಾಗಿ ಚೆನ್ನಬಸಪ್ಪನವರಿಗೆ ಕನ್ನಡ ಹಾಗೂ ಕನ್ನಡಿಗರು ಅವರ ಹೋರಾಟದ ಮುಖ್ಯ ನೆಲೆಯಾದದ್ದನ್ನು ಮತ್ತೆ ಮತ್ತೆ ನಾವು ಗುರುತಿಸುತ್ತಲೇ ಸಾಗಬೇಕಾಗುತ್ತದೆ. ಇನ್ನು ಅವರ ಹೋರಾಟದ ಸ್ವರೂಪದ ಬಗ್ಗೆ ಹೇಳಬಹುದಾದ ಒಂದೆರಡು ಮಾತುಗಳೆಂದರೆ; ಅದು ಕೇವಲ ಸೈದ್ಧಾಂತಿಕ ಸ್ವರೂಪದ್ದಾಗಿರಲಿಲ್ಲ. ಅಥವಾ ವೇದಿಕೆಯ ಮೇಲಿನ ಅರ್ಥಹೀನ ಭಾಷಣವೂ ಆಗಿರಲಿಲ್ಲ. ಕ್ರಿಯಾತ್ಮಕವಾದಂತಹ, ಕಾರ್ಯಾನುಷ್ಠಾನಕ್ಕೆ ತರಬಲ್ಲಂತಹದಾಗಿತ್ತು, ಈ ಬಗ್ಗೆ ಅವರು ನಿರಂತರ ನಿಗಾವಹಿಸುತ್ತಿದ್ದರು. ತಮ್ಮ ಸುಪರ್ದಿನಲ್ಲಿ ಬರುವ ಯಾವುದೇ ಆಗಿರಲಿ, ಯಾರೇ ಆಗಿರಲಿ ದಾಕ್ಷಿಣ್ಯವಿಲ್ಲದೆ ತಿದ್ದುತ್ತಿದ್ದರು. ಅಂಕಿ ಸಂಖ್ಯೆಗಳಿರಲಿ, ರುಜುವಿರಲಿ, ಪತ್ರವಿರಲಿ, ಮನವಿಗಳಿರಲಿ, ಸಂಭಾಷಣೆಗಳಿರಲಿ, ಲೆಕ್ಕಪತ್ರವಿರಲಿ, ಸಾಹಿತ್ಯವಿರಲಿ, ನೋಟೀಸುಗಳಿರಲಿ, ಇವೆಲ್ಲ ಖಾಸಗಿ ಇಲ್ಲವೆ ಸರಕಾರಿ ವ್ಯವಹಾರಗಳಿಗೆ ಸಂಬಂಧಪಟ್ಟವುಗಳಾಗಿದ್ದರೂ ಸಹ ಕನ್ನಡದ ಅಸ್ತಿತ್ವಕ್ಕೆ, ಪ್ರಗತಿಗೆ ಧಕ್ಕೆ ತರುವುದನ್ನು ಅವರು ಕಿಂಚಿತ್ತೂ ಸಹಿಸುತ್ತಿರಲಿಲ್ಲ.

ಚೆನ್ನಬಸಪ್ಪನವರು ತಾವು ಪ್ರಿನ್ಸಿಪಾಲರೆಂಬ ಅಧಿಕಾರದ ಬೋಳೇತನವನ್ನೋ, ಇಲ್ಲಾ ಮೈಗಳ್ಳತನವನ್ನೋ ಮೈಗೂಡಿಸಿಕೊಂಡು, ಕನ್ನಡ ಭಾಷೆಗೆ ಬಂದೊದಗಿದ್ದ ಗಂಡಾಂತರವನ್ನು ಅಲಕ್ಷಿಸಿ ಬಿಟ್ಟಿದ್ದರೆ ಕನ್ನಡ ಜನಾಂಗದ ಭಾಷೆ ಸಂಸ್ಕೃತಿಗಳು ಇನ್ನೂ ಬರ್ಬರವೆನಿಸುತ್ತಿದ್ದವು. ಈ ಅಪಾಯವನ್ನು ಪ್ರಪ್ರಥಮವಾಗಿ ಗುರುತಿಸಿ ಕಾರ್ಯೋನ್ಮುಖರಾದ ಪ್ರಥಮ ಕನ್ನಡಿಗರೆಂದರೆ ಚೆನ್ನಬಸಪ್ಪನವರೇ. ಯಾಕೆಂದರೆ ಯಾವುದೇ ಒಂದು ಭಾಷೆ ಬರೀ ಸಂವಹನಕ್ಕೆ ಮಾತ್ರ ಸೀಮಿತವಾದ ಸಾಧನವಲ್ಲ. ಅದು ಒಂದು ಜನಾಂಗದ ಬದುಕನ್ನು ರೂಪಿಸುವಲ್ಲಿ, ನಿರ್ಧರಿಸುವಲ್ಲಿ ಸಾಕಷ್ಟು ಮಹತ್ವದ ಪಾತ್ರವಹಿಸುತ್ತದೆ ಎಂಬುದು ಅವರಿಗೆ ಆಗಲೇ ಸ್ಪಷ್ಟವಾಗಿತ್ತು.

---

೧. ಪಾಟೀಲ ಎಸ್.ಪಿ.: ಜೀವನ ಶಿಕ್ಷಣ: ಧಾರವಾಡ ಗಂ.ಸ.ಟ್ರೇನಿಂಗ್ ಕಾಲೇಜದ ಸಂಕ್ಷಿಪ್ತ ಇತಿಹಾಸವು ಪುಟ-೧೧.

ಪ್ರೊ. ಎಚ್.ವಾಯ್. ಲಾಂಗ್‌ಹಾರ್ನ ಹೇಳಿದ "ಯಾವ ಪರಭಾಷೆಯೂ ಮಾತೃಭಾಷೆಯ ಸ್ಥಾನವನ್ನು ಪಡೆಯಲಾರದು. ಸ್ವತಂತ್ರವಾದ ಆಲೋಚನಾ ಪದ್ಧತಿ, ಸಂಕೀರ್ಣವಾದ ಭಾವಗಳ ಸಹಜ ಹಾಗೂ ಖಚಿತವಾದ ಅಭಿವ್ಯಕ್ತಿ ಸಾಮರ್ಥ್ಯಗಳು ಮಾತೃಭಾಷೆಯಲ್ಲಿಯೇ ಬೆಳೆಯಲು ಸಾಧ್ಯ"[೨] ಎಂಬ ಸೂಕ್ಷ್ಮವನ್ನು ಗ್ರಹಿಸಿಯೇ ಚೆನ್ನಬಸಪ್ಪನವರು ಅತ್ಯಂತ ಕ್ಲುಪ್ತ ಕಾಲದಲ್ಲಿ ಬಹಳಷ್ಟನ್ನು ಸಾಧಿಸುವ ದೀಕ್ಷೆತೊಟ್ಟು ದುಡಿದರು. ತಮ್ಮ ಒಡನಾಡಿಗಳನ್ನು ತಾಯ್ನಾಡ ಸಂಸ್ಕೃತಿ ಕಟ್ಟುವ ಕೆಲಸಕ್ಕೆ ದುಡಿಸಿದರು.

ಚೆನ್ನಬಸಪ್ಪನವರು ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರಾಗಿ ಕೆಲಸ ಮಾಡಿದ್ದು, ಕೇವಲ ಎರಡು ವರ್ಷ ಮಾತ್ರ. (ಇದಕ್ಕೂ ಮುಂಚೆ ಅವರು ಪ್ರಿನ್ಸಿಪಾಲರೆಂದು ಕೆಲಸ ಮಾಡುತ್ತಿದ್ದುದು ನಾರ್ಮಲ್‌ಸ್ಕೂಲಿನಲ್ಲಿ. ನಾರ್ಮಲ್‌ಸ್ಕೂಲಿನ ಮುಖ್ಯಸ್ಥ ಹುದ್ದೆಗೂ ಆಗ ಪ್ರಿನ್ಸಿಪಾಲರೆಂದೇ ಕರೆಯುವ ವಾಡಿಕೆ ಇದ್ದಂತೆ ತೋರುತ್ತದೆ). ಈ ಅವಧಿಯಲ್ಲಿ ಮಠಪತ್ರಿಕೆಯ ಪ್ರಧಾನಸಂಪಾದಕರು ಅವರೇ. ಗಂಗಾಧರ ಮಡಿವಾಳೇಶ್ವರ ತೂರಮರಿಯವರು ಸಹಸಂಪಾದಕರು. ಈಗ ಈ ಪತ್ರಿಕೆಯ ಶತಮಾನೋತ್ತರ ಬೆಳ್ಳಿಹಬ್ಬವನ್ನು ಆಚರಿಸಲಾಗಿದೆ. ಇಂಥ ಗೌರವಕ್ಕೆ ಪಾತ್ರವಾದ ಕರ್ನಾಟಕದ ಏಕೈಕ ಪತ್ರಿಕೆ ಇದು. ಚೆನ್ನಬಸಪ್ಪನವರು ೧೮೬೫ ಎಪ್ರಿಲ್ ದಲ್ಲಿ ನೆಟ್ಟ ಈ ಸಸಿ ಯಾವ ವಿಕೃತಿ, ಆಕರ್ಷಣೆಗಳಿಗೆ ಬಲಿಯಾಗದೆ ತನ್ನ ಮೂಲ ಚೈತನ್ಯವನ್ನೇ ಉಳಿಸಿಕೊಂಡು ತಾನೂ ಬೆಳೆದಿದೆ, ಕನ್ನಡ ಜನಕೋಟಿಯನ್ನೂ ಬೆಳೆಸಿದೆ. ಅಂದಮೇಲೆ ಚೆನ್ನಬಸಪ್ಪನವರ ಅಭ್ಯಾಸವೆಂದರೆ, ಹೊಸಗನ್ನಡ ಕಾಲದ ಕನ್ನಡ ನಾಡಿನಜನತೆಯ ಶೈಕ್ಷಣಿಕ, ಹಾಗೂ ಸಾಂಸ್ಕೃತಿಕ ಬದುಕಿನ ಅಭ್ಯಾಸವೆಂಬುದು ಸಹಜವಾಗಿ ತಿಳಿಯುವ ಸಂಗತಿಯಾಗಿದೆ. ಇದನ್ನು ಅರಿತಾಗಲೇ ಚೆನ್ನಬಸಪ್ಪನವರು ಟ್ರೇನಿಂಗ್ ಕಾಲೇಜಿನ ಪ್ರಥಮ ಪ್ರಿನ್ಸಿಪಾಲರಾದುದರ ಸಾರ್ಥಕತೆ ಮನವರಿಕೆಯಾಗುವುದು. ಹಾಗಾಗಿ ಅವಧಿ ಎಷ್ಟೇ ಚಿಕ್ಕದೆನಿಸಿದರೂ ಚೆನ್ನಬಸಪ್ಪನವರು ಪ್ರಥಮ ಪ್ರಿನ್ಸಿಪಾಲರಾಗಿದ್ದ ಕಾಲದ ಮೌಲ್ಯವನ್ನು ಗುರುತಿಸದಿದ್ದರೆ ತಪ್ಪಾಗುತ್ತದೆ.

ಇವರು ಕೈಕೊಂಡ ಕನ್ನಡ ಶಿಕ್ಷಣಪ್ರಸಾರದ ಇಂಥ ದಿಟ್ಟ ನಿಲುವಿನಿಂದಾಗಿ ಏನು ಪರಿಣಾಗಳಾದುವೆಂಬುದನ್ನು ದಿ.ಫ.ಗು. ಹಳಕಟ್ಟಿಯವರು ಹೀಗೆ ಚಿತ್ರಿಸಿದ್ದಾರೆ. "೩೦-೪೦ ವರ್ಷಗಳ ಹಿಂದೆ ಉತ್ತರ ಕರ್ನಾಟಕದಲ್ಲಿ ನಡೆದ ಜ್ಞಾನಪ್ರಸಾರ ಪ್ರಯತ್ನಗಳಿಗೆ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷವಾಗಿ ಚೆನ್ನಬಸಪ್ಪನವರೇ ಕಾರಣರಾದರು. ಅವರು ಈ ಭಾಗದಲ್ಲಿ ಕನ್ನಡ ಶಾಲೆಗಳನ್ನು ಬೆಳೆಸಿದ್ದರಿಂದಲೂ ಕನ್ನಡ ಪಂಡಿತರನ್ನು ಮುಂದಕ್ಕೆ ತಂದು ಅವರನ್ನು ಗ್ರಂಥ ರಚನೆಯಲ್ಲಿ ತೊಡಗಿಸಿದ್ದರಿಂದಲೂ ತಮ್ಮ ಅಪ್ರತಿಮ ಮೇಧಾಶಕ್ತಿ ಮತ್ತು ಕೃತಿಗಳಿಂದ ಕನ್ನಡ ಅಭಿಮಾನವನ್ನು ಸರೀಕರಲ್ಲಿಯೂ, ಕೆಳಗಿನವರಲ್ಲಿಯೂ, ಸುಶಿಕ್ಷಿತರಲ್ಲಿಯೂ ಬೆಳೆಸಿದ್ದರಿಂದಲೂ ಈ ಸುಪರಿಣಾಮಗಳು ತಲೆದೋರಹತ್ತಿದವು. ಆ ಕಾಲಕ್ಕೆ ಇಂಥ ಪ್ರಯತ್ನಗಳು ನಡೆಯದೇ ಹೋಗಿ ಒಂದು ವೇಳೆ ಮುಂಬಯಿ ಕರ್ನಾಟಕಸ್ಥರು ಸ್ವಭಾಷೆಯನ್ನು ಬಿಟ್ಟುಕೊಟ್ಟು ಪರಭಾಷೆಗೆ ಅಂಟಿಕೊಂಡು ಅದನ್ನೇ ಅವರು ಶಾಲೆಗಳಲ್ಲಿ ಕಲಿಯುತ್ತ ಕುಳಿತಿದ್ದರೆ, ಮೇಲ್ಕಂಡ ಪ್ರಯತ್ನಗಳು ಇಲ್ಲಿ ಏನೂ ಸಾಗದೆ, ಜನರು ಇನ್ನೂ ಅಂಧಃಕಾರದಲ್ಲಿಯೇ ಉಳಿದುಬಿಡುತ್ತಿದ್ದರು"[೩] ಎಂಬ ಮಾತುಗಳು, ಮತ್ತು ಮ.ಗು ಹಂದ್ರಾಳ ಅವರು ಹೇಳಿರುವ "ಈ ಸಂಸ್ಥೆಯ (ಟ್ರೇನಿಂಗ್ ಕಾಲೇಜಿನ) ಪ್ರಗತಿ, ಕನ್ನಡ ಶಿಕ್ಷಕರ ತರಬೇತಿ,

---

೨. ಬಣಕಾರ ಮಹಾದೇವ-ಸಂಕ್ರಮಣ, ಸಂ.೧೯, ಸಂ.೬,೭ ಆಡಳಿತದಲ್ಲಿ ಕನ್ನಡವೇ ಏಕೆ ಬೇಕು?

೩. ಹಳಕಟ್ಟಿ ಫ.ಗು.: ಕೈ.ವಾ. ಚೆನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು ಪುಟ-೧೭-೧೮.

ಕನ್ನಡದ ಉದ್ಧಾರ, ಕನ್ನಡ ಸಂಸ್ಕೃತಿಯ ರಕ್ಷಣೆ, ಪೋಷಣೆ, ಶಿಕ್ಷಣದ ಬುನಾದಿಯಾದ ಪ್ರಾಥಮಿಕ ಶಿಕ್ಷಣದ ಭದ್ರರಚನೆ ಇವೆಲ್ಲವೂ ಪ್ರಥಮ ಪ್ರಿನ್ಸಿಪಾಲರಾಗಿದ್ದ ಚೆನ್ನಬಸಪ್ಪನವರ ಸೇವಾ ಫಲಗಳು" ಎಂಬ ವಿಚಾರಗಳು ಮನನೀಯವಾಗಿವೆ.

ಇನ್ನೊಂದು ಬಹಳ ಗಮನಾರ್ಹವಾದ ಅಂಶವೆಂದರೆ, ಶುದ್ಧವಾದ, ನಿಚ್ಚಳವಾದ, ಕನ್ನಡಪರ ದೃಷ್ಟಿಯನ್ನಿಟ್ಟುಕೊಂಡು ಶೋಧನೆ, ಸಂಗ್ರಹ, ಪರಿಷ್ಕರಣ, ಸಂಪಾದನೆ, ವ್ಯಾಖ್ಯಾನ, ಟೀಕೆ, ಟಿಪ್ಪಣೆಗಳಂತಹ ಕಾರ್ಯಕ್ಕೆ ಮಠಪತ್ರಿಕೆಯ ಮೂಲಕ ಮುಕ್ತ ಅವಕಾಶವನ್ನು ಕಲ್ಪಿಸಿಕೊಟ್ಟ ಮೊದಲ ಕನ್ನಡಿಗರು ಚೆನ್ನಬಸಪ್ಪನವರೇ.[೪] ಈ ಅವಕಾಶವನ್ನು ಪಡೆದ ಅನೇಕ ಮಹನೀಯರು ಕನ್ನಡನಾಡಿನ ಹೊಸಗನ್ನಡ ಸಾಹಿತ್ಯ ಇತಿಹಾಸದಲ್ಲಿ ಶಾಶ್ವತಸ್ಥಾನ ಪಡೆದರು.

ಟ್ರೇನಿಂಗ್ ಕಾಲೇಜಿನ ಪ್ರಥಮ ಪ್ರಿನ್ಸಿಪಾಲರಾಗಿ ಚೆನ್ನಬಸಪ್ಪನವರು ಸಾಧಿಸಿದ ಸಾಧನೆಗಳ ಒಟ್ಟು ಮೌಲ್ಯವನ್ನು ತೂಗಿ ಮುಂದಿಡುತ್ತ ಆ ಕಾಲೇಜಿನ ಶತಮಾನೋತ್ಸವ ಸಂದರ್ಭದಲ್ಲಿ (೧೯೫೭) ಡಾ. ಶಿ.ಚ. ನಂದೀಮಠ ಅವರು ವ್ಯಕ್ತಪಡಿಸಿದ ಅನಿಸಿಕೆಗಳನ್ನು ಹಂದ್ರಾಳ ಅವರು ಹೀಗೆ ಉಲ್ಲೇಖಿಸಿದ್ದಾರೆ. ನಿದರ್ಶನಕ್ಕೆ ಅವರ ಮಾತುಗಳನ್ನೇ ಇಲ್ಲಿ ನೋಡಬಹುದು: "ಉತ್ತರ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಧಾರವಾಡದ ಗಂಡು ಮಕ್ಕಳ ಸರಕಾರಿ ಟ್ರೇನಿಂಗ್ ಕಾಲೇಜು ಬಹು ಮಹತ್ವದ ಪಾತ್ರವನ್ನಾಡಿದೆ. ಸುಮಾರು ಒಂದು ಒಂದುವರೆ ಶತಮಾನದ ಹಿಂದೆ ಉತ್ತರ ಕರ್ನಾಟಕದ ಈ ಭಾಗದಲ್ಲಿ ಮರಾಠಿಯ ಪ್ರಭಾವ ವಿಶೇಷವಾಗಿದ್ದಿತು. ಕೋರ್ಟು, ಕಚೇರಿಗಳ ಭಾಷೆ ಮರಾಠಿ. ಸರಕಾರಿ ನೌಕರರು ವಿಶೇಷವಾಗಿ ಮಹಾರಾಷ್ಟ್ರದಿಂದ ಬಂದುದರಿಂದ ಮರಾಠಿಯನ್ನೇ ಮಾತಾಡುತ್ತಿದ್ದರು. ಆದುದರಿಂದ ಆ ಕಾಲದ ಬ್ರಿಟೀಶ ಅಧಿಕಾರಿಗಳಿಗೆ ಇದು ಕನ್ನಡದ ಭಾಗ, ಇಲ್ಲಿಯ ಜನರ ಮಾತೃಭಾಷೆ ಕನ್ನಡ ಎಂಬ ಕಲ್ಪನೆ ಬಾರದೆ, ಮರಾಠಿಯೇ ಇಲ್ಲಿಯ ಭಾಷೆಯೆಂದು ಭ್ರಮಿಸಿ, ಈ ಭಾಗವನ್ನು 'ದಕ್ಷಿಣ ಮಹಾರಾಷ್ಟ್ರ'ವೆಂದು ಕರೆದುಮರಾಠಿಗೆ ಮುಖ್ಯಸ್ಥಾನವನ್ನು ಕೊಟ್ಟಿದ್ದರು. ಕನ್ನಡಿಗರ ಸುದೈವದಿಂದ, ರಸೆಲ್ ಅವರ ನಿಷ್ಪಕ್ಷಪಾತದೃಷ್ಟಿ, ಡೆಪ್ಯೂಟಿ ಚೆನ್ನಬಸಪ್ಪನವರ ಕನ್ನಡ ಅಭಿಮಾನ ಇವು ಒಂದುಗೂಡಿ ಕನ್ನಡದ ನಂದಾದೀವಿಗೆ ಮತ್ತೇ ಬೆಳಗುವಂತಾಯಿತು. ಧಾರವಾಡ, ಬೆಳಗಾವಿ ಜಿಲ್ಲೆಗಳಲ್ಲಿ ಕನ್ನಡ ಶಾಲೆಗಳನ್ನು ಭರದಿಂದ ಪ್ರಾರಂಭಿಸಲಾಯಿತು. ತರಬೇತಿ ಹೊಂದಿದ ಶಿಕ್ಷಕರ ಅವಶ್ಯಕತೆ ಎನಿಸಿ ಅದನ್ನು ಪೂರೈಸಲು ಈ ಟ್ರೇನಿಂಗ್ ಕಾಲೇಜು ಆರಂಭವಾಯಿತು. ಮೇಧಾವಿಗಳೂ ಕರ್ತೃತ್ವಶಾಲಿಗಳೂ, ಆಡಳಿತೆಯಲ್ಲಿ ನಿಪುಣರೂ ಆದ ಡೆ.ಚೆನ್ನಬಸಪ್ಪನವರು ಈ ಸಂಸ್ಥೆಗೆ ಪ್ರಥಮ ಪ್ರಿನ್ಸಿಪಾಲರಾಗಿ ಬಂದು ಅದಕ್ಕೆ ಒಳ್ಳೆ ಪರಂಪರೆಯನ್ನೂ ಹಾದಿಯನ್ನೂ ಹಾಕಿಕೊಟ್ಟರು"[೫] ಎಂದಿದ್ದಾರೆ. ಅವರ ಈ ಮಾತುಗಳಲ್ಲಿ ಕಿಂಚಿತ್ತೂ ಉತ್ಪ್ರೇಕ್ಷೆ ಇಲ್ಲ.

ಡೆಪ್ಯೂಟಿಯವರ ಮೈ-ಮನಸ್ಸುಗಳನ್ನೇ ಪಡೆದು ರೂಪತಳೆದ ಟ್ರೇನಿಂಗ್ ಕಾಲೇಜು ಅವರ ಶಕ್ತಿ-ಯುಕ್ತಿಗಳಿಂದಲೇ ಮೈತುಂಬಿಕೊಂಡು, ಕರ್ನಾಟಕ ಕಾಲೇಜಿಗೂ, ಕರ್ನಾಟಕ ವಿಶ್ವವಿದ್ಯಾಲಯಕ್ಕೂ ಜನ್ಮನೀಡಿ ಕೃತಾರ್ಥವಾಯಿತು. ಈ ಎರಡೂ ಮಹಾಸಂಸ್ಥೆಗಳು ಟ್ರೇನಿಂಗ್ ಕಾಲೇಜಿನ ಕಟ್ಟಡದಲ್ಲೇ ಉದಯಗೊಂಡವೆಂಬುದು ಚರಿತಾರ್ಹವಾದ

೪. ಈ ನಿಟ್ಟಿನಲ್ಲಿ ಆಗಲೇ ಪಾಶ್ಚಾತ್ಯರು ಸಾಕಷ್ಟು ಕೆಲಸ ಮಾಡಿದ್ದು ಕಂಡುಬಂದರೂ ಅವರದು ಕೇವಲ ಸಂಶೋಧನಾಪರ ದೃಷ್ಟಿಯಾಗಿತ್ತೇ ವಿನಃ ಕನ್ನಡ ಪರವಾಗಿರಲಿಲ್ಲವೆಂಬುದು ಗಮನಾರ್ಹ.

೫. ಹಂದ್ರಾಳ. ಮ.ಗು.: (ಉಲ್ಲೇಖ) ಡೆಪ್ಯೂಟಿ ಚೆನ್ನಬಸಪ್ಪನವರು, ಪುಟ-೩,೪.

ಸಂಗತಿಯಾಗಿದೆ. ಧಾರವಾಡದಲ್ಲಿ ವಿದ್ಯಾವರ್ಧಕಸಂಘ ಸ್ಥಾಪನೆಯಾಗಲು, ಟ್ರೇನಿಂಗ್ ಕಾಲೇಜು ಹಾಗೂ ಅದರ ಪ್ರಥಮ ಪ್ರಿನ್ಸಿಪಾಲರಾಗಿದ್ದ ಚೆನ್ನಬಸಪ್ಪನವರ ಪರೋಕ್ಷಸ್ಫೂರ್ತಿಯೇ ಕಾರಣ. ಇದೆಲ್ಲದರ ಬಗ್ಗೆ ಬೆಳಕು ಚೆಲ್ಲುವ ಮ.ಗು. ಹಂದ್ರಾಳ ಅವರ ಮಾತುಗಳು ಹೀಗಿವೆ. "ಕನ್ನಡ ನುಡಿ, ಕನ್ನಡ ಸಾಹಿತ್ಯ, ಶಿಕ್ಷಣಸಂಸ್ಥೆಗಳ ಉದಯ, ಸಾಂಸ್ಕೃತಿಕ ಚಟುವಟಿಕೆಗಳು, ಕರ್ನಾಟಕದ ಏಕೀಕರಣದ ಚಳುವಳಿ ಹೀಗೆ ಧಾರವಾಡದಲ್ಲಿ ಕಂಡುಬಂದ ಬಹುಮುಖ ಸೇವಾಕಾರ್ಯಗಳು ಚೆನ್ನಬಸಪ್ಪನವರ ಸೇವಾ ಸ್ಫೂರ್ತಿಯ ಸೆಲೆಗಳು. ಅವರು ನಿರ್ಮಿಸಿದ ಕಾರ್ಯಕರ್ತರ ಫಲಗಳೆಂದರೆ ಅವರಿಂದ ಪ್ರೇರಿತರಾದ ವಿದ್ಯಾಪ್ರೇಮಿಗಳ ಸಾಹಸಕ್ರಿಯೆಗಳು"[೬] ಎಂಬ ಮಾತಿಗೆ ಸಮ್ಮತಿಸಲೇಬೇಕಾಗುತ್ತದೆ. ಹೀಗೆ ಅಂದಿನ ಸಮಕಾಲೀನ ಸಂದರ್ಭದ ಹಲವು ಸಾಧನೆಗಳಿಗೆ ಚೆನ್ನಬಸಪ್ಪನವರು ಪ್ರಥಮ ಪ್ರಿನ್ಸಿಪಾಲರಾದುದೇ ಕಾರಣ ಎಂಬುದು ಸತ್ಯ ಸಂಗತಿಯಾಗಿದೆ. ಅಷ್ಟೇ ಅಲ್ಲ; ಚೆನ್ನಬಸಪ್ಪನವರನ್ನು ಕುರಿತು ಬರೆಯ ಹೊರಟಾಗಲೆಲ್ಲ ಟ್ರೇನಿಂಗ್ ಕಾಲೇಜಿನ ಬಗ್ಗೆಯೂ ಬರೆಯುವದು ಅನಿವಾರ್ಯವಾಗುತ್ತದೆ. ಇದು ಚೆನ್ನಬಸಪ್ಪನವರು ಹಾಗೂ ಆ ಸಂಸ್ಥೆಯ ನಡುವಿರುವ ಸಾತತ್ಯಕ್ಕೆ ಸ್ಪಷ್ಟ ನಿದರ್ಶನ. ಅಂದಮೇಲೆ ಟ್ರೇನಿಂಗ್ ಕಾಲೇಜಿನ ಒಳನೋಟಗಳನ್ನು ಆದಷ್ಟೂ ಸಮಗ್ರವಾಗಿ ಪರಿಚಯಿಸಿಕೊಳ್ಳುವುದು; ಇನ್ನೊಂದು ಬದಿಯಿಂದ ಚೆನ್ನಬಸಪ್ಪನವರನ್ನು ಮತ್ತಷ್ಟು ಖಚಿತವಾಗಿ ಅರ್ಥೈಸಿಕೊಂಡಂತೆಯೇ ಸರಿ. ಟ್ರೇನಿಂಗ್ ಕಾಲೇಜನ್ನು ವೇದಿಕೆ ಮಾಡಿಕೊಂಡು ಶಿಕ್ಷಣ, ಕನ್ನಡ ಮೊದಲಾದ ಕ್ಷೇತ್ರಗಳಲ್ಲಿ ತಮ್ಮ ಕರ್ತೃತ್ವ ಶಕ್ತಿಯನ್ನು ತೋರಿಸಿದರು. ಇದನ್ನು ಅರ್ಥಮಾಡಿಕೊಂಡ ದಕ್ಷಿಣ ವಿಭಾಗೀಯ ಶಿಕ್ಷಣಾಧಿಕಾರಿ ರಸೆಲ್ ಅವರು, ಚೆನ್ನಬಸಪ್ಪನವರನ್ನು ಡೆಪ್ಯುಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರರೆಂದು ನೇಮಿಸುವ ಮೂಲಕ ಅವರ ಶಕ್ತಿಗೆ ವಿಸ್ತಾರವಾದ ನೆಲೆಯನ್ನು ಕಲ್ಪಿಸಿಕೊಟ್ಟರು.

ಚೆನ್ನಬಸಪ್ಪನವರು ಬೆಳಗಾವಿ ಜಿಲ್ಲೆಯ 'ಡೆಪ್ಯೂಟಿ'ಯಾಗಿ (೧೮೬೬) ನೇಮಕ ಹೊಂದಿದ ತಕ್ಷಣ, ಹೊನ್ನಾವರ ಇಂಗ್ಲೀಷ ಶಾಲೆಯಲ್ಲಿ ಶಿಕ್ಷಕರಾಗಿದ್ದ ವೆಂಕಟರಂಗೋ ಕಟ್ಟಿಯವರು ತಾತ್ಪೂರ್ತಿಕ ಪ್ರಿನ್ಸಿಪಾಲರೆಂದು ಚೆನ್ನಬಸಪ್ಪನವರ ಸ್ಥಾನದಲ್ಲಿ ನೇಮಕ ಹೊಂದಿದರು. ನಂತರ ಭುಜೇಂದ್ರರಾಯ ಹುಯಿಲಗೋಳರು ಪ್ರಿನ್ಸಿಪಾಲರಾದರು. ೧೮೬೭ರಲ್ಲಿ ಶ್ರಿ ಕಟ್ಟಿಯವರು ಕನ್ನಡ ಟ್ರಾನ್ಸಲೇಟರರೆಂದು ನೇಮಕಗೊಂಡಿದ್ದರಲ್ಲದೆ ಅಲ್ಲಿಯೇ ವ್ಹಾಯಿಸ್ ಪ್ರಿನ್ಸಿಪಾಲರೆಂದೂ ಕಾರ್ಯ ನಿರ್ವಹಿಸತೊಡಗಿದರು. ಗಂಗಾಧರ ಮಡಿವಾಳೇಶ್ವರ ತೂರಮರಿಯವರು ಅಸಿಸ್ಟಂಟ ಕನ್ನಡ ಟ್ರಾನ್ಸಲೇಟರರೆಂದು ಕಾರ್ಯ ಮಾಡತೊಡಗಿದರು. ಹೀಗೆಯೇ ಟ್ರೇನಿಂಗ್ ಕಾಲೇಜು ಬರಬರುತ್ತ ಬರೀ ಶಿಕ್ಷಕರನ್ನು ಮಾತ್ರ ತರಬೇತಿಗೊಳಿಸುವ ಸಂಸ್ಥೆ ಮಾತ್ರವಾಗಿ ಉಳಿಯಲಿಲ್ಲ. ಅದು ಒಂದು ಕನ್ನಡ ಪಡೆಯನ್ನೇ ತರಬೇತುಗೊಳಿಸುವ ಮಹಾಸಂಸ್ಥೆಯಾಗಿ ಪರಿವರ್ತನೆ ಹೊಂದಿತೆಂಬುದು ಅಷ್ಟೇ ಸತ್ಯ.

ಧಾರವಾಡ ಪಟ್ಟಣವು ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಪ್ರಾಂತದ ಮಧ್ಯವರ್ತಿ ಸ್ಥಳವೆನಿಸಿದ್ದರಿಂದ ಟ್ರೇನಿಂಗ್ ಕಾಲೇಜು ಇಲ್ಲಿಯೇ ಇರುವುದು ಹೆಚ್ಚು ಯೋಗ್ಯವೆಂದು ಭಾವಿಸಿ, ಈ ಜಿಲ್ಲೆಯ ಆಗಿನ ಕಲೆಕ್ಟರರಾಗಿದ್ದ ಮೆ. ರಾಬರ್ಟ್‌ಸನ್ ಸಾಹೇಬರು ಸಾಕಷ್ಟು ಪರಿಶ್ರಮಪಟ್ಟು ಆ ಕಾಲದಲ್ಲಿ ೫೦,೦೦೦ (ಐವತ್ತು ಸಾವಿರ) ರೂಪಾಯಿಗಳನ್ನು ಸಾರ್ವಜನಿಕರಿಂದ ವರ್ಗಣೀ ಕೂಡಿಸಿ ಧಾರವಾಡದಲ್ಲಿ ಈಗಲೂ ಹೆಮ್ಮೆಯಿಂದ ತಲೆಯೆತ್ತಿ

೬. ಹಂದ್ರಾಳ. ಮ.ಗು-ಕನ್ನಡದ ದೀಪ: ಡೆಪ್ಯೂಟಿ ಚೆನ್ನಬಸಪ್ಪನವರ ಜೀವನ ಸಾಧನೆ ವ್ಯಕ್ತಿತ್ವ ಪುಟ-೪೪.

ನಿಂತಿರುವ ಭವ್ಯವಾದ ಇಮಾರತುಗಳಲ್ಲಿ ಕೆಲವನ್ನು ಕಟ್ಟಿಸಿದರು. ಇವು ೧೮೭೫ ಜ್ಯೂನದಲ್ಲಿ ಸಿದ್ಧಗೊಂಡದ್ದರಿಂದ ಅದೇ ವರ್ಷ ಬೆಳಗಾವಿಯಿಂದ ಕಾಲೇಜನ್ನು ಮತ್ತೆ ಸ್ಥಳಾಂತರಿಸಿ ಧಾರವಾಡದ ಈ ಭವ್ಯ ಕಟ್ಟಡದಲ್ಲಿ ಶಾಶ್ವತವಾಗಿ ಮುಂದುವರಿಸಲಾಯಿತು.[೭] ಧಾರವಾಡದಲ್ಲಿ ಜನ್ಮತಳೆದ ನಾರ್ಮಲ್‌ಸ್ಕೂಲು, ಬೆಳಗಾವಿಗೆ ಸ್ಥಳಾಂತರವಾಗಿ, ಅಲ್ಲಿಯೇ ಕಾಲೇಜಿನ ಅಂತಸ್ತಿಗೆ ಏರಿ ಪುನಃ ಬೆಳಗಾವಿಯಿಂದ ಧಾರವಾಡಕ್ಕೆ ಬಂದು ಶಾಶ್ವತವಾಗಿ ನೆಲೆಯೂರಿ ತನ್ನ ಕಾರ್ಯಚಟುವಟಿಕೆಗಳನ್ನು ಆರಂಭಿಸುವ ವರೆಗೆ ಆ 'ಶಿಕ್ಷಣ ಸಂಸ್ಥೆಯನ್ನು' ಅನಿಶ್ಚಿತತೆ, ಅಸ್ಪಷ್ಟತೆಗಳು ಬಾಧಿಸುತ್ತಲೇ ಇದ್ದವೆಂದು ತೋರುತ್ತದೆ. ಇದರಿಂದಾಗಿ 'ಸಂಸ್ಥೆಗೆ' ತನ್ನನ್ನು ಪೂರ್ಣಪ್ರಮಾಣದಲ್ಲಿ ತೊಡಗಿಸಿಕೊಳ್ಳುವುದು ಸಹಜವಾಗಿಯೇ ದುಸ್ತರವಾಗಿತ್ತು. ಯಾವಾಗ ತಾನಿನ್ನು ಸದೃಢವಾಗಿ ನೆಲೆ ನಿಲ್ಲಬಲ್ಲೆನೆಂಬ ಆತ್ಮವಿಶ್ವಾಸ ಕುದುರಿತೋ ಆಗ ತನ್ನೆಲ್ಲ ಚೈತನ್ಯವನ್ನೂ ನಾನಾವಿಧದಲ್ಲಿ ವಿಸ್ತರಿಸಿಕೊಂಡು ಅಭೂತಪೂರ್ವವಾಗಿ ಬೆಳೆಯಲು ಹವಣಿಸತೊಡಗಿತು. ೧೮೫೬ರಿಂದ ೧೮೬೬ರ ವರೆಗೆ ಈ ಸಂಸ್ಥೆಯ ಸುಖ–ದುಃಖಗಳನ್ನು ಉಂಡು ಬೆಳೆದಿದ್ದ ಚೆನ್ನಬಸಪ್ಪನವರು, ಮುಂದೆ ೧೮೬೬ರಿಂದ ೧೮೬೯ರ ವರೆಗೆ ಬೆಳಗಾವಿ ಜಿಲ್ಲೆಯ ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರರಾಗಿಯೂ ಕಾಲೇಜಿನ ನೋವು ನಲಿವುಗಳಲ್ಲಿ ಸ್ಪಂದಿಸುವುದು ಸಹಜ ಹಾಗೂ ಅನಿವಾರ್ಯವೇ ಆಗಿತ್ತು. ದೈವಸಂಕಲ್ಪ ಎಂಬಂತೆ 'ಟ್ರೇನಿಂಗ್ ಕಾಲೇಜು' ಬೆಳಗಾವಿಯಿಂದ (೧೮೭೫) ಧಾರವಾಡಕ್ಕೆ ಶಾಶ್ವತವಾಗಿ ಮರಳಿ ಬಂದಾಗ ಚೆನ್ನಬಸಪ್ಪನವರು ಇಲ್ಲಿಯೇ ೧೮೬೯ರಿಂದ ಡೆಪ್ಯೂಟಿಯಾಗಿ ಕಾರ್ಯನಿರ್ವಹಿಸುತ್ತಿದ್ದರು. ಹೀಗಾಗಿ ಈ'ಶಿಕ್ಷಣಸಂಸ್ಥೆ' ತನ್ನ ಆರಂಭದ ದಿನದಿಂದಲೂ ಡೆಪ್ಯೂಟಿಯವರು ಜೀವಿಸಿರುವ ವರೆಗೂ ಅವರ ಕಣ್ಣರಿಕೆಯಲ್ಲೇ ತನ್ನ ಬೆಳವಣಿಗೆಯ ಬಹುಮುಖ್ಯವಾದ ಮಜಲುಗಳನ್ನು ರೂಪಿಸಿಕೊಳ್ಳಲು ಹಿಂದೇಟು ಹಾಕಬೇಕಾದ ಸಂದರ್ಭವೇ ಇರಲಿಲ್ಲ. ಹೀಗಾಗಿ ಮೊದಲಿನಿಂದಲೂ 'ಸಂಸ್ಥೆ' ಚೆನ್ನಬಸಪ್ಪನವರಂತೆ ಅಂತರ್ಮುಖಿಯಾಗಿಯೇ ಬೆಳೆಯಿತೇ ವಿನಃ ಯಾವುದೇ ಪ್ರಚಾರ, ಪ್ರಶಂಶೆಗಳಿಗೆ ಬಲಿಯಾಗಲಿಲ್ಲ. ಇದರಿಂದಾಗಿ ಡೆಪ್ಯೂಟಿಯವರ ಕಾಲಾನಂತರವೂ ಅದರ ಸಾಧನೆಯ ವೇಗ ಮತ್ತು ತೂಕಕ್ಕೆ ಜವೆಯಷ್ಟೂ ಕೊರತೆಯಾಗಿಲ್ಲ. ಈ ಮಾತಿಗೆ 'ಕಾಲೇಜಿನ' ಚಟುವಟಿಕೆಗಳ ಆಮೇಲಿನ ಕೆಲವು ಮುಖ್ಯ ಮಜಲುಗಳನ್ನು ಇಲ್ಲಿ ಪರಿಶೀಲಿಸಬಹುದು:

ಮುಲ್ಕೀ ಪರೀಕ್ಷೆಯನ್ನು ಪಾಸಾದವರು, ಅದರಲ್ಲೂ ಹೆಚ್ಚು ಅಂಕಗಳನ್ನು ಪಡೆದವರು ಟ್ರೇನಿಂಗ್ ಕಾಲೇಜಿನಲ್ಲಿ ಪ್ರವೇಶ ಪಡೆಯಬಹುದು. ಕಾಲೇಜು ಪ್ರವೇಶ ಬಯಸುವ ಅಭ್ಯರ್ಥಿ ಪ್ರವೇಶ ಪರೀಕ್ಷೆ (entrance exam) ಎದುರಿಸಬೇಕಾಗಿಲ್ಲವೆಂಬ ಈ ಮುಂಚೆ ತೆಗೆದು ಹಾಕಿದ್ದ ನಿರ್ಬಂಧವನ್ನು ಪುನಃ ಜಾರಿ ಮಾಡಿದ್ದು, ಆಗ ಧಾರವಾಡದ(೧೮೮೮) ಕಲೆಕ್ಟರರಾಗಿದ್ದ ಶ್ರೀ ವಿಂಟ್ ಅವರ ಆಸಕ್ತಿಯಂತೆ ವೃತ್ತಿಮೂಲ ವಿಷಯಗಳ ಕಲಿಕೆಯನ್ನು ಅಭ್ಯಾಸಕ್ರಮದಲ್ಲಿ ಅಳವಡಿಸಿದ್ದು, ಹೆಚ್ಚುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ ೧೯೧೩ರಲ್ಲಿ ಸರಕಾರದಿಂದ ೧ ಲಕ್ಷ ರೂ ನೆರವು ಪಡೆದು ಮುಖ್ಯ ಕಟ್ಟಡದ ಇಮಾರತಿಯನ್ನು ನಿರ್ಮಿಸಿದ್ದು, ೧೯೩೯ರ

೭. ನಾರ್ಮಲ್ ಸ್ಕೂಲು ಧಾರವಾಡದಿಂದ ಬೆಳಗಾವಿಗೆ ಸ್ಥಳಾಂತರ ಹೊಂದಿದಾಗ ಅಲ್ಲಿಯ ಕಿಲ್ಲೆಯಲ್ಲಿ ನಡೆಯುತ್ತಿತ್ತೆಂದು ತಿಳಿಯುತ್ತದೆ. ಮುಂದೆ ಅದು ಕಾಲೇಜಾಗಿ ಪರಿವರ್ತನೆಯಾದ ಮೇಲೂ ಎಷ್ಟೋ ದಿನ ಅಲ್ಲಿಯೇ ತನ್ನ ಕಾರ್ಯವನ್ನು ಮುಂದುವರಿಸಿತ್ತು. ತರುವಾಯ ಅದು ಊರೊಳಗಿನ ಒಂದು ಇಮಾರತಿಗೆ ಸ್ಥಳಾಂತರಗೊಂಡ ಬಳಿಕ ಶಿಕ್ಷಕರಿಗೂ, ವಿದ್ಯಾರ್ಥಿಗಳಿಗೂ ಹೆಚ್ಚಿನ ಅನುಕೂಲವಾಯಿತು. ೧೮೭೧ರ ನಂತರ ಕಾಲೇಜಿನ ವತಿಯಿಂದ ಎರಡು ರಾತ್ರೀ ಶಾಲೆಗಳೂ ನಡೆಯುತ್ತಿದ್ದುದಾಗಿ ತಿಳಿದು ಬರುತ್ತದೆ : ಪಾಟೀಲ ಎಸ್.ಪಿ-ಜೀವನ ಶಿಕ್ಷಣ: ಗಂ.ಸ. ಟ್ರೇನಿಂಗ್ ಕಾಲೇಜಿನ ಇತಿಹಾಸ, ಪು.೧೩.

ಸುಮಾರಿಗೆ ಪೂಜ್ಯ ಬಾಪೂಜಿಯವರ ಆಕಾಂಕ್ಷೆಯಂತೆ ವರ್ಧಾಶಿಕ್ಷಣ ಯೋಜನೆ ನಿಮಿತ್ತ 'ಹಿಂದೂಸ್ಥಾನೀ ತಾಲೀಮಸಂಘ' ಅಸ್ತಿತ್ವಕ್ಕೆ ಬಂದದ್ದು, ಇದೇ ಯೋಜನೆಯ ಅಂಗವಾಗಿ ವರ್ಧಾಶಿಕ್ಷಣ ಅಧ್ಯಾಪನಕೇಂದ್ರ ಹಾಗೂ ಪದವೀಧರರ ಸಲುವಾಗಿ ಮೂಲಶಿಕ್ಷಣ (ಜಿ.ಬಿ.ಟಿ.ಸಿ) ಕೇಂದ್ರ ಕಾರ್ಯಾರಂಭ ಮಾಡಿದ್ದು, ಇವೆಲ್ಲ ಬೆಳವಣಿಗೆಗಳು ಟ್ರೇನಿಂಗ್ ಕಾಲೇಜಿನ ಗುಣಾತ್ಮಕ ಉದ್ದೇಶವನ್ನು ಸಾಬೀತುಪಡಿಸುವ ಸ್ಪಷ್ಟ ನಿದರ್ಶನಗಳಾಗಿವೆ. ತನ್ನ ಆಶ್ರಯದಲ್ಲಿ ಮ.ಪ್ರ ಪೂಜಾರ, ಗಳಗನಾಥ, ಸಕ್ಕರಿ ಬಾಳಾಚಾರ್ಯ, ಸ.ಪ. ಗಾವಕರ, ಶಂಬಾ ಜೋಶಿ, ಸಿಂಪಿ ಲಿಂಗಣ್ಣ, ಪಂಡಿತ ಕವಲಿ, ಮಿರ್ಜಿ ಅಣ್ಣಾರಾಯ ಮುಂತಾದ ಪ್ರಸಿದ್ಧರಿಗೆ 'ಜೀವನ ಶಿಕ್ಷಣ' ನೀಡಿದ್ದೂ ಇದೇ ಕಾಲೇಜು.

ಇದಲ್ಲದೆ 'ಈ ಮಹಾಸಂಸ್ಥೆಯು ತನ್ನ ಶತಮಾನೋತ್ಸವ (೧೯೫೭ ಡಿಸೆಂಬರ ೨೭,೨೮), ಮಠಪತ್ರಿಕೆ–ಜೀವನಶಿಕ್ಷಣ ಪತ್ರಿಕೆಯ ಶತಮಾನೋತ್ಸವ (೧೯೬೭), ಪಾಠಾಭ್ಯಾಸ ಆದರ್ಶ ಪ್ರಾಥಮಿಕ ಶಾಲೆಯ ಶತಮಾನೋತ್ಸವ (೧೯೭೫), ಗಂಗಾಧರ ಮಡಿವಾಳೇಶ್ವರ ತೂರಮರಿ ಶತಾಬ್ದಿ (೧೯೭೭), ಡೆಪ್ಯೂಟಿ ಚೆನ್ನಬಸಪ್ಪನವರ ಪುಣ್ಯತಿಥಿ ಶತಮಾನೋತ್ಸವ (೧೯೮೧) ಹಾಗೂ ಜೀವನಶಿಕ್ಷಣ ಪತ್ರಿಕೆಯ ಶತಮಾನೋತ್ತರ ಬೆಳ್ಳಿಹಬ್ಬ(೧೯೯೦)ಗಳನ್ನು ಆಚರಿಸುವ ಮೂಲಕ ತನ್ನ ಸಾಂಸ್ಕೃತಿಕ ಆಸಕ್ತಿ, ಅಭಿರುಚಿಗಳನ್ನೂ ಶಕ್ತಿಯುತವಾಗಿ ಪ್ರದರ್ಶಿಸಿದೆ.

ಹೆಣ್ಣುಮಕ್ಕಳ ಶಿಕ್ಷಣದ ಅಗತ್ಯವನ್ನು ಅದಕ್ಕಿರುವ ಪ್ರೋತ್ಸಾಹದ ಕೊರತೆಯನ್ನು ಕೊಡುಕೊಂಡ ಈ 'ಮಹಾವಿದ್ಯಾಲ' ತನ್ನ ಅಂಗ ಸಂಸ್ಥೆಯಾಗಿ (೧೮೯೫) 'ಫಿಮೇಲ್ ಟ್ರೇನಿಂಗ್‌ಕ್ಲಾಸ್' ಆರಂಭಿಸಿದ್ದು, ಸಾರ್ವಜನಿಕರಿಂದಲೇ ಹಣ ಸಂಗ್ರಹಿಸಿ ಕಾಲೇಜಿನ ಎದುರಿಗೆ ಚೆನ್ನಬಸಪ್ಪನವರ ಕಂಚಿನ ಪ್ರತಿಮೆಯನ್ನು ಪ್ರತಿಷ್ಠಾಪಿಸಿದ್ದು ಮತ್ತು ಅವರ ಸ್ಮರಣಾರ್ಥ 'ಕನ್ನಡದ ದೀಪ' ಎಂಬ ಕೃತಿಯನ್ನು ಪ್ರಕಟಿಸಿದ್ದು ಹಾಗೂ ಸಂಗ್ರಹವಾದ ಹಣದಲ್ಲಿ ೧,೮೦,೦೦೦ (ಒಂದು ಲಕ್ಷ ಎಂಬತ್ತು ಸಾವಿರ) ಉಳಿಸಿ, ಚೆನ್ನಬಸಪ್ಪನವರ ಹೆಸರಿನಲ್ಲೇ 'ಪ್ರತಿಷ್ಠಾನ' ಸ್ಥಾಪಿಸಿದ್ದು ಡೆಪ್ಯೂಟಿಯವರ ಶೈಕ್ಷಣಿಕ ಹೊಂಗನಸಿನ ಕುರುಹುಗಳಂತಿವೆ.

'ಜೀವನ ಶಿಕ್ಷಣ ಪತ್ರಿಕೆ'ಯ (ಮೊದಲಿನ ಮಠಪತ್ರಿಕೆಯ) ಶತಮಾನೋತ್ತರ ಬೆಳ್ಳಿಹಬ್ಬದ ಸಂದರ್ಭದಲ್ಲಿ ಅದರ ಸವಿನೆನಪಿಗಾಗಿ ಸುಮಾರು ಇಪ್ಪತ್ತಾರು ಶೈಕ್ಷಣಿಕ ಪುಸ್ತಕಗಳನ್ನು ಪ್ರತಿಷ್ಠಾನವೇ ಪ್ರಕಟಿಸಿ, 'ಶಿಕ್ಷಣಸಾಹಿತ್ಯ'ದ ಅರ್ಥಪೂರ್ಣ ಕಾರ್ಯವನ್ನು ಮಾಡಿದೆ.

ಇಷ್ಟೊಂದು ದೀರ್ಘವಾದ ಸತ್ಪರಂಪರೆಗೆ, ಒಂದು ಸಾಂಸ್ಕೃತಿಕ, ಶೈಕ್ಷಣಿಕ ಇತಿಹಾಸ ನಿರ್ಮಾಣಕ್ಕೆ ಕಾರಣವಾದ ಮೂಲಚೈತನ್ಯ ಯಾವುದಿದ್ದಿರಬಹುದೆಂಬ ಪ್ರಶ್ನೆಗೆ ಡೆಪ್ಯೂಟಿ ಚೆನ್ನಬಸಪ್ಪನವರ ಹೆಸರನ್ನು ಹೇಳಲು ಯಾರೂ ಹಿಂಜರಿಯಲಾರರು. ಕರ್ನಾಟಕಕ್ಕೆ ಉತ್ತರ ಕರ್ನಾಟಕದವರ ಕೊಡುಗೆ ಏನು? ಎಂದು ಯಾರಾದರೂ ಪ್ರಶ್ನಿಸಿದರೆ, ಅವರಿಗೆ ಕೊಡುವ ಮೊದಲ ಉತ್ತರ ಟ್ರೇನಿಂಗ್ ಕಾಲೇಜು, ಮಠಪತ್ರಿಕೆ ಹಾಗೂ ಇವೆರಡರ ಮಹಾರೂವಾರಿ ಡೆಪ್ಯೂಟಿ ಚೆನ್ನಬಸಪ್ಪನವರು ಎಂದು ಹೇಳಬೇಕಾಗುತ್ತದೆ.



## ಮಠಪತ್ರಿಕೆಯ ರೂವಾರಿ

ಒಂದು ದೇಶದ ಚರಿತ್ರೆಯಲ್ಲಿ ಪತ್ರಿಕೆಗಳಿಗೆ ಬಹಳ ಪ್ರಮುಖವಾದ ಸ್ಥಾನವಿರುತ್ತದೆಂಬ ಮಾತನ್ನು ಯಾರೂ ಅಲ್ಲಗಳೆಯಲಾರರು. ಉಳಿದ ಸಮೂಹ ಮಾಧ್ಯಮಗಳಿಗಿಂತ ಸುಲಭವಾಗಿ, ವ್ಯಾಪಕವಾಗಿ ಮತ್ತು ಅಷ್ಟೇ ಸಂಗ್ರಾಹ್ಯವಾಗಿ ಜನತೆಯನ್ನು ತಲುಪಬಲ್ಲ ಸಾಧ್ಯತೆಗಳಿರುವುದು ಪತ್ರಿಕೆಗಳಿಗೆ ಮಾತ್ರ. ಬಾನುಲಿ ಮತ್ತು ದೂರದರ್ಶನಕ್ಕೆ ಪತ್ರಿಕೆಗಿಂತ ಹೆಚ್ಚು ನಿರ್ಬಂಧಗಳಿರುವುದರಿಂದ ಮತ್ತು ನಮ್ಮ ದೇಶದಲ್ಲಿ ಬಹುಸಂಖ್ಯಾತ ಜನ ಅವುಗಳ ಜಾಲದಿಂದ ಇನ್ನೂ ಹೊರಗೇ ಉಳಿದಿರುವುದರಿಂದ, ಇಲ್ಲಿ ಪತ್ರಿಕೆಗಳಿಗೆ ಪ್ರಧಾನಪಾತ್ರ.

ಈ ಪತ್ರಿಕೆಗಳು ಸಮಕಾಲೀನ ಜನಾಂಗದ ಬದುಕಿನ ವಿದ್ಯಮಾನಗಳನ್ನು, ಅದರ ಏಳು-ಬೀಳುಗಳನ್ನು, ಚಿಂತನೆಯ ಸ್ವರೂಪಗಳನ್ನು, ವರ್ತನೆಯ ವಿಧಾನಗಳನ್ನು, ಅವುಗಳ ಹಿಂದಿನ ಕಾರಣಗಳನ್ನು ನಂತರದ ಪರಿಣಾಮಗಳನ್ನೂ ಸಕೃದ್ದರ್ಶನಕ್ಕೆ ಕಂಡಂತೆ ಹಿಡಿದಿಟ್ಟು ವ್ಯಾಖ್ಯಾನಿಸುವುದರಿಂದ ಅವು ಅಂದಂದಿನ ಸಾಮಾಜಿಕ ಬದುಕಿನ ಅತ್ಯುತ್ತಮ ದಾಖಲೆಗಳೆನಿಸುತ್ತವೆ. ಪತ್ರಿಕೆಯಲ್ಲಿಯ ಒಂದು ಸಣ್ಣ ವರದಿ ಹೊಸ ಇತಿಹಾಸದ ನಾಂದಿಯಾಗಬಹುದು; ಹಳೆಯವರ ಮೇಲೆ ಬೆಳಕುಚೆಲ್ಲಬಹುದು. ಅದಕ್ಕೆ ಇತಿಹಾಸವನ್ನೂ ಕಟ್ಟುವ ಸಾಮರ್ಥ್ಯವೂ ಉಂಟು, ಕೆಡಹುವ ಸಾಮರ್ಥ್ಯವೂ ಉಂಟು. ಆದ್ದರಿಂದ ಒಂದು ಕಾಲಘಟ್ಟದಲ್ಲಿ ಸಾಗಿ ಬಂದ ಒಂದು ಪತ್ರಿಕೆಯ ಅಭ್ಯಾಸವೆಂದರೆ, ಆ ಕಾಲಘಟ್ಟದ ಜನಾಂಗವನ್ನೇ ಅಭ್ಯಸಿಸಿದಂತೆ. ಹೀಗಾಗಿ ಕಳೆದ ಶತಮಾನದಲ್ಲಿ ಕಣ್ಣು ತೆರೆದ 'ಮಠಪತ್ರಿಕೆ'ಯ ಅಭ್ಯಾಸವು ೧೨೫ ವರ್ಷಗಳ ಶೈಕ್ಷಣಿಕ-ಸಾಂಸ್ಕೃತಿಕ ಬದುಕಿನ ಅಭ್ಯಾಸವೆಂಬುದರ ಬಗ್ಗೆ ಸಂದೇಹವೇ ಉಳಿಯಲಾರದು.

ಡೆಪ್ಯೂಟಿ ಚೆನ್ನಬಸಪ್ಪನವರು ನೆನಪಾದಾಗಲೆಲ್ಲ ಅವರು ಕಟ್ಟಿದ ಟ್ರೇನಿಂಗ್ ಕಾಲೇಜು ನೆನಪಾಗುತ್ತದೆ. ನಿಜವಾಗಿಯೂ ಡೆಪ್ಯೂಟಿ ಚೆನ್ನಬಸಪ್ಪ, ಟ್ರೇನಿಂಗ್ ಕಾಲೇಜು, ಮಠಪತ್ರಿಕೆ - ಈ ಮೂರೂ ಒಂದೊಂದು ಮಹಾ ಸಂಸ್ಥೆಗಳು. ಇವುಗಳ ಸಾತತ್ಯದಿಂದ ನಡೆದ ಮೌನಕ್ರಾಂತಿಗೆ ಎಂಥವರೂ ನಿಬ್ಬೆರಗಾಗುತ್ತಾರೆ. 'ಮಠಪತ್ರಿಕೆ' ಹುಟ್ಟುಪಡೆದದ್ದು ಚೆನ್ನಬಸಪ್ಪನವರ ಕೈಯ್ಯಲ್ಲಿಯೇ. ಅವರು ಟ್ರೇನಿಂಗ್ ಕಾಲೇಜಿನ (ಪ್ರಥಮ) ಪ್ರಿನ್ಸಿಪಾಲರಾಗಿದ್ದಾಗಿನಿಂದ ಮೊದಲು ಮಾಡಿ ನೂರಿಪ್ಪತ್ತೈದು ವರ್ಷಗಳಿಗೆ ಈ ಪತ್ರಿಕೆ ಪ್ರಾಥಮಿಕ ಶಿಕ್ಷಣ ಹಾಗೂ ಕನ್ನಡದ ಬೆಳವಣಿಗೆಗೆ ಕೊರಳಾಗಿರುವುದರಿಂದ ಇದಕ್ಕೊಂದು ಇತಿಹಾಸವಿದೆ, ಒಂದು ಪರಂಪರೆಯಿದೆ.

ಕರ್ನಾಟಕದಲ್ಲಿ 'ಪತ್ರಿಕಾ ವ್ಯವಸಾಯ'ದ ಪ್ರಾಚೀನತೆಯನ್ನು ಗುರುತಿಸುತ್ತ ಡಾ. ಶ್ರೀನಿವಾಸ ಹಾವನೂರ ಅವರು ಕ್ರಿ.ಶ. ೧೮೪೯ ರಲ್ಲಿ (ಜೂನ್) ಪ್ರಕಟಗೊಂಡ ಮೈಸೂರು 'ವೃತ್ತಾಂತಬೋಧಿನಿ' ಕರ್ನಾಟಕದ ಮೊತ್ತಮೊದಲ ಪತ್ರಿಕೆ ಎನ್ನುತ್ತಾರೆ.[೧] ಇದರಂತೆಯೇ ಉತ್ತರ ಕರ್ನಾಕವನ್ನಷ್ಟೇ ದೃಷ್ಟಿಯಲ್ಲಿಟ್ಟುಕೊಂಡು, ಡಾ.ರಾ.ಯ.ಧಾರವಾಡಕರ ಅವರು ೧೮೫೦ ರಲ್ಲಿ ಬೆಳಗಾವಿಯಿಂದ ಹೊರಡುತ್ತಿದ್ದ 'ಸುಬುದ್ಧಿ ಪ್ರಕಾಶ'ವು ಉತ್ತರ ಕರ್ನಾಟಕದ ಮೊತ್ತಮೊದಲ ಪತ್ರಿಕೆ ಎಂದಿದ್ದಾರೆ.[೨]

ಪತ್ರಿಕಾವ್ಯವಸಾಯದ (ಕರ್ನಾಟಕದಲ್ಲಿ) ಪ್ರಾಚೀನತೆಯನ್ನು ಕುರಿತಾದ ವಾದ ವಿವಾದಗಳೇನೇ ಇರಲಿ, ಒಂದು ಪತ್ರಿಕೆಯ ಬೆಲೆ ಕಟ್ಟುವಾಗ, ಅದರ ಸಾರ್ಥಕತೆಯನ್ನು ನಿರ್ಧರಿಸುವಾಗ, ಕೇವಲ ಅದರ ಪ್ರಾಚೀನತೆ ಅಷ್ಟೇ ಮುಖ್ಯವಾಗುವುದಿಲ್ಲ, ಅದರ ಸಾಧನೆ ಮಾನದಂಡವಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ ೧೮೭೫ ರಲ್ಲಿ ಹುಟ್ಟಿ, ಇಂದಿಗೂ ಸಾರ್ಥಕ ಸೇವೆ ಸಲ್ಲಿಸುತ್ತಿರುವ 'ಮತಪತ್ರಿಕೆ' ಒಂದು ಅಪೂರ್ವ ಉಪಕ್ರಮವೆಂದೇ ಹೇಳಬೇಕು.

ಈ ಪತ್ರಿಕೆಯ ಜನನಕ್ಕೆ ಒಂದು ಹಿನ್ನೆಲೆ, ಒಂದು ಪ್ರಯತ್ನವಿದ್ದು ಮೊದಲ ಸಂಚಿಕೆಯ ಸಂಪಾದಕೀಯದಂತಿರುವ ಈ ಕೆಳಗಿನ ಪೀಠಿಕೆಯಿಂದ ಅದನ್ನು ತಿಳಿಯಬಹುದಾಗಿದೆ.

"ಈ ಕರ್ನಾಟಕ ಶೀಮೆಯಲ್ಲಿ ಶುದ್ಧವಾದ ಕನ್ನಡಭಾಷೆಯ ವಿಸ್ತಾರವು ಆಗತಕ್ಕದೆಂಬುದಾಗಿ ಸಾರಾಸಾರ ವಿಚಾರವುಳ್ಳ ಎಜ್ಯುಕೇಶನಲ್ ಇನ್‌ಸ್ಪೆಕ್ಟರ ದೊರೆಗಳು ಆಲೋಚನೆ ಮಾಡುವವರಾಗಿ ಕೆಲವು ಸಂವತ್ಸರಗಳ ಕೆಳಗೆ ಈ ಸೀಮೆಯ ಜನರಿಗಾಗಿ ಕನ್ನಡ ಭಾಷೆಯಲ್ಲಿ "ಕನ್ನಡ ಜ್ಞಾನಬೋಧಕ"ವೆಂದು ಒಂದು ಮಾಸಿಕ ಪತ್ರಿಕೆಯನ್ನು ಪ್ರಸಿದ್ಧಮಾಡಲು ಅಪ್ಪಣೆಸಿದ್ದ ಪ್ರಕಾರ, ಸನ್ ೧೮೭೨ನೆ ಇಸವಿ ಮೇ ತಿಂಗಳ ವರೆಗೂ ಧಾರವಾಡ ಛಾಪಖಾನೆಯಲ್ಲಿ ಛಾಪಿಸಲ್ಪಟ್ಟು ಚಂನಾಗಿ ಸಾಗುವಂಥದ್ದಾಯಿತು. ಆ ಕ್ರಮವು ಕೆಲವು ಅಡ್ಡಿಗಳುಂಟಾಗಿ ನಷ್ಟವಾದದ್ದರಿಂದ ದೊರೆಗಳು "ವಿಚಿತ್ರ ವರ್ತಮಾನ ಸಂಗ್ರಹ"ವೆಂದು ಒಂದು ಸಮಾಚಾರ ಪತ್ರಿಕೆಯನ್ನು ತಿಂಗಳಿಗೆರಡಾವರ್ತಿ ಛಾಪಿಸಿ ತರಿಸುವ ಬಗ್ಗೆ ಬೆಂಗಳೂರಿನಲ್ಲಿ ಇರುವ ಅಚ್ಚು ಹಾಕುವವರಿಗೆ ಬರೆದು ಕಳುಹಿಸಲಾಗಿ ಅವರದಕ್ಕೆ ಒಡಂಬಟ್ಟಿದ್ದರಿಂದ ಒಂದೆರಡು ವರ್ಷಗಳ ಮಟ್ಟಿಗೂ ಅಂದರೆ ಅಂದಿನಿಂದ ಸನ್ ೧೮೭೩ನೇ ಇಸವಿ ಡಿಸೆಂಬರ ತಿಂಗಳವರೆಗೂ ಚಂನಾಗಿ ಸಾಗುವಂಥದ್ದಾಯಿತು. ಅನಂತರದಲ್ಲಿ ಆ ಅಚ್ಚಿನವರು ತಮ್ಮ ಆದಾಯಕ್ಕೂ ವೆಚ್ಚಕ್ಕೂ ಸರಿ ಬೀಳುವುದಿಲ್ಲ ತಂಮಿಂದಾ ಕ್ರಮವು ನಡಿಸಲಾಗದು ಎಂದು ಹೇಳುವಂಥವರಾಗಿ ಬಿಟ್ಟುಬಿಟ್ಟರು. ಆದ್ದರಿಂದ ಬೆಳಗಾವಿಯಲ್ಲಿ ಇತ್ತಲಾಗಿ ನಿರ್ಮಾಣವಾದ 'ಸಮಾಚಾರ' ಅಚ್ಚಿನಲ್ಲಿ ಕೇವಲ ಪೂರ್ವದಲ್ಲಿ ಪ್ರಕಟಿಸುತ್ತಿರುವ'ಕನ್ನಡ ಜ್ಞಾನಬೋಧಕ'ವು ಮರಳಿ ಪ್ರಕಟಿಸಬೇಕೆಂದು ದೊರೆಗಳು ಅಪ್ಪಣೆ ಮಾಡಿದರು. ಆ ಪ್ರಕಾರ ಇಂದಿನ ಪರಿಯಂತರಕ್ಕೂ ಅನುಕ್ರಮವು ನಡೆಯಿತು.

ವರ್ತಮಾನ ಕಾಲದಲ್ಲಿ ಅಚ್ಚಿನ ವೆಚ್ಚಕ್ಕೂ ಆದಾಯಕ್ಕೂ ಬಹಳ ಹೆಚ್ಚು ಕಡಿಮೆಯಾಗಿರುವುದನ್ನು ಕಂಡು ಈ 'ಜ್ಞಾನಬೋಧಕ'ವೆಂಬ ಪತ್ರಿಕೆ ಮುಂದಕ್ಕೆ ಸಾಗಿಸುವದಕ್ಕೆ ಮಾರ್ಗವಿಲ್ಲ. ಅದಕ್ಕಾಗಿ ಈ ಕ್ರಮವನ್ನು ಬಿಟ್ಟುಕೊಟ್ಟು ಇದಕ್ಕೆ ಬದಲಾಗಿ ಮತಗಳಿಗೋಸ್ಕರ ಒಂದು 'ಮತಪತ್ರಿಕೆ'ಯನ್ನು ತಿಂಗಳಿಗೊಂದಾವರ್ತಿ ಛಾಪಿಸುವುದು ಲೇಸಾಗಿ ಕಾಣಿಸುತ್ತದೆಂದು,

---

೧. ಹಾವನೂರ ಶ್ರೀನಿವಾಸ : ಹೊಸಗನ್ನಡದ ಅರುಣೋದಯ, ಪುಟ.೪೯೦.

೨. ಧಾರವಾಡಕರ. ರಾ.ಯ. : ಹೊಸಗನ್ನಡದ ಸಾಹಿತ್ಯದ ಉದಯಕಾಲ, ಪುಟ.೬೯.

ಮೇ. ಲಿಟಲ್ ಸಾಹೇಬ ಬಹದ್ದೂರ ಎಜ್ಯುಕೇಶನಲ್ ಇನ್‌ಸ್ಪೆಕ್ಟರರು ಮೇ.ಹರ್ವರ್ಡ ಸಾಹೇಬ ಬಹದ್ದೂರ ಡೈರೆಕ್ಟರ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಶನ್ ಇವರಿಗೆ ಬರೆದು ಕಳುಹಿಸಿದ್ದರಿಂದ, ಈ ಸಲೆ ಸೊಗಸಾಲೋಚನೆಗೆ ಮೆಚ್ಚಿ, ಅದರಂತೆ ಮಾಡಿ ಎಂದು ಅಪ್ಪಣೆ ಕೊಡುವಂಥವರಾದರು. ಅದಕ್ಕಾಗಿ ಇನ್‌ಸ್ಪೆಕ್ಟರವರ ಅಪ್ಪಣೆಯ ಪ್ರಕಾರ ಈಗ್ಯೆ ನೂತನವಾಗಿ ಈ ಮಾಸಿಕ "ಮಠಪತ್ರಿಕೆ"ಯನ್ನು ಪ್ರಸಿದ್ಧಿಯಾಗಿ ಮಾಡಿರುತ್ತದೆ.

ಇದರಲ್ಲಿ ಮಠಗಳಿಗೆ ಸಾಧಾರಣವಾಗಿ ಸಂಬಂಧಿಸಿ ಇರುವ ವಿಷಯಗಳ್ಯಾವವೆಂದರೆ :

೧. ವಿದ್ಯಾರ್ಥಿಗಳಿಗೆ ಕಲಿಸುವ ಕ್ರಮ ಪದ್ಧತಿಗಳು
೨. ನಿಯಮಗಳು
೩. ಈ ಖಾತೆಗೆ ಸಂಬಂಧಿಸಿರುವ ಕೆಲಸಾಳಿಗಳ ನೇಮಣೂಕಿಗಳು
೪. ಅನೇಕ ವಿಧವಾದ ವಿದ್ಯಾವೃದ್ಧಿಕರವಾದ ಸದ್ಬೋಧನೆಗಳು
೫. ಸರಕ್ಯೂಲರ್ - ಹುಕುಮುಗಳು
೬. ವರ್ತಮಾನ ಸಮಾಚಾರಗಳು
೭. ಮಠಗಳ ಗುರು (ಪಂತರ)ಗಳಿಗೆ ಸಂಬಳ ಹೆಚ್ಚಾಗುವ ಬಗ್ಗೆ ಕೊಡಲ್ಪಟ್ಟ ಸರಕ್ಯೂಲರ್ ಹುಕುಮುಗಳು

ಇವುಗಳಲ್ಲದೆ ಕೆಲವು ನಾನಾವಿಧವಾದ ಶಾಸ್ತ್ರವರ್ಣನೆಗಳು ಸಹ ಪ್ರಸಂಗವಶಾತ್ತಾಗಿ ಬರಿಯಲ್ಪಡುವವು.[೩]

ಇಲ್ಲಿ ನಮಗೆ 'ಮಠಪತ್ರಿಕೆ' ಮಾಸಪತ್ರಿಕೆಯಾಗಿ ಪ್ರಕಟಗೊಳ್ಳಲು ಆರಂಭವಾಗುವ ಮುಂಚೆ 'ಕನ್ನಡ ಜ್ಞಾನಬೋಧಕ' ಎಂಬ ಮಾಸಿಕವೂ, ಆಮೇಲೆ 'ವಿಚಿತ್ರವರ್ತಮಾನ ಸಂಗ್ರಹ'ವೆಂಬ ಪಾಕ್ಷಿಕವೂ ಪುನಃ 'ಕನ್ನಡ ಜ್ಞಾನಬೋಧಕ'ವೂ ಕ್ರಮವಾಗಿ ಧಾರವಾಡ, ಬೆಂಗಳೂರ ಹಾಗೂ ಬೆಳಗಾವಿಯಲ್ಲಿ ಅಚ್ಚಾಗುತ್ತಿದ್ದವೆಂದು ತೋರುತ್ತದೆ. ಹುಟ್ಟುತ್ತ, ಬದಲಾಗುತ್ತ, ಕೊನೆಗೆ ಅಂದಿನ ಎಜ್ಯುಕೇಶನಲ್ ಇನ್‌ಸ್ಪೆಕ್ಟರ ಲಿಟಲ್ ಸಾಹೇಬರ ಸೂಚನಾನುಸಾರ, ಡಿ.ಪಿ.ಆಯ್. ಹರ್ವರ್ಡ ಸಾಹೇಬರ ಅನುಮತಿ ಪಡೆದು 'ಮಠಪತ್ರಿಕೆ' ಎಂಬ ಹೆಸರನ್ನು ಹೊತ್ತು ಮಾಸಪತ್ರಿಕೆಯಾಗಿ ಪ್ರಕಟಗೊಳ್ಳಲು ಆರಂಭವಾಯಿತೆಂದು ಮನವರಿಕೆಯಾಗುತ್ತದೆ.[೪]

ಈ ಪತ್ರಿಕೆ ಉಗಮ ಹೊಂದಿದ್ದು, ಚೆನ್ನಬಸಪ್ಪನವರು ಬೆಳಗಾವಿಯಲ್ಲಿ ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರಾದ ಸಂದರ್ಭದಲ್ಲಿ. ಅವರೇ (೧೮೬೫) ಇದರ ಪ್ರಧಾನ ಸಂಪಾದಕರಾಗಿ ಅದಕ್ಕೊಂದು ವ್ಯವಸ್ಥಿತ ರೂಪಕೊಡುವಲ್ಲಿಯೂ ಮೊದಲಿಗರಾದರು. ಆಗ ಬೆಳಗಾವಿಯಲ್ಲಿದ್ದ 'ಸಮಾಚಾರ'ವೆಂಬ ಕಲ್ಲಚ್ಚಿನ ಮುದ್ರಣಾಲಯದಲ್ಲಿ ಇದು ಪ್ರಕಟಗೊಳ್ಳುತ್ತಿತ್ತು.[೫] ಮೊದಲಿನ ಆರು ವರ್ಷಗಳ ವರೆಗೆ ಶಿಲಾಮುದ್ರಣ ಪದ್ಧತಿಯಂತೆ (ಲಿಥೋಗ್ರಾಫ್ ಪ್ರಿಂಟಿಂಗ) ಅಚ್ಚಾಗುತ್ತಿತ್ತು. ನಂತರ ಅಕ್ಷರ ಜೋಡಣೆ ಮುದ್ರಣದಿಂದ ಪ್ರಕಟವಾಗತೊಡಗಿತು.* ಈ

೩. ಮಠಪತ್ರಿಕೆ : ಸಂಪುಟ-೧. ಸಂಚಿಕೆ ೧ (೧೮೬೫) ಪೀಠಿಕೆ.
೪. ೧೮೬೪ ರಲ್ಲಿ ವಿದ್ಯಾ ಇಲಾಖೆಯವರು ಆರಂಭಿಸಿದ್ದ ಬಾಂಬೆ ಎಜ್ಯುಕೇಶನಲ್ ರಿಕಾರ್ಡ (Bombay Educational Record) - ಎಂಬ ಮಾಸಿಕ ಪತ್ರಿಕೆಯ ಮಾದರಿಯಲ್ಲೇ ಇದು ಪ್ರಕಟಗೊಂಡಿತೆಂದು ಹೇಳುತ್ತಾರೆ.
೫. ಮಠಪತ್ರಿಕೆಯ ಮುದ್ರಕರು ಬೆಳಗಾವಿಯ ಭಿಕಾಜಿ. ಹರಿ. ಸಾವಂತ ಮತ್ತು ರಾಮಚಂದ್ರ. ಪ್ರಭಾಕರ. ಜೋಶಿ, ೧೮೬೫ ನೇ ಇಸ್ವಿ ಎಪ್ರೀಲ ತಿಂಗಳಲ್ಲಿ ಈ ಪತ್ರಿಕೆಯ ಮೊದಲ ಸಂಚಿಕೆ ಪ್ರಕಟವಾಯಿತು.
* ಶಾಲಾಪತ್ರಿಕೆ : ಪುಸ್ತಕ ೭, ಸಂಚಿಕೆ ೭, ಅಕ್ಟೋಬರ ೧೮೭೧

ಸಂಗತಿ ತಿಳಿದರೆ ಮಾತ್ರ ಪತ್ರಿಕೆ ಎಂಥ ಕಷ್ಟವನ್ನು ಕಟ್ಟಿಕೊಂಡೇ ತನ್ನ ಮೊದಲ ಹೆಜ್ಜೆಗಳನ್ನಿಡತೊಡಗಿತೆಂಬುದು ಅರ್ಥವಾಗುತ್ತದೆ.

'ಮಠಪತ್ರಿಕೆ' ಎಂಬ ಹೆಸರೇ ಕುತೂಹಲವನ್ನು ಕೆರಳಿಸುತ್ತದೆ. ಮೂಲತಃ ಮಠವೆಂದರೆ ಶಾಲೆ. ಆ ಕಾಲದಲ್ಲಿ ಮಠಗಳೇ ಶಾಲೆಗಳಾಗಿರುತ್ತಿದ್ದವು ಅಥವಾ ಶಾಲೆಗಳೆಲ್ಲ ಮಠದಲ್ಲಿಯೇ ನಡೆಯುತ್ತಿದ್ದವು. ಇಂದಿಗೂ ಎಷ್ಟೋ ಮಠಗಳಿಗೆ 'ಸಾಲಿಮಠ' ಎಂಬ ಹೆಸರಿರುವುದು ಗಮನಾರ್ಹ. ಮಠಗಳಲ್ಲಿದ್ದ ಅಯ್ಯನವರು, ವಿದ್ಯಾರ್ಜನೆಯನ್ನು ಅಪೇಕ್ಷಿಸಿ ಮಠಕ್ಕೆ ಬರುವ ಮಕ್ಕಳಿಗೆ ವಿದ್ಯೆಯನ್ನು ಹೇಳಿಕೊಡುವ ಪದ್ಧತಿ ಇತ್ತು. ಡೆಪ್ಯೂಟಿ ಚೆನ್ನಬಸಪ್ಪನವರ ಪ್ರಾಥಮಿಕ ವಿದ್ಯಾಭ್ಯಾಸವು ಧಾರವಾಡದಲ್ಲಿ ಸಾಲಿಮಠ ಶಿವರುದ್ರಯ್ಯನವರ ಹತ್ತಿರ ಆಯಿತೆಂಬುದನ್ನು ನೆನಪಿಸಿಕೊಳ್ಳಬೇಕು.[೬] ಹೀಗೆ ಶಿಕ್ಷಣ ಮತ್ತು ಮಠಗಳ ಸಂಬಂಧ ಇನ್ನೂ ಗಟ್ಟಿಯಾಗಿದ್ದ ಸಂದರ್ಭದಲ್ಲಿ ಹುಟ್ಟಿದ ಕಾರಣ ಇದಕ್ಕೇ 'ಮಠಪತ್ರಿಕೆ' ಎಂಬ ಹೆಸರಿಟ್ಟದ್ದು ಔಚಿತ್ಯಪೂರ್ಣವೆನಿಸುತ್ತದೆ.

'ಮಠಪತ್ರಿಕೆ' ಶೂನ್ಯದಲ್ಲಿ ಸೃಷ್ಟಿಯಾದ ವಾಸ್ತವಲೋಕ. ಇದರ ಅಂತರಂಗ ಅನೇಕ ವಿಸ್ಮಯಗಳ ಒಂದು ಅದ್ಭುತ ಪ್ರಪಂಚ. ಸ್ಥಗಿತಗೊಂಡಿದ್ದ ಒಂದು ಸಾಮಾಜಿಕ ಸಂದರ್ಭಕ್ಕೆ ಹೊಸ ಸೆಲೆ ಮೂಡಿಸಿದ ಸಾಂಸ್ಕೃತಿಕ ಗಂಗೋತ್ರಿ. ಪತನಗೊಳ್ಳಲಿದ್ದ ಒಂದು ಜನಾಂಗದ ಬದುಕನ್ನೇ ಕಟ್ಟಿನಿಲ್ಲಿಸಿದ ಪತ್ರಿಕೆ. ಸರಕಾರದ ಸಹಾಯವಿಲ್ಲದೆ, ಪುಡಿಕಾಸಿನ ಜಾಹಿರಾತುಗಳಿಲ್ಲದೆ ಕೇವಲ ಶಿಕ್ಷಕಬಂಧುಗಳ ಅಂತಃಕರಣವನ್ನೇ ಆಶ್ರಯಿಸಿ ಬೆಳೆದ ಕನ್ನಡನಾಡಿನ ಏಕೈಕ ಶೈಕ್ಷಣಿಕ ಪತ್ರಿಕೆ. ಪ್ರಾಥಮಿಕ ಶಿಕ್ಷಕರ ಹಾಗೂ ವಿದ್ಯಾರ್ಥಿ ಶಿಕ್ಷಕರ (Trainees) ಸುಧಾರಣೆಯೇ ಇದರ ಮುಖ್ಯಗುರಿ. ಹೆಚ್ಚಾಗಿ ಇದರ ಲೇಖಕರೂ ಶಿಕ್ಷಕರೇ ಓದುಗರೂ ಶಿಕ್ಷಕರೇ. ಪತ್ರಿಕೆ ಸಾಗಿಬಂದ ದಾರಿಯತ್ತ ಗಮನಹರಿಸಿದಾಗ ಈ ಪತ್ರಿಕೆಯ ಬಗ್ಗೆ ಆಗಲೇ ವ್ಯಕ್ತಪಡಿಸಿದ ಅನಿಸಿಕೆಗಳ ಬಗ್ಗೆ ವಿಫುಲವಾದ ಪುರಾವೆಗಳು ದೊರಕುತ್ತವೆ.

ಸಾಮಾನ್ಯವಾಗಿ ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರುಗಳೇ 'ಮಠಪತ್ರಿಕೆ'ಯ ಸಂಪಾದಕರಾಗುವುದು ಇವತ್ತಿನ ವರೆಗೂ ಅನುಸರಿಸಿಕೊಂಡು ಬಂದ ಪದ್ಧತಿ. ಇವರು ಪ್ರತಿ ಸಂಚಿಕೆಗೆ ಸಂಪಾದಕೀಯ ರೂಪದ ಲೇಖನಗಳನ್ನು (ಮೊದಮೊದಲು ಇವುಗಳನ್ನು ಸಂಪಾದಕೀಯವೆಂದು ಕರೆದದ್ದಿಲ್ಲ) ಬರೆಯುವ ಪರಿಪಾಠ ಇಟ್ಟುಕೊಂಡುರುವುದನ್ನು ಕಾಣುತ್ತೇವೆ. ಇವು ಮುಖ್ಯವಾಗಿ 'ಶಿಕ್ಷಣ' ಮತ್ತು 'ಪದಾರ್ಥವಿಜ್ಞಾನ' ಎಂಬ ಎರಡು ಸಾಮಾನ್ಯ ತಲೆಕಟ್ಟಿನ ಅಡಿಯಲ್ಲಿ ಬರೆಯಲ್ಪಡುತ್ತಿದ್ದವು. ನಿಜವಾಗಿಯೂ ಈ ಸಂಪಾದಕೀಯಗಳು ಆಯಾ ಸಂಪಾದಕರುಗಳ ಪ್ರತಿಭೆಯ ಕುರುಹುಗಳಾಗಿವೆ. ಒಂದೊಂದು ವಿಷಯವನ್ನು ಎತ್ತಿಕೊಂಡು ಪುಟ, ಎರಡು ಪುಟದಷ್ಟಿರುವ ಆ ಬರವಣಿಗೆಗಳು ಒಂದು ಶತಮಾನ ಕಳೆದರೂ 'ಪ್ರಸ್ತುತ'ವೆನಿಸುತ್ತವೆ. ಒಂದು ಸಣ್ಣ, ಅಲಕ್ಷಿತ ವಿಷಯವನ್ನು ಅವರು ವ್ಯಾಖ್ಯಾನಿಸುವ ರೀತಿ, ಆ ಬಗ್ಗೆ ಮಾಡುವ ಶಾಸ್ತ್ರೀಯ ವಿವೇಚನೆ ಅನನ್ಯವಾದುದು. ಎಂಥ ಸಂಕೀರ್ಣ ವಿಷಯವನ್ನೂ ಸುಲಭಗೊಳಿಸಿ, ಪರಿಣಾಮಕಾರಿಯಾಗಿ ಹೇಳುವ ಅವರ ಕಲಾತ್ಮಕತೆ ಅನುಕರಣೀಯವಾದುದು. ಪ್ರಾಯಶಃ ಈ ವಿಷಯಗಳೆಲ್ಲ ಸಾರ್ವತ್ರಿಕ ಪ್ರಯೋಜನಗಳುಳ್ಳವುಗಳಾಗಿದ್ದು, 'ಬಹುಜನ ಹಿತಾಯ, ಬಹುಜನ ಸುಖಾಯ'ವೇ ಇವುಗಳ ಧ್ಯೇಯವಾಗಿರುವಂತಿದೆ.

---

೬. "ಮಠ" ಎಂದರೆ ಶಾಲೆ ಎಂದರ್ಥ. ಆಗ ಶಾಲೆಗಳೆಲ್ಲ ಮಠಗಳಲ್ಲಿಯೇ ಇರುತ್ತಿದ್ದವು. ಮಠದ ಅಯ್ಯನವರೇ ಅಂದಿನ ಶಿಕ್ಷಕರು. ಅಂದಿನ ಶಾಲೆಗಳೆಲ್ಲ ಗುರುಕುಲಗಳಿದ್ದಂತೆ. ವಿದ್ಯಾರ್ಜನೆಗೆ ಬಂದ ಬಾಲಕರೆಲ್ಲ 'ಅಯ್ಯನವರ ಶಿಷ್ಯರೇ'. ಅಲ್ಲಿ ಕನ್ನಡ, ಮರಾಠಿ, ಗಣಿತ, ಈ ವಿಷಯಗಳನ್ನು ಕಲಿಸಲಾಗುತ್ತಿತ್ತು." ಹಂದ್ರಾಳ ಮ.ಗು. : ಕನ್ನಡದದೀಪ, ಪುಟ.೨೩.

ಪತ್ರಿಕೆಯ ಶಿಲ್ಪ ಹಾಗೂ ವಿನ್ಯಾಸದ ಬಗ್ಗೆ ಚೆನ್ನಬಸಪ್ಪನವರಿಗೆ ಸ್ಪಷ್ಟವಾದ ಕಲ್ಪನೆ ಇದ್ದೇ ಇತ್ತು. ಡೆಪ್ಯೂಟಿ ಆಗುವವರೆಗೆ ಅಂದರೆ ಒಂಬತ್ತು ತಿಂಗಳಿನ (೧೮೬೫-೬೬) ಅಲ್ಪಕಾಲಾವಧಿಯಲ್ಲಿ ಪತ್ರಿಕೆಯ ಪ್ರಧಾನ ಸಂಪಾದಕರಾಗಿ ಅದಕ್ಕೊಂದು ವ್ಯವಸ್ಥಿತ ರೂಪುಕೊಡುವಲ್ಲಿ ಅವರ ಪಾತ್ರ ಅತ್ಯಂತ ಹಿರಿದಾದದ್ದು. ಕನ್ನಡ ಸಂಸ್ಕೃತಿಯೇ ಬಗ್ಗಡಗೊಂಡಿದ್ದ ಸನ್ನಿವೇಶದಲ್ಲಿ ಒಂದು ಸಣ್ಣ ಕನ್ನಡ ಶೈಕ್ಷಣಿಕ ಮಾಸಿಕದ ಮೂಲಕ ಮತ್ತೆ ಆ 'ಸಂಸ್ಕೃತಿ'ಯನ್ನು ನೆಲೆಗೊಳಿಸುವುದು ಎಷ್ಟೊಂದು ಕಷ್ಟದ್ದೆಂಬುದು ಅದನ್ನು ಅನುಭವಿಸಿದವರಿಗೇ ಗೊತ್ತು. ಈ ಕಷ್ಟವನ್ನು ದೂರಮಾಡಿಕೊಳ್ಳುತ್ತಲೇ ಪತ್ರಿಕೆ ಬೆಳೆಯುವಂತೆ ನೋಡಿಕೊಳ್ಳುವುದು ಮತ್ತು ಆ ನಿಟ್ಟಿನಲ್ಲಿ ಅದಕ್ಕೊಂದು ಸುಭದ್ರವಾದ ನೆಲೆಗಟ್ಟನ್ನು ರೂಪಿಸುವುದು - ಈ ಎರಡೂ ಜವಾಬ್ದಾರಿಗಳನ್ನು ಏಕಕಾಲಕ್ಕೆ ನಿತ್ತರಿಸಿದ ಅವರು ಅದಕ್ಕೊಂದು ಅಚ್ಚುಕಟ್ಟುತನವನ್ನು ತಂದುಕೊಟ್ಟರು. ಇವರೊಂದಿಗೆ ಸಹಸಂಪಾದಕರಾಗಿ ಗಂಗಾಧರ ಮಡಿವಾಳೇಶ್ವರ ತೂರಮರಿ ಮತ್ತು ಸಂಚಾಲಕರಾಗಿ ಮೊದಲು ಈ.ಎಚ್.ಲಿಟಲ್, ಅನಂತರ ರಸೆಲ್‌ರು ಪತ್ರಿಕೆಯ ಗುಣಾತ್ಮಕತೆಯನ್ನು ಇನ್ನಷ್ಟು ಹೆಚ್ಚಿಸಲು ಕಾರಣೀಭೂತರಾದರು.

ಡೆಪ್ಯೂಟಿಯವರ ಸಂಪಾದಕತ್ವದಲ್ಲಿ ಪ್ರಕಟಗೊಳ್ಳುತ್ತಿದ್ದ 'ಮಠಪತ್ರಿಕೆ'ಯ ೯ ಸಂಚಿಕೆಗಳ ವಿಷಯ ಸಾಮಗ್ರಿ ಒಟ್ಟು ೨೧೬ ಪುಟಗಳಲ್ಲಿ ಅವಕಾಶ ಪಡೆದಿವೆ. ಇಲ್ಲಿ ಶೈಕ್ಷಣಿಕ, ಜೀವಶಾಸ್ತ್ರೀಯ, ಖಗೋಲಶಾಸ್ತ್ರೀಯ, ಮನೋರಂಜಕ, ಸ್ವಭಾಷಾಸುಧಾರಣೆ, ಪತ್ರವ್ಯವಹಾರ, ನೋಟೀಸು, ಸರ್ಕ್ಯುಲರ್, ಜಾಹಿರಾತು, ಪರೀಕ್ಷಾಸಂಬಂಧಿ ವಿಷಯ, ನೀತಿಬೋಧೆ, ಕೃತಿಪರಿಚಯ - ಹೀಗೆ ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದ ಸಾಮಗ್ರಿಯನ್ನು ಅಡಕಗೊಳಿಸಿದ್ದಾರೆ. ವಿದ್ಯಾರ್ಥಿಗಳ, ಶಿಕ್ಷಕರ ಶೈಕ್ಷಣಿಕ ವೃತ್ತಿಪರ ತಿಳುವಳಿಕೆ ವರ್ಧಿಸುವಂತೆ ನೋಡಿಕೊಂಡುದು ಇಲ್ಲಿ ಸ್ಪಷ್ಟವಾಗಿದೆ. ಇದಲ್ಲದೆ ಎಜ್ಯುಕೇಶನಲ್ ಇನ್‌ಸ್ಪೆಕ್ಟರರು ಇಸ್ತಿಯಾರನಾಮೆ (Notification)ಗಳನ್ನು ಪ್ರಕಟಿಸುವ ಉಪಕ್ರಮದ ಆಳವಡಿಕೆ, ಅಧಿಕಾರಿಗಳ, ಸರಕಾರದ ಧ್ಯೇಯ-ಧೋರಣೆಗಳನ್ನು ಶಿಕ್ಷಣಲೋಕಕ್ಕೆ ಮುಟ್ಟಿಸುವ ಉದ್ದೇಶವನ್ನೊಳಗೊಂಡಿದೆ. ಮೊದಲ ಸಂಚಿಕೆ (ಎಪ್ರೀಲ್ ೧೮೬೫)ಯಲ್ಲೇ 'ಇಸ್ತಿಯಾರನಾಮೆ' (Notification) ಎಂಬ ಲೇಖನವು ಪ್ರಕಟಗೊಂಡಿದೆ. ಇದರಲ್ಲಿ ಕಂಡುಬರುವ ಕೆಲವು ಮಹತ್ವದ ಅಂಶಗಳಿಂದ ಅಂದಿನ ಇಡೀ ಶಿಕ್ಷಣಕ್ಷೇತ್ರದ ರೂಪರೇಷೆ ಹೇಗಿತ್ತೆಂದು ತಿಳಿದು ಬರುತ್ತದೆ. ಆಗ ವಿದ್ಯಾಪ್ರಸಾರದ ದೃಷ್ಟಿಯಿಂದಲೇ ಪ್ರತಿವರ್ಷ ಮುಂಬಯಿಪ್ರಾಂತಕ್ಕೆ ೯೦,೦೦೦ ರೂಪಾಯಿಗಳನ್ನು ಕೊಡಬೇಕೆಂದು ಹಿಂದುಸ್ಥಾನ ಸರಕಾರ ಆಜ್ಞೆ ಹೊರಡಿಸಿರುತ್ತದೆ. ಆ ಹಣದಲ್ಲಿ ೧೮,೮೦೦ ರೂಪಾಯಿಗಳನ್ನು ಕರ್ನಾಟಕ ಪ್ರಾಂತದಲ್ಲಿ ಹೊಸಮಠ(ಶಾಲೆ)ಗಳನ್ನು ತೆರೆಯಲು ಮತ್ತು ಈಗಾಗಲೇ ಮಠ(ಶಾಲೆ)ಗಳಲ್ಲಿ ಶಿಕ್ಷಕರಾಗಿ ಕೆಲಸಮಾಡುವವರ ಸಂಬಳ ಹೆಚ್ಚಿಸಲು ವಿನಿಯೋಗಿಸುವ ಅಧಿಕಾರಿಯನ್ನು ಎಜ್ಯುಕೇಶನಲ್ ಇನ್‌ಸ್ಪೆಕ್ಟರರಿಗೆ ಕೊಡುತ್ತಿದ್ದ ಸಂಗತಿ ಗಮನಕ್ಕೆ ಬರುತ್ತದೆ.

ಮುಂದುವರಿದ ಈ 'ಇಸ್ತಿಯಾರನಾಮೆ'ಯಲ್ಲಿ ವ್ಯಕ್ತವಾಗಿರುವ ವಿಷಯವೆಂದರೆ, ಸಣ್ಣ-ದೊಡ್ಡ ಶಾಲೆಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯಾಬಲವನ್ನು ಅನುಲಕ್ಷಿಸಿ ಶಿಕ್ಷಕರಿಗೆ ಸಂಬಳವನ್ನು ಹೆಚ್ಚು-ಕಡಿಮೆ ನೀಡಲಾಗುತ್ತಿತ್ತು. ಅಷ್ಟೇ ಅಲ್ಲ, ಇಂಗ್ಲೀಷ ಹಾಗೂ ದೇಶಭಾಷೆ ಎರಡನ್ನೂ ಕಲಿಸುವ ಅವಕಾಶವುಳ್ಳ ಶಾಲಾ ಶಿಕ್ಷಕರಿಗಿಂತ ಕೇವಲ ದೇಶಭಾಷೆಯನ್ನು ಕಲಿಸುವ ಅವಕಾಶವುಳ್ಳ ಶಾಲಾಶಿಕ್ಷಕರಿಗೆ ಕಡಿಮೆ ಸಂಬಳ ಸಿಗುತ್ತಿತ್ತು. ಇನ್ನೂ ಗಮನಾರ್ಹ ಸಂಗತಿಯೆಂದರೆ, ತನ್ನ ಶಾಲೆ ವಿದ್ಯಾರ್ಥಿಗಳ ಸಂಖ್ಯೆಯನ್ನು ಹೆಚ್ಚಿಸುವ ಶಿಕ್ಷಕನಿಗೆ ಸಂಬಳವನ್ನು

ಹೆಚ್ಚಿಸುವ ಅವಕಾಶವೂ ಇತ್ತು. ಹೀಗೆ 'ಸಂಖ್ಯಾಬಲ'ವನ್ನು ಹೆಚ್ಚಿಸಲು ಕಾರಣೀಭೂತರಾದ ಶಿಕ್ಷಕರಿಗೆ ಇಂಗ್ಲೀಷ ಬಾರದಿದ್ದರೂ ಅವರನ್ನು 'ಆಂಗ್ಲೋ ವರ್ನ್ಯಾಕ್ಯುಲರ್' ಶಾಲೆಗಳ ಶಿಕ್ಷಕರನ್ನಾಗಿ ಮಾಡಿ ಪ್ರೋತ್ಸಾಹಿಸುವ ಪದ್ಧತಿ ಇತ್ತು. ಇದಲ್ಲದೆ ಶಿಕ್ಷಕನಿಂದ ಬುದ್ಧಿಮತ್ತೆಯನ್ನು ಮಾತ್ರ ಅಪೇಕ್ಷಿಸದೆ ಅವನಲ್ಲಿ ವೃತ್ತಿಗೌರವ, ಕಾರ್ಯಕ್ಷಮತೆ, ತಾಳ್ಮೆ, ಸುಸ್ವಭಾವ, ವಿದ್ಯಾರ್ಥಿಗಳನ್ನು ಆಕರ್ಷಿಸುವ ಚುರುಕುಬುದ್ಧಿ, ಸದಾಚಾರ ಇವೆಲ್ಲ ಗುಣಗಳು ಇರಬೇಕೆಂದು ಬಯಸಲಾಗುತ್ತಿತ್ತು. ಇಂಥ ಗುಣಗಳನ್ನು ಹೊಂದಿರದವರು 'ದೊಡ್ಡಮಠ'ದ ಶಿಕ್ಷಕರಾಗಲು ಅನರ್ಹರೆಂದು ಪರಿಗಣಿಸಲಾಗುತ್ತಿತ್ತು.

ಈ ವಿಚಾರಗಳನ್ನು ತಿಳಿಯಪಡಿಸುವ ಈ ಇಸ್ತಿಯಾರನಾಮೆಯಲ್ಲಿ ಬೆಳಗಾವಿ, ಬಿಜಾಪೂರ, ಧಾರವಾಡ, ಕಾರವಾರ - ಜಿಲ್ಲೆಗಳ ದೊಡ್ಡ ದೊಡ್ಡ ಊರುಗಳಲ್ಲಿ ಇಪ್ಪತ್ತೆರಡು ಆಂಗ್ಲೋ ವರ್ನ್ಯಾಕ್ಯುಲರ್ ಮಠಗಳು (ಶಾಲೆಗಳು) ಸ್ಥಾಪಿಸಲ್ಪಡುವವೆಂದೂ, ಅಲ್ಲದೆ ಈ ಭಾಗಗಳ ಮೂವತ್ತು, ಮೂವತ್ತೆರಡು ತಾಲೂಕುಗಳಲ್ಲಿ ದೇಶಭಾಷೆಯ(ವರ್ನ್ಯಾಕ್ಯುಲರ್) ದೊಡ್ಡಮಠಗಳನ್ನು (ದೊಡ್ಡಶಾಲೆಗಳನ್ನು) ತೆರೆಯುವ ಏರ್ಪಾಡು ನಡೆದಿರುವಂತೆಯೂ ಸೂಚಿಸಲಾಗಿದೆ. ಜೊತೆಗೆ, ಶಿಕ್ಷಕರಾಗುವವರು ಬೇರೆ ಇಲಾಖೆಗಳಲ್ಲಿ ಕೆಲಸ ಮಾಡುವವರಿಗಿಂತ ಕಡಿಮೆ ಸಂಬಳವನ್ನು ಪಡೆಯುವರಾದರೂ ಇತರ ನೌಕರದಾರರಂತೆ ಮೇಲಿಂದ ಮೇಲೆ ವರ್ಗವಾಗುತ್ತ ವ್ಯರ್ಥ ಆಯಾಸ ಪಡುವ ಸಂದರ್ಭವಿರುವುದಿಲ್ಲ ಎಂಬ ತಿಳುವಳಿಕೆ ನೀಡಲಾಗಿದೆ. ಅಂದರೆ ಶಿಕ್ಷಕನಾದವನು ಇತರರಿಗಿಂತ ನೆಮ್ಮದಿಯ ಜೀವನವನ್ನು ನಡೆಸಬಹುದೆಂದು ಹೇಳಿ, ಆ ಬಗ್ಗೆ ವಿಶೇಷ ಒಲವು ಮೂಡುವಂತ ನೋಡಿಕೊಳ್ಳಲಾಗಿದೆ. ಹೀಗೆ ಇಡೀ ಈ 'ಇಸ್ತಿಯಾರನಾಮಾ' ತುಂಬ ಅಂದಿನ ಶಿಕ್ಷಣಕ್ಷೇತ್ರದ ಪ್ರಗತಿ, ಪ್ರಸಾರಗಳ ಬಗೆಗಿನ ಅದಮ್ಯ ಕಳಕಳಿಯ ಒಳನೋಟವೇ ವಿಸ್ತೃತಗೊಂಡಿವೆ. ಇದನ್ನು ಗಮನಿಸುತ್ತಿದ್ದಂತೆ ಪೇಶ್ವೆಯರ ದಾಳಿಯಿಂದ ನಿಶ್ಚೇಷ್ಟಿತಗೊಂಡಿದ್ದ ಕರ್ನಾಟಕ ಪ್ರಾಂತದ ಶಿಕ್ಷಣಕ್ಷೇತ್ರ ಆಂಗ್ಲರ ಆಡಳಿತದಲ್ಲಿ ಕಣ್ಣು ತೆರೆಯುತ್ತಿದ್ದ ಚಿತ್ರ ಎದುರಿಗೆ ನಿಲ್ಲುತ್ತದೆ.

ಈ ಮೊದಲನೆಯ ಸಂಚಿಕೆಯಲ್ಲಿಯೇ ಮನುಷ್ಯ ಶರೀರದ ವರ್ಣನೆ (Discription of the human body), ದೃಷ್ಟೀಂದ್ರಿಯ (Organ of sight), ವಿದ್ಯಾಇಲಾಖೆಯಲ್ಲಿ ಘನವಿಷಯಗಳನ್ನು ಕುರಿತು ವಿವಾದಿಸುವ ಪ್ರಮಾಣಗಳು(of Academic Scholastic Disputation) - ಇಂಥ ಕೆಲವು ವಿಚಾರಗಳನ್ನು ತಿಳಿಯಾದ ಭಾಷೆಯಲ್ಲಿ ಹೇಳಿಕೊಂಡು ಹೋಗಲಾಗಿದೆ. ಇದೇ ರೀತಿ ಸಂಚಿಕೆ-೨ರಲ್ಲಿ ಕಲಿಸುವ ವಿಧಾನಗಳು (Method of teaching), ತಾರಕಮಂಡಲ(Popular Astronomy) ಎಂಬ ತಲೆಕಟ್ಟಿನಡಿಯಲ್ಲಿ ಶುಕ್ರಗ್ರಹ (Venus)ದ ಬಗ್ಗೆ ಲೇಖನಗಳಿವೆ. ಮನೋರಂಜಕವಾದ ಕೆಲವು ಕತೆಗಳೂ (Amusing stories) ಇಲ್ಲಿವೆ.

ಮೂರನೆಯ ಸಂಚಿಕೆ ಪ್ರಕಟವಾಗುವ ಹೊತ್ತಿಗೆ ಮಧ್ಯಭಾಗದ ಎಜ್ಯುಕೇಶನಲ್ ಇನ್‌ಸ್ಪೆಕ್ಟರರೆಂದು ಆಗಲೇ ಕೆಲಸಮಾಡುತ್ತಿದ್ದ ರಸೆಲ್‌ರು ದಕ್ಷಿಣಭಾಗದ ಶಿಕ್ಷಣಾಧಿಕಾರಿಯೆಂದು ವರ್ಗಾವಣೆ ಹೊಂದಿದ್ದರೆಂದು ತೋರುತ್ತದೆ. ಯಾಕೆಂದರೆ ಲಿಟಲ್‌ರ 'ಇಸ್ತಿಯಾರನಾಮೆ'ಯಂತೆ ರಸೆಲ್ಲರ 'ಇಸ್ತಿಯಾರನಾಮೆ'ಯನ್ನು ಚೆನ್ನಬಸಪ್ಪನವರು ಅಳವಡಿಸಿದ್ದಾರೆ. ಇದರಲ್ಲಿ ಕಿತ್ತೂರಿನ ಗ್ರಾಮಸ್ಥರು ತಮ್ಮೂರಿನ ಶಾಲೆಯ ಆರ್ಥಿಕ ಮುಗ್ಗಟ್ಟನ್ನು ಸರಿದೂಗಿಸಲು ಬದಲೀ ವ್ಯವಸ್ಥೆ ಮಾಡಬೇಕೆಂಬ ಬೇಡಿಕೆ ಮುಂದಿಟ್ಟು ಜನಾರ್ಧನ ಕೃಷ್ಣ ಪಂತೋಜಿಯ ಮೂಲಕ ಬರೆಸಿದ ಸುದೀರ್ಘವಾದ ಪತ್ರ ಪ್ರಕಟವಾಗಿದ್ದು, ಶೈಕ್ಷಣಿಕ ತೊಂದರೆಗಳನ್ನು ಮಂಡಿಸಲು ಈ

ಪತ್ರಿಕೆಯಲ್ಲಿ ಅವಕಾಶ ಮಾಡಿಕೊಟ್ಟುದಕ್ಕೆ ನಿದರ್ಶನವೆನಿಸಿದೆ. ಅದರ ಮುಖ್ಯ ಆಶಯ ಇದು: "...... ಈ ಕಿತ್ತೂರ ಗ್ರಾಮಸ್ಥರು, ತಮ್ಮಲ್ಲಿ ನಿರಂತರ ಸುರಕ್ಷಿತವಾಗಿ ಸಾಲಿಯು ನಡಿಯಬೇಕೆಂಬುವ ಇಚ್ಛೆಯಿಂದಾ ಸರಕಾರದ ಠರಾವಿನ ಪ್ರಕಾರ ಭೂಮಿತರಯಿನಮ್ಯಾಲೆ ಆಕಾರ ದರ ರೂಪಾಯಕ್ಕೆ 'ಅರ್ಧ ಆಣೆ'ಯಂತೆ ಸಾಲಿದೆಶಿಯಿಂದಾ ಕೊಡುವುದಕ್ಕೆ ಕೆಲವು ಸಂಭಾವಿತ ಪರೋಪಕಾರಿ ಜನರು ವಡಂಬಟ್ಟು ಸರಕಾರಕ್ಕೆ ಅರ್ಜಿ ತಯಾರಮಾಡಿ ಅದರ ಮ್ಯಾಲೆ ತಮ್ಮ ಸಹಿಗಳು ಮಾಡಿ ಮತ್ತು ವುಳಿದ ಕೆಲವು ಜನರುಗಳಿಗೆ ಚನ್ನಾಗಿ ಸಮಜಕೊಟ್ಟು ಸಹಿ ತಗೋ ತಜವಿಜು ನಡೆಶಿದ್ದಾರೆ ಯಾವತ್ತು ಜನರ ಸಹಿಗಳು ಪೂರಾ ಅದರ ಮ್ಯಾಲೆ ರಾವಸಾಹೇಬ ಮಹಾಲಕರಿ ಇವರ ವಿದ್ಯಾಮಾನದಿಂದಾ ಅರ್ಜಿ ರವಾನೆ ಮಾಡುವರು ಇಧಾರೆ"[೭] ಈ ಪ್ರಕಾರ ಬೇರೆ ಬೇರೆ ಊರಿನ ಗ್ರಾಮಸ್ಥರೂ ತಮ್ಮ ಊರುಗಳ ಶಿಕ್ಷಣಕ್ಕೆ ಸಂಬಂಧಿಸಿದ ಸಾಧಕ-ಬಾಧಕಗಳನ್ನು 'ಮಠಪತ್ರಿಕೆ'ಯ ಮೂಲಕವೇ ಬಗೆಹರಿಸಿಕೊಳ್ಳಲು ಡೆಪ್ಯೂಟಿಯವರು ಅವಕಾಶ ಮಾಡಿಕೊಟ್ಟುದು ಅವರ ಮುಕ್ತ ಮನಸ್ಸಿನ ದ್ಯೋತಕವೆನಿಸಿದೆ. ಇದಕ್ಕಿಂತ ಭಿನ್ನವಾದ ಶೈಕ್ಷಣಿಕ ಸುದ್ದಿಗಳಿಗೂ ಈ ಪತ್ರಿಕೆ ವೇದಿಕೆಯಾಗಿದ್ದುದಕ್ಕೆ ೪ನೆಯ ಸಂಚಿಕೆಯಲ್ಲಿ ಬಹಳ ಸ್ವಾರಸ್ಯಕರವಾದ ಸುದ್ದಿಯೊಂದು ಪ್ರಕಟವಾಗಿದೆ. ಅದನ್ನು ಯಥಾಸ್ಥಿತಿಯಲ್ಲಿಯೇ ನೋಡುವುದು ಸೂಕ್ತವೆನಿಸುತ್ತದೆ. ಅದರ ಮುಖ್ಯಪಾಠ ಹೀಗಿದೆ : "....... ಈ ಅಥಣಿಗ್ರಾಮಕ್ಕೆ ಮಹಾಸಂಸ್ಥಾನದ ಅಧಿಕಾರಿಗಳಾದ ಚಿತ್ರದುರ್ಗದ ಸ್ವಾಮಿಗಳವರು ಬಂದು (೧೦) ದಿವಸವಾಯಿತು. ಇವರು ನಿನ್ನೆ ಅಂದರೆ, ೨೯ ಜುಲೈ ದಿವಸ ಇಲ್ಲಿಯ ಸರಕಾರಿಯಮಠದ ವಿದ್ಯಾರ್ಥಿಗಳ ಪರೀಕ್ಷೆ ತ್ತಗೆದುಕೊಂಡು ಬಹಳ ಸಂತೋಷಭರಿತರಾಗಿ ಸನ್ಮಾನದ ದೆಸೆಯಿಂದ ಹೆಡ್‌ಮಾಸ್ತರರಾದ ವೆಂಕಟರಾವ ರಾಘವೇಂದ್ರ ಇವರಿಗೆ (೧೨) ರೂಪಾಯಿ ಕಿಮ್ಮತ್ತಿನ ಧೋತ್ರಜೋಡು ಹಾಗೂ ಶಿಕ್ಷಕ, ವಿದ್ಯಾರ್ಥಿ ಮುಂತಾದವರಿಗೆ ರೋಖ (೬) ರೂಪಾಯಿ - ಈ ಪ್ರಕಾರ ಇನಾಮಾಗಿ ಕೊಟ್ಟರು. ಈ ಸ್ವಾಮಿಗಳು ಸರ್ವಗುಣ ಸಂಪನ್ನರಾಗಿದ್ದು, ವಿದ್ವಜ್ಜನರ ಮೇಲೆ ಬಹಳ ಪ್ರೀತಿವುಳ್ಳವರಾಗಿದ್ದಾರೆ...."[೮] (ವೆಂಕಟೇಶ ರಾಘವೇಂದ್ರ ಪಂತೋಜಿ-ಅಥಣಿ-ಎಂಬವರ ಸಹಿ ಇದೆ).

ಈ ಸಂಗತಿಯನ್ನು ಓದಿದಾಗ ಒಂದು ಸರಕಾರಿ ಶಾಲೆಗೆ ಒಬ್ಬ ಮಠದ ಸ್ವಾಮಿಗಳು ಬಂದು ವಿದ್ಯಾರ್ಥಿಗಳ ಗುಣಮಟ್ಟವನ್ನು ಪರೀಕ್ಷಿಸಲು ಪರೀಕ್ಷೆ ತೆಗೆದುಕೊಂಡದ್ದು, ಆ ಪ್ರಯುಕ್ತ ಆ ಶಾಲೆಯ ಮುಖ್ಯಾಧ್ಯಾಪಕರಿಗೆ ಧೋತರಜೋಡಿ (೧೨ ರೂಪಾಯಿ ಕಿಮ್ಮತ್ತು) ಕೊಟ್ಟು ಸನ್ಮಾನಿಸಿದ್ದು, ಒಂದು ರೀತಿಯ ಕೌತುಕಮಯ ಪ್ರಪಂಚವೆನಿಸುತ್ತದೆ.

ಹೀಗೆ ವೈವಿಧ್ಯಪೂರ್ಣ ವಿಷಯಗಳಿಗೆ ಮುಕ್ತ ಅವಕಾಶ ನೀಡುತ್ತಲಿದ್ದ ಡೆಪ್ಯೂಟಿಯವರು ಮೇಲಧಿಕಾರಿಗಳ ಧೋರಣೆಗಳನ್ನು ಆಗಾಗ ಪ್ರಕಟಿಸುತ್ತ ಹೋದುದಕ್ಕೆ ಎಜ್ಯುಕೇಶನಲ್ ಇನ್‌ಸ್ಪೆಕ್ಟರ ರಸೆಲ್ಲರ ಹೆಸರಿನಲ್ಲಿ ಪ್ರಕಟವಾದ ಒಂದು ಸರ್ಕ್ಯುಲರ್ ನೋಡಬಹುದು. "..... ದಕ್ಷಿಣಭಾಗದಲ್ಲಿ ಸರಕಾರಿ ಸಾಲಿಗಳ ಪಂತರುಗಳಿಗೆ ಎಜ್ಯುಕೇಶನಲ್ ಇನ್‌ಸ್ಪೆಕ್ಟರ ಸಾಹೇಬ ಬಹದ್ದೂರ ಕಡಿಯಿಂದ ತಿಳಿಯಪಡಿಸುವುದೇನೆಂದರೆ, ಯಾವತ್ತೂ ಪಂತರುಗಳಿಗೆ ಕನ್ನಡಭಾಷೆಯ ಜ್ಞಾನವು ಒಳಿತಾಗಿ ಇರುವುದೊಂದು ಅಗತ್ಯ ಕಾರ್ಯವಾಗಿದೆ. ಆದರೆ ಅದನ್ನು ಪಡಕೊಳ್ಳುವಲ್ಲಿ ಕೆಲವು ಪಂತರುಗಳ ಪರಿಶ್ರಮೆಯು ಬಹಳ ಕಡಿಮೆ ಇದ್ದಹಾಗೆ ತೋರಿ ಬಂದದ್ದರಿಂದ ಮಳೆಗಾಲದ ಬಳಿಕ ಅಂದರೆ ಕೆಲತಿಂಗಳ ಹಿಂಜಾರಿ ನಾವು ಇಲ್ಲವೆ ಡೆಪ್ಯೂಟಿ

೭. ಮಠಪತ್ರಿಕೆ - ಪುಸ್ತಕ ೧. ಸಂಚಿಕೆ-೩ : ೧೮೭೫ : ಪುಟ.೭೦.
೮. ಮಠಪತ್ರಿಕೆ - ಪುಸ್ತಕ ೧. ಸಂಚಿಕೆ-೪ : ೧೮೭೫ : ಪುಟ.೯೪.

ಎಜ್ಯುಕೇಶನಲ್ ಇನ್‌ಸ್ಪೆಕ್ಟರವರು ಸಾಲಿಗಳನ್ನು ನೋಡುವುದಕ್ಕಾಗಿ ತಾಲೂಕುಗಳಿಗೆ ಬಂದಮೇಲೆ ಯಾವತ್ತೂ ಪಂತರುಗಳನ್ನು ಹಾಗೂ ಮದತಸೀರರನ್ನು ಅಲ್ಲಲ್ಲಿ ಕರತಂದು ಕೆಳಗೆ ವಿವರಿಸಿದ್ದಂತೆ ಪರೀಕ್ಷೆ ತೆಗೆದುಕೊಳ್ಳಲ್ಪಡುವುದು.

೧. ಕೊಟ್ಟ ಕನ್ನಡ ಪುಸ್ತಕವನ್ನು ಸ್ಪಷ್ಟವಾಗಿಯೂ, ಶುದ್ಧವಾಗಿಯೂ ಓದಿ ತೋರಿಸುವುದಲ್ಲದೆ ಓದಿದ್ದರ ಭಾವವನ್ನು ಕ್ಲುಪ್ತವಾಗಿ ಹೇಳುವುದು.

೨. ಕೊಟ್ಟ ಗ್ರಂಥದಲ್ಲಿ ಪದ ವಿಭಾಗಮಾಡಿ ಅನ್ವಯಿಸುವುದು.

೩. ಓದಿ ಹೇಳಿದ್ದನ್ನು ಶುದ್ಧವಾಗಿ ಬರೆಯುವುದು.

ಈ ಪ್ರಕಾರ ಎಲ್ಲರೂ ಪರೀಕ್ಷಾ ಕೊಡುವುದಕ್ಕಾಗಿ ಸಿದ್ಧರಾಗಿ ಇರಬೇಕು. ಈ ಹುಕುಮಿನ ಮೇಲೆ ಲಕ್ಷ ಇಡದೆ ಇರುವವರಿಗೆ ಹಾನಿ ದೊರಕುವುದು. ತಾರೀಖು ೧ನೇ ಅಗೋಷ್ಟ ಸನ್ ೧೮೭೫ ಇಸವಿ"[೯] - ಹೀಗೆ ಡೆಪ್ಯೂಟಿಯವರ ಸಂಪಾದಕತ್ವದಲ್ಲಿ ಮಠಪತ್ರಿಕೆಯು ಶಿಕ್ಷಣ ಇಲಾಖೆ, ಶಿಕ್ಷಕ, ವಿದ್ಯಾರ್ಥಿ, ಆಡಳಿತ, ಗ್ರಾಮೀಣ ಕುಂದುಕೊರತೆ, ಬೋಧನಾತ್ಮಕ ವೈವಿಧ್ಯಪೂರ್ಣ ವಿಷಯ, ಭಾಷೆ ಮೊದಲಾದ ಅಂಶಗಳನ್ನು ಗರ್ಭೀಕರಿಸಿಕೊಂಡು ಕನ್ನಡ ಶಿಕ್ಷಣಗಳ ಪ್ರಗತಿಗಾಗಿ ದುಡಿಯುವ ಒಂದು ಪ್ರಸಾರ ಮಾಧ್ಯಮವೆನಿಸಿದ್ದಿತು.

೧೮೭೭ರಲ್ಲಿ ಚೆನ್ನಬಸಪ್ಪನವರು ಪ್ರಿನ್ಸಿಪಾಲ ಹುದ್ದೆಯಿಂದ ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರ ಹುದ್ದೆಗೆ ಬಡ್ತಿ ಹೊಂದಿದರು. ಮಠಪತ್ರಿಕೆಯನ್ನು ತಮ್ಮ 'ಶಿಕ್ಷಣನೀತಿ'ಯನ್ನು ಪ್ರತಿಪಾದಿಸುವ ವೇದಿಕೆಯಾಗಿಸಿಕೊಂಡರು. ಬೆಳಗಾವ ಜಿಲ್ಲೆ, ಆಮೇಲೆ ಧಾರವವಾಡ ಜಿಲ್ಲೆಗಳಲ್ಲಿ - ಹೀಗೆ ೧೫ ವರ್ಷ ಅಧಿಕಾರಿಗಳಾಗಿ ಈ ಪತ್ರಿಕೆಯ ಮೂಲಕ ಪ್ರಕಟಿಸಿದ ಸರ್ಕ್ಯುಲರ್‌ಗಳಿಂದ ಆ ಕಾಲಖಂಡದ ಶಿಕ್ಷಣಸ್ಥಿತಿಯನ್ನು, ಅದರ ಏಳ್ಗೆಗಾಗಿ ಚೆನ್ನಬಸಪ್ಪನವರು ಕೈಕೊಂಡ ನಿರ್ಣಯಗಳನ್ನು ಅರಿಯಬಹುದಾಗಿದೆ.

ಚೆನ್ನಬಸಪ್ಪನವರು ವೃತ್ತಿಯಲ್ಲಿದ್ದಾಗಲೇ ೧೮೮೧ರಲ್ಲಿ ನಿಧನರಾದರೂ ಅವರು ಪ್ರಿನ್ಸಿಪಾಲರಾಗಿ, ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರರಾಗಿ ರೂಪಿಸಿದ್ದ ಮಠಪತ್ರಿಕೆಗೆ ಒಂದು ಸುಸ್ಥಿರ ನೆಲೆಗಟ್ಟು, ಸುಸಂಬದ್ಧ ವಿನ್ಯಾಸ, ಸಮೃದ್ಧ ವಿಷಯ ಸಂಪತ್ತು ಪ್ರಾಪ್ತವಾಗಿದ್ದವು. ಮುಂದಿನಕಾಲದಲ್ಲಿ ಈ ಪತ್ರಿಕೆ ಹೆಸರುಗಳನ್ನು ಬದಲಿಸಿಕೊಳ್ಳುತ್ತ, ಹೊಸ ಹೊಸ ಶಿಕ್ಷಣ ಸಂಹಿತೆಗಳನ್ನು ಅಳವಡಿಸಿಕೊಳ್ಳುತ್ತ ಬೆಳೆದರೂ ಅದರ ಅಂತರಂಗದಲ್ಲಿ ಚೆನ್ನಬಸಪ್ಪನವರ ಮನಸ್ಸು ಉದ್ದಕ್ಕೂ ಹರಿದುಬಂದುದನ್ನು ಗುರುತಿಸಬಹುದು. ಶೈಕ್ಷಣಿಕ ಕಳಕಳಿಯನ್ನು ಕಾಣಬಹುದು. ಹೀಗೆ ಚೆನ್ನಬಸಪ್ಪನವರ ಅಂತಃಕರಣದಲ್ಲಿ ಅಂಕುರಿಸಿದ ಮಠಪತ್ರಿಕೆ ೧೨೫ ಸಂವತ್ಸರಗಳನ್ನು ದಾಟಿಬಂದುದು ಕರ್ನಾಟಕದ ಪತ್ರಿಕಾ ಪ್ರಪಂಚದಲ್ಲಿಯೇ ಏಕೈಕ ಉದಾಹರಣೆಯಾಗಿದೆ. ಹೀಗೆ ಪತ್ರಿಕೆ ದೃಢಬಲ ಬೆಳೆದುದಕ್ಕೆ, ಮುಂದೆಯೂ ಬೆಳೆಯುತ್ತಿರುವುದಕ್ಕೆ ಕಾರಣ ಇದರ ಬೇರುಗಳು ಚೆನ್ನಬಸಪ್ಪನವರ ಶುದ್ಧಸಂಕಲ್ಪದಲ್ಲಿ ನೆಲೆಯೂರಿದುದೇ ಆಗಿದೆ.



---

೯. ಮಠಪತ್ರಿಕೆ - ಪುಸ್ತಕ ೧. ಸಂಚಿಕೆ-೫ : ೧೮೭೫ : ಪುಟ.೧೩.

## ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರ

ರಾಜಕೀಯ ದಮನಕಾರಿ ನೀತಿಯಿಂದಾಗಿ ತನ್ನದಲ್ಲದ ಭಾಷೆ, ಸಂಸ್ಕೃತಿಗಳನ್ನು ಅನಿವಾರ್ಯವಾಗಿ ಮೈಗೂಡಿಸಿಕೊಂಡು ಬಳಲುತ್ತ ದಕ್ಷಿಣ ಮಹಾರಾಷ್ಟ್ರ ಇಲ್ಲವೆ ಮುಂಬೈ ಕರ್ನಾಟಕ ಎಂದು ಕರೆಸಿಕೊಳ್ಳುತ್ತಿದ್ದ ಇಂದಿನ ಉತ್ತರಕರ್ನಾಟಕಕ್ಕೆ ಕಳೆದ ಶತಮಾನದಲ್ಲಿ ಎಂಥ ದಾರುಣಸ್ಥಿತಿ ನಿರ್ಮಾಣವಾಗಿತ್ತೆಂಬುದನ್ನು ಇಲ್ಲಿ ಮತ್ತೊಮ್ಮೆ ನಿರೂಪಿಸುವ ಅಗತ್ಯ ತೋರುವುದಿಲ್ಲ. ಯಾಕೆಂದರೆ ಮೊದಲ ಅಧ್ಯಾಯದಲ್ಲಿಯೇ ಈ ಬಗ್ಗೆ ಒಂದು ವಿಸ್ತೃತ ಚಿತ್ರವನ್ನು ಕೊಡಲಾಗಿದೆ. ಇಡೀ ಕನ್ನಡ ಜನಾಂಗದ ಬದುಕೇ ಬರ್ಬರಗೊಂಡು ಆತ್ಮಪ್ರಜ್ಞೆಯನ್ನು ಕಳೆದುಕೊಳ್ಳುವಂತಾಗಿತ್ತೆಂಬುದಕ್ಕೆ ಕಳೆದ ಶತಮಾನದ ಚರಿತ್ರೆಯಲ್ಲಿ ಯಥೇಚ್ಛವಾದ ಪುರಾವೆಗಳಿವೆ ಎಂಬುದನ್ನೂ ಅಲ್ಲಿಯೇ ನೋಡಲಾಗಿದೆ. ಅಂಥ ಒಂದು ನಿಸ್ಸಹಾಯಕ ಸ್ಥಿತಿಗೆ ತಮ್ಮ ಸಂಜೀವಿನಿ ಸ್ಪರ್ಶನೀಡಿ, ಆ ಜನಾಂಗದ ಬದುಕಿನಲ್ಲಿ ಹೊಸ ಜಾಗೃತಿಯ ಬೀಜಗಳನ್ನು ಬಿತ್ತಿ, ಮತ್ತೆ ತನ್ನ ಸಾಂಸ್ಕೃತಿಕ ಫಸಲು ಪಡೆಯಲು ನಿರಾಂತಕ ಕನ್ನಡ ವಾತಾವರಣ ಸೃಷ್ಟಿಸಿದವರು ಡೆಪ್ಯೂಟಿಯವರೇ ಎಂಬ ಚಾರಿತ್ರಿಕ ಸತ್ಯವನ್ನು ಈಗ ಯಾರೂ ನಿರಾಕರಿಸಲಾರರು.

ಕೆಲವರಿಗೆ, ಅದೇಕೆ ಬಹುತೇಕ ಜನಕ್ಕೆ ಹುದ್ದೆಗಳು ಬರೀ ಜೀವನೋಪಾಯದ ಸಾಧನಗಳಾಗಿ ಬಿಡುತ್ತವೆ. ಆದರೆ ಡೆಪ್ಯೂಟಿಯವರಂಥ ವಿರಳರಿಗೆ ಮಾತ್ರ ಒಂದು ಸಾಮಾಜಿಕ ಬದುಕನ್ನೇ ವಿಸ್ತರಿಸಲು, ಅದನ್ನು ಅರ್ಥಪೂರ್ಣಗೊಳಿಸಲು ಅವು ಸಹಾಯಕವಾಗುತ್ತವೆ. ಚೆನ್ನಬಸಪ್ಪನವರು ನಾರ್ಮಲ್ ಸ್ಕೂಲಿನಲ್ಲಿ ಆಮೇಲೆ ಟ್ರೇನಿಂಗ್ ಕಾಲೇಜಿನಲ್ಲಿ ಮುಖ್ಯಸ್ಥರಾಗಿ ಸೇವೆ ಸಲ್ಲಿಸಬೇಕಾಗಿ ಬಂದಾಗ ಆ ಕ್ಷೇತ್ರಕ್ಕೆ ಅಪೂರ್ವವಾದ ನ್ಯಾಯ ದೊರಕಿಸಿದರು. ಇದು ಅವರ ಜೀವನಕ್ಕೂ, ಇಡೀ ಕನ್ನಡನಾಡಿನ ಸಾಂಸ್ಕೃತಿಕ ಬದುಕಿಗೂ ಒಂದು ಚಾರಿತ್ರಿಕ ತಿರುವು ತರಲು ಹಿನ್ನೆಲೆಯಾಯಿತೆಂಬುದು, ಮುಂದೆ ಅವರು ಡೆಪ್ಯೂಟಿ ಹುದ್ದೆಯ ಮುಖಾಂತರ ಕೊಟ್ಟ ಕೊಡುಗೆಯ ಅಭ್ಯಾಸದಿಂದ ಸ್ಪಷ್ಟವಾಗುತ್ತದೆ.

ಚೆನ್ನಬಸಪ್ಪನವರ ಜೀವನವನ್ನು ಪರಿಚಯಿಸುವ ಸಂದರ್ಭದಲ್ಲಿ ಅವರ ಮನೆಯ ಅಡ್ಡ ಹೆಸರು (surname) ಧಾರವಾಡ ಎಂಬುದನ್ನು ಸೂಚಿಸಲಾಗಿದೆ. ಆದರೆ ಅವರನ್ನು 'ಧಾರವಾಡ' ಚೆನ್ನಬಸಪ್ಪನವರು ಎಂದು ಕರೆಯಲು ಯಾರ ಮನಸ್ಸೂ ಒಪ್ಪುವುದಿಲ್ಲ. ಹಾಗೆ ಕರೆಯಬೇಕೆಂದು ಪ್ರಯತ್ನಪಟ್ಟರೂ ಒಂದು ರೀತಿಯ ಆತಂಕ, ಕೃತ್ರಿಮತೆ ಕಾಡುತ್ತದೆ. ಪ್ರಾಯಶಃ ಧಾರವಾಡ ಚೆನ್ನಬಸಪ್ಪನವರು ಎಂದು ಹೇಳಿದರೆ ಯಾರಿಗೂ ಅರ್ಥವಾಗುವುದಿಲ್ಲ. ಡೆಪ್ಯೂಟಿ ಚೆನ್ನಬಸಪ್ಪನವರು ಎಂದು ಹೇಳುವುದೇ ತಡ ತಟ್ಟನೆ ಹೊಳೆಯುತ್ತದೆ. ಅವರ ಇಡೀ ವ್ಯಕ್ತಿತ್ವವೇ ರೂಪತಾಳಿ ಎದುರು ನಿಲ್ಲುತ್ತದೆ. ಕೆಲವರಿಗೆ ಹುದ್ದೆಯಿಂದ ಗೌರವ ಬಂದರೆ, ಇನ್ನು ಕೆಲವರಿಂದ ಆ ಹುದ್ದೆಗೇ ಗೌರವ ಸಂದಾಯವಾಗುತ್ತದೆ. ಚೆನ್ನಬಸಪ್ಪನವರಿಗೂ ಅವರ ಡೆಪ್ಯೂಟಿ ಹುದ್ದೆಗೂ ಎಷ್ಟೊಂದು ನಿಕಟವಾದ ಸಂಬಂಧವಿದೆ ಎಂದರೆ, ಇಂದು ಕೇವಲ ಡೆಪ್ಯೂಟಿ ಎಂದು ಹೇಳಿದರೆ ಸಾಕು ಅದು ಚೆನ್ನಬಸಪ್ಪನವರನ್ನೇ ಪ್ರತಿನಿಧಿಸುವಂತಾಗಿದೆ.

೧೮೫೪-೫೫ ರ ಸುಮಾರಿಗೆ ಇಡೀ ದೇಶದಲ್ಲಿ ಏಕರೂಪದ ಶಿಕ್ಷಣಯೋಜನೆಯು ಸಿದ್ಧವಾಯಿತಷ್ಟೇ. ಆಗ ಶಿಕ್ಷಣದ ಆಗುಹೋಗುಗಳನ್ನು ನೋಡಿಕೊಳ್ಳಲು ಡಿ.ಪಿ.ಆಯ್. ಕಚೇರಿಗಳೂ ಅಸ್ತಿತ್ವಕ್ಕೆ ಬಂದದ್ದನ್ನು ಮತ್ತೊಮ್ಮೆ ಇಲ್ಲಿ ನೆನಪಿಸಿಕೊಳ್ಳಬೇಕು. ಇದೇ ಹೊತ್ತಿಗೆ ಮುಂಬೈಪ್ರಾಂತವನ್ನು ಉತ್ತರ – ಗುಜರಾತದ ಕೆಲವು ಜಿಲ್ಲೆಗಳು, ಮಧ್ಯ – ಮುಂಬೈ, ನಾಸಿಕ, ಮರಾಠವಾಡಾ, ಪುಣೆ, ಸೊಲ್ಲಾಪೂರ, ಸಾಂಗ್ಲಿ ಜಿಲ್ಲೆಗಳು, ದಕ್ಷಿಣ – ಬೆಳಗಾಂವ, ಧಾರವಾಡ, ವಿಜಾಪೂರ, ಕಾರವಾರ ಜಿಲ್ಲೆಗಳನ್ನೊಳಗೊಂಡ ಮೂರು ಪ್ರತ್ಯೇಕ ವಿಭಾಗಗಳಾಗಿ ವಿಂಗಡಿಸಿ, ಈ ವಿಭಾಗಗಳಿಗೆ ಒಬ್ಬೊಬ್ಬ ಎಜ್ಯುಕೇಶನಲ್ ಇನ್ಸಪೆಕ್ಟರರನ್ನು ನೇಮಿಸಿದರು. ಮೊದಲಿಗೆ ಡೆಕ್ಕನ್ ಭಾಗಕ್ಕೆ ಸ್ಟೀವರ್ಡ ಎಂಬವರು 'ಡಿವ್ಹಿಜನಲ್ ಎಜ್ಯುಕೇಶನಲ್ ಇನ್‌ಸ್ಪೆಕ್ಟರ'ರಾಗಿಯೂ, ಎಫ್.ಪಿ. ಬೇಕರ ಎಂಬವರು ಧಾರವಾಡ, ಬೆಳಗಾವಿ, ಸಾತಾರಾ ಮತ್ತು ಸೊಲ್ಲಾಪೂರ ಜಿಲ್ಲೆಗಳೊಳಗಿನ ಕನ್ನಡ ಪ್ರದೇಶಗಳಿಗೆ 'ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರ'ರಾಗಿಯೂ ನೇಮಕಗೊಂಡು ಕಾರ್ಯನಿರ್ವಹಿಸುತ್ತಿದ್ದುದೂ ತಿಳಿದಿರುವ ಸಂಗತಿಯಾಗಿದೆ. ಮುಂದೆ ಡೆಕ್ಕನ್ ಭಾಗದಿಂದ ಧಾರವಾಡ, ಬೆಳಗಾವಿ ಜಿಲ್ಲೆಗಳನ್ನು ಪ್ರತ್ಯೇಕಿಸಿ ಹೊಸ ವಿಭಾಗವೊಂದನ್ನು ಸೃಷ್ಟಿಸಿ ಅವರ ಅಧೀನಕ್ಕೆ ಆಡಳಿತವನ್ನು ಒಪ್ಪಿಸಿದ್ದನ್ನೂ ಕಂಡುಕೊಂಡಿದ್ದೇವೆ. ತರುವಾಯ ಕಲಾದಗಿ ಜಿಲ್ಲೆಯಿಂದ ಕೆಲವು ಮುಖ್ಯಸ್ಥಳಗಳನ್ನು ಬಿಜಾಪೂರಕ್ಕೆ ವರ್ಗಾಯಿಸಿ, ಅದನ್ನೊಂದು ಜಿಲ್ಲೆಯಾಗಿ ಪರಿಗಣಿಸಿದ ಮೇಲೆ ಉತ್ತರ ಕರ್ನಾಟಕ ರಚನೆಯಾದ ಸಂಗತಿಯನ್ನು ಮತ್ತೆ ವಿವರಿಸುವ ಅಗತ್ಯವಿಲ್ಲ. ಸರಿಸುಮಾರು ಇದೇ ಅವಧಿಯಲ್ಲಿ ರಸೆಲ್ಲರು ಎಜ್ಯುಕೇಶನಲ್ ಇನ್‌ಸ್ಪೆಕ್ಟರ ಎಂದು ಕಾರ್ಯನಿರ್ವಹಿಸ ತೊಡಗಿದ್ದರಿಂದ ಆಶ್ಚರ್ಯಕರವಾದ, ಅನಿರೀಕ್ಷಿತವಾದ ಬದಲಾವಣೆಗಳಿಗೆ ರಹದಾರಿ ಮಾಡಿಕೊಟ್ಟಂತಾಯಿತೆಂಬ ಮಾತನ್ನು ಮತ್ತೊಮ್ಮೆ ಇಲ್ಲಿ ಒತ್ತುಕೊಟ್ಟು ಹೇಳಿದರೆ ತಪ್ಪಾಗಲಾರದು. ಇವರೇ ಚೆನ್ನಬಸಪ್ಪನವರಲ್ಲಿ ಹುದುಗಿದ್ದ ಅನನ್ಯವಾದ ಚೈತನ್ಯವನ್ನು ಕಂಡುಕೊಂಡು ಬೆಳಗಾವಿಯ ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರ ಹುದ್ದೆಯಿಂದ ಅವರನ್ನು ಬದಲಿಸಿ ೧೮೬೬ ರಲ್ಲಿ ಬೆಳಗಾವಿ ಜಿಲ್ಲೆಯ 'ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರ' ಎಂದು ನೇಮಿಸಿದರು. ಈ ಹುದ್ದೆಯಲ್ಲಿ ನೇಮಿಸಲ್ಪಟ್ಟ ಮೊದಲ ಕನ್ನಡಿಗರೆಂದರೆ ಚೆನ್ನಬಸಪ್ಪನವರೇ. ಆದರೆ ಫ.ಗು.ಹಳಕಟ್ಟಿಯವರು ಮಾತ್ರ 'ಕೈ.ವಾ.ಚೆನ್ನಬಸಪ್ಪ. ಬಸಲಿಂಗಪ್ಪ. ಧಾರವಾಡ ಇವರ ಚರಿತ್ರೆಯು' - ಎಂಬ ತಮ್ಮ ಕೃತಿಯಲ್ಲಿ "ಚೆನ್ನಬಸಪ್ಪನವರು ೧೮೬೧ ನೇ ಇಸವಿಯಲ್ಲಿ ೧೯೦ ರೂಪಾಯಿಗಳ ಮೇಲೆ ಬೆಳಗಾವಿ

---

೧. ಹಳಕಟ್ಟಿ ಫ.ಗು.- ಕೈ.ವಾ. ಚೆನ್ನಬಸಪ್ಪ. ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು - ಪುಟ.೯ (೧೯೩೦)

ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರರಾಗಿ ನೇಮಿಸಲ್ಪಟ್ಟರು"[೧] ಎಂದಿದ್ದಾರೆ. ಇದು ಸಂಪೂರ್ಣ ತಪ್ಪು ಗ್ರಹಿಕೆಯಾಗಿದೆ. ಯಾಕೆಂದರೆ ನಾರ್ಮಲ್ ಸ್ಕೂಲು ಆರಂಭವಾದದ್ದೇ ೧೮೬೧ ರಲ್ಲಿ. ಆ ಸ್ಕೂಲು ಟ್ರೇನಿಂಗ್ ಕಾಲೇಜಾಗಿ ಊರ್ಜಿತಗೊಂಡದ್ದು (upgrade) ೧೮೬೪ ರಲ್ಲಿ. ಹೀಗಿರುವಾಗ ಚೆನ್ನಬಸಪ್ಪನವರು ೧೮೬೧ ರಲ್ಲಿ ಡೆಪ್ಯೂಟಿ ಇನ್‌ಸ್ಪೆಕ್ಟರರಾಗಿ ಕೆಲಸಮಾಡಲು ಹೇಗೆ ಸಾಧ್ಯ? ಆದ್ದರಿಂದ ಅವರು ಮೊದಲು (೧೮೬೧) ನಾರ್ಮಲ್ ಸ್ಕೂಲ ಪ್ರಿನ್ಸಿಪಾಲರಾಗಿ, ಅನಂತರ (೧೮೬೪) ಈ 'ಸ್ಕೂಲು' ಊರ್ಜಿತಗೊಂಡು 'ಕಾಲೇಜಾದ ಮೇಲೆ ಅದರ ಪ್ರಿನ್ಸಿಪಾಲರಾಗಿ ಕಾರ್ಯಮಾಡಿದ ತರುವಾಯ (೧೮೬೬)ರಲ್ಲಿ ಬೆಳಗಾವಿ ಜಿಲ್ಲೆಯ ಡೆಪ್ಯೂಟಿಯಾಗಿ ಕೆಲಸಮಾಡಿದರೆಂಬ ಅಭಿಪ್ರಾಯವೇ ಸರಿಯಾದದ್ದು. ಆಮೇಲೆ ೧೮೬೯ರಲ್ಲಿ ಅವರನ್ನು ಅದೇ ಹುದ್ದೆಯಲ್ಲಿ ಧಾರವಾಡ ಜಿಲ್ಲೆಗೂ ವರ್ಗಮಾಡಲಾಯಿತು. ಡೆಪ್ಯೂಟಿಯವರು ಮಾತ್ರ ಇದನ್ನೊಂದು ವೃತ್ತಿಯೆಂದು ಪರಿಗಣಿಸಲೇ ಇಲ್ಲ. ಅದನ್ನವರು ಒಂದು ಸಾಂಸ್ಕೃತಿಕ ಕ್ರಾಂತಿಗಾಗಿ ಬಳಸಿಕೊಂಡರು. ಆದರಿಂದಾಗಿ ಮುಂದಿನ ಜನಾಂಗ ತಲೆಯೆತ್ತಿ ನಿಲ್ಲುವಂತಾಯಿತು.

ಅಂದಿನ ಸ್ಥಾಪಿತ ವ್ಯವಸ್ಥೆಯೊಂದಿಗೆ ರಾಜೀಮಾಡಿಕೊಂಡು, ಅಧಿಕಾರದ ಗತ್ತು, ಗಾಂಭೀರ್ಯಗಳನ್ನೇ ಪ್ರದರ್ಶಿಸುತ್ತ ಡೆಪ್ಯೂಟಿಯವರು ವಾಸ್ತವತೆಗೆ ಬೆನ್ನು ತಿರುಗಿಸಿ, ಅನಾಯಾಸವಾಗಿ ದಕ್ಕಬಹುದಾಗಿದ್ದ ದೌಲತ್ತು, ಮರ್ಯಾದೆಗಳೊಂದಿಗೆ ಕೈಕುಲುಕುತ್ತ ನಡೆದಿದ್ದರೆ ಕನ್ನಡ ಜನಾಂಗ ಇನ್ನೂ ಎಂದು ಎಚ್ಚತ್ತು ಕೊಳ್ಳುತ್ತಿತ್ತೇನೋ! ಆದರೆ ಚೆನ್ನಬಸಪ್ಪನವರು ಆಗಲೇ ಅಪಾಯದ ತೀವ್ರತೆಯನ್ನು ಅರಿತವರಾಗಿದ್ದರಿಂದ ಅಷ್ಟೇ ತ್ವರಿತವಾಗಿ ಕಾರ್ಯೋನ್ಮುಖರಾಗುವುದರ ಅಗತ್ಯವನ್ನು ಕಂಡುಕೊಂಡು, ನಾನಾವಿಧವಾದ ಯೋಜನೆಗಳನ್ನು ಕೈಗೆತ್ತಿಕೊಂಡರು. ಅವುಗಳಲ್ಲಿ ಪ್ರಮುವಾದವುಗಳೆಂದರೆ :

೧. ಎಲ್ಲ ನೆಲೆಗಳಲ್ಲಿ ತಾಂಡವವಾಡುತ್ತಿರುವ ಮರಾಠಿ ಪ್ರಾಬಲ್ಯವನ್ನು ತಗ್ಗಿಸುವುದು ಮತ್ತು ಆ ಸ್ಥಾನದಲ್ಲಿ ಕನ್ನಡವನ್ನು ನೆಲೆಗೊಳಿಸುವುದು.

೨. ಹೆಚ್ಚು ಹೆಚ್ಚು ಕನ್ನಡ ಶಾಲೆಗಳನ್ನು ತೆರೆಯುವುದು.

೩. ಕನ್ನಡ ಪಠ್ಯಪುಸ್ತಕಗಳನ್ನು ಬರೆಯಿಸಿ ಬಳಕೆಗೆ ತರುವುದು.

೪. ಹೋದಹೋದಕಡೆ ಕನ್ನಡಿಗರಲ್ಲಿ ಸ್ವಭಾಷಾಪ್ರಜ್ಞೆಯನ್ನು ಮೂಡಿಸುವುದು.

೫. ಕನ್ನಡಶಿಕ್ಷಕರ ಸಂಖ್ಯೆಯನ್ನು ಸಾಧ್ಯವಾದಷ್ಟೂ ಹೆಚ್ಚಿಸುವುದು.

೬. ಶಿಕ್ಷಕರಿಗೆ ತರಬೇತಿ ಕೊಡಿಸಿ ಅವರನ್ನು ಯೋಗ್ಯ ಶಿಕ್ಷಕರನ್ನಾಗಿಸುವುದು.

೭. ಶಿಕ್ಷಣ ಇಲಾಖೆಯಲ್ಲಿ ದಕ್ಷತೆ, ಪ್ರಾಮಾಣಿಕತೆಗಳನ್ನು ಬೆಳೆಸುವುದು.

೮. ಶಿಕ್ಷಕರಲ್ಲಿ, ವಿದ್ಯಾರ್ಥಿಗಳಲ್ಲಿ, ಸಾಮಾಜಿಕರಲ್ಲಿ ಅವರವರ ತಪ್ಪಿನ ಅರಿವು ಮೂಡಿಸುವುದು.

೯. ಆಡಳಿತ ವ್ಯವಹಾರವೆಲ್ಲ ಕನ್ನಡದಲ್ಲೇ ನಡೆಯಬೇಕೆಂದು ಒತ್ತಾಯಿಸುವುದು.

೧೦. ಕನ್ನಡ ಭಾಷಾಶುದ್ಧತೆಯನ್ನು ಕಾಪಾಡಿಕೊಂಡು ಅದಕ್ಕೆ ಗೌರವದ ಸ್ಥಾನ ದೊರಕಿಸಿಕೊಡುವುದು.

ಇವೇ ಮೊದಲಾದ ಸೂತ್ರಗಳನ್ನು ಅನ್ವಯಿಸಿ ಪತನಗೊಳ್ಳುತ್ತಿದ್ದ ಕನ್ನಡತನವನ್ನು ಪುನಃ ಸ್ಥಾಪಿಸಲು ಅವಿರತ ಹೋರಾಟ ನಡೆಸುವುದೇ ಅವರ ಜೀವನದ ಪರಮಗುರಿಯಾಯಿತು.

ಹೀಗಾಗಿ ಅವರು ಎಷ್ಟೇ ಕಷ್ಟವೆನಿಸಿದರೂ, ಹಲವು ನಿಷ್ಠುರಗಳನ್ನು ಕಟ್ಟಿಕೊಂಡರೂ ತಾವು ಒಪ್ಪಿದ್ದ ಪ್ರಸ್ತುತ ಸಿದ್ಧಾಂತಗಳನ್ನು ಅನುಷ್ಠಾನಗೊಳಿಸಲು ಈ ಕೆಲಸಕ್ಕಾಗಿ ಅವರು ಮಿತಿಮೀರಿ ದುಡಿದರು.

ಕಾಲಸನ್ನದ್ಧವಾದಾಗ ಅದರ ಆಕಾಂಕ್ಷೆಗೆ ತುಡಿವ ಮನಸ್ಸುಗಳೂ ಮೂಡಿನಿಲ್ಲುವುದು ಸಹಜಧರ್ಮ. ಡೆಪ್ಯೂಟಿಯವರೂ ಪರಿಸ್ಥಿತಿಯ ಗರ್ಭದಲ್ಲೇ ಮೂಡಿಬಂದವರು ಎಂಬ ಅಂಶವನ್ನು ಈ ಹಿಂದೆಯೇ ಹೇಳಲಾಗಿದೆ. ಅವರು ಸಮಕಾಲೀನ ಸಮಸ್ಯೆಗಳೊಂದಿಗೆ ಹೆಣೆದುಕೊಂಡ ಹಾಗೆಲ್ಲ ಆ ಅನುಭವವೇ ಅವರಲ್ಲಿ ಹೊಳವುಹಾಕುತ್ತ ಹೋಯಿತು. ಹಾಗಲ್ಲದಿದ್ದರೆ ಇಷ್ಟೊಂದು ವ್ಯಾಪಕವಾಗಿ ಚಿಂತಿಸುವುದು ಅವರಿಗೆ ಸಾಧ್ಯವಾಗುತ್ತಿರಲಿಲ್ಲವೇನೋ ಎನಿಸುತ್ತದೆ. ಅವರು ಹೊರಡಿಸುತ್ತಿದ್ದ ನೂರಾರು 'ಪರಿಪತ್ರಗಳು' ಆ ಸಂದರ್ಭದ ಶೈಕ್ಷಣಿಕ ಕ್ಷೇತ್ರವನ್ನಂತೂ ತಲಸ್ಪರ್ಶಿಯಾಗಿ ಪರಿಚಯಿಸುತ್ತವೆ. ಅಲ್ಲದೆ ಡೆಪ್ಯೂಟಿಯವರ ಸ್ವಭಾವವನ್ನು ಬಹಳ ಸ್ಪಷ್ಟವಾಗಿ ದರ್ಶನ ಮಾಡಿಸುತ್ತವೆ. ಶಿಕ್ಷಣರಂಗದಲ್ಲಿ ಏನೇನು ಆಚಾತುರ್ಯಗಳು ನಡೆಯುತ್ತವೆ? ಅಂಥವುಗಳಿಗೆ ಹೊಣೆಗಾರರು ಯಾರು? ಅವುಗಳ ನಿವಾರಣೆಗೆ ಯಾವ ರೀತಿಯ ಕ್ರಮಗಳನ್ನು ಕೈಕೊಳ್ಳಬೇಕು? ಹೀಗೆ ಕ್ರಮಕೈಕೊಂಡ ಮೇಲೂ ಆದ ಪರಿಣಾಮವೇನು? ಈ ಎಲ್ಲ ನಿಟ್ಟಿನಲ್ಲೂ ಡೆಪ್ಯೂಟಿಯವರ ಆಲೋಚನೆಯ ಲಹರಿ ಕೆಲಸಮಾಡುತ್ತಿದ್ದುದನ್ನು ನಿರಾಯಾಸವಾಗಿ ಅವರು ಹೊರಡಿಸುತ್ತಿದ್ದ ಅನೇಕ ಪರಿಪತ್ರಗಳಲ್ಲಿ ನೋಡಲು ಸಿಗುತ್ತದೆ.

ತಪ್ಪುಗಳನ್ನು ಮಾಡದಂತೆ ಮುನ್ನೆಚ್ಚರಿಕೆ (precaution) ನೀಡುವುದು, ಕಣ್ತಪ್ಪಿನಿಂದಲೋ, ಕೈತಪ್ಪಿನಿಂದಲೋ ಅಥವಾ ಅಜ್ಞಾನದಿಂದಲೋ ನುಸುಳಿ ಸೇರಿಕೊಳ್ಳುತ್ತಿದ್ದ ದೋಷಗಳನ್ನು ಗುರುತಿಸಿ, ಆ ಬಗ್ಗೆ ಸೂಕ್ತಕ್ರಮಗಳನ್ನು ಆದಷ್ಟೂ ತ್ವರಿತವಾಗಿ ಕೈಕೊಂಡು ಚಿಕಿತ್ಸೆ ನೀಡುವುದು ಮತ್ತು ಆ ತಪ್ಪುಗಳು ಮತ್ತೆ ಮರುಕಳಿಸಿದಂತೆ ನಿರ್ಬಂಧಿಸುವುದು ಡೆಪ್ಯೂಟಿಯವರು ಅನುಸರಿಸುತ್ತಿದ್ದ ಕ್ರಮ. ತಪ್ಪು ಎಷ್ಟೇ ಸಣ್ಣದಾಗಿರಲಿ, ಅದು ಯಾರಿಂದಲೇ ಆಗಿರಲಿ ಅದನ್ನು ನಿರ್ಲಕ್ಷಿಸುವುದಾಗಲೀ, ಆ ಬಗ್ಗೆ ದಾಕ್ಷಿಣ್ಯ ತೋರುವುದಾಗಲಿ ಚೆನ್ನಬಸಪ್ಪನವರ ಜಾಯಮಾನವೇ ಆಗಿರಲಿಲ್ಲ. ಆ ದೋಷಗಳನ್ನು ಗುರುತಿಸಿ ತಿದ್ದುವ ಕೆಲಸವನ್ನು ಮಾತ್ರ ಅವರು ಮಾಡುತ್ತಿರಲಿಲ್ಲ; ಬದಲಾಗಿ ಇಡೀ ಶಿಕ್ಷಣಕ್ಷೇತ್ರದಲ್ಲಿ ದೋಷರಾಹಿತ್ಯವಾದ ವಾತಾವರಣವನ್ನು ನಿರ್ಮಾಣಮಾಡಲು ಸಾಧ್ಯವಿದ್ದ ಎಲ್ಲಾ ಕಟ್ಟುನಿಟ್ಟಿನ ಕ್ರಮಗಳನ್ನು ಕೈಕೊಂಡು ಮಾರ್ಗದರ್ಶನ ಮಾಡುತ್ತಿದ್ದರು.

ದೋಷಗಳು ಶನಿಸಂತಾನವಿದ್ದ ಹಾಗೆ. ರಕ್ತಬೀಜಾಸುರನಂತೆ ಬಿದ್ದಲ್ಲಿ ಚಿಗಿಯುತ್ತವೆ. ಮರುಹುಟ್ಟಿಗೆ ಹೊಂಚುಹಾಕುತ್ತಲೇ ಇರುತ್ತವೆ. ತಪ್ಪು ಸಣ್ಣದೇ ಆಗಿರಲಿ, ದೊಡ್ಡದೇ ಆಗಿರಲಿ ಬೆಳೆಯುವುದಕ್ಕೆ ಆಸ್ಪದ ಕೊಡುವುದು ತುಂಬಾ ಅಪಾಯಕಾರಿ ಎಂಬುದು ಡೆಪ್ಯೂಟಿಯವರಿಗೆ ಮನವರಿಕೆಯಾಗಿತ್ತು. ಆದ್ದರಿಂದ ಇಂಥ ಪ್ರಸಂಗಗಳಲ್ಲಿ ಅವರು ತಕ್ಷಣ ಪ್ರತಿಕ್ರಿಯಿಸುತ್ತಿದ್ದರು. ಒಂದು ಶೈಕ್ಷಣಿಕ ಶಿಸ್ತು (academic decipline) ಹೇಗಿರಬೇಕು; ಮತ್ತು ಅದನ್ನು ಪ್ರಾಯೋಗಿಕವಾಗಿ ಎನ್ನುವುದಕ್ಕಿಂತಲೂ ಪ್ರಯೋಜನಾತ್ಮಕವಾಗಿ ಹೇಗೆ ಕಾರ್ಯಗತಗೊಳಿಸಬೇಕೆಂಬುದನ್ನು ಡೆಪ್ಯೂಟಿಯವರಿಂದಲೇ ಕಲಿಯಬೇಕು. ಶತಮಾನ ಕಳೆದು ಹೋಗಿದ್ದರೂ ಅವರ'ಶೈಕ್ಷಣಿಕ ನೀತಿಸಂಹಿತೆ'ಯನ್ನು ಪ್ರಶ್ನಿಸುವಂತೆಯೇ ಇಲ್ಲ. ಅವುಗಳ ಪ್ರಸ್ತುತತೆಗೆ ಕಿಂಚಿತ್ತೂ ಧಕ್ಕೆ ಒದಗಲಿಲ್ಲ. ಅವರ ಚಿಂತನೆಯ ವೈವಿಧ್ಯತೆ ಇಂದಿಗೂ ಆಶ್ಚರ್ಯಕಾರಕ ಅಷ್ಟೇ ಅಲ್ಲ, ಅನುಕರಣೀಯ ಕೂಡಾ. ಡೆಪ್ಯೂಟಿಯವರ ಒಂದು ದೃಷ್ಟಿ

ಯಾವಾಗಲೂ ಸೂಕ್ಷ್ಮದರ್ಶಕ (Microscope)ದ ಮೇಲಿದ್ದರೆ, ಇನ್ನೊಂದು ದೂರದರ್ಶಕ (Bynoculer)ದ ಮೇಲಿರುತ್ತಿತ್ತು. ಅಂದರೆ ಅವರ ದೃಷ್ಟಿಕೋನ ಸೂಕ್ಷ್ಮ ಮತ್ತು ದೂರಾನ್ವಯಿಕ. ಹೀಗಾಗಿ ಅವರು ಶಿಕ್ಷಣಕ್ಷೇತ್ರದಲ್ಲಿ ಏನನ್ನು ಬಿತ್ತಿದರೋ, ಎಷ್ಟನ್ನು ಬಿತ್ತಿದರೋ ಅದರ ಸಾವಿರ ಸಾವಿರಪಟ್ಟು ಬೆಳೆಯಲು ಸಾಧ್ಯವಾಯಿತು.

ಡೆಪ್ಯೂಟಿಯಾಗಿದ್ದ ಚೆನ್ನಬಸಪ್ಪನವರಿಗೆ ನಿಂತಕಾಲ ಮೇಲೆಯೇ ನಿರ್ಣಯಗಳನ್ನು ಕೈಕೊಳ್ಳುವಷ್ಟು ಅಧಿಕಾರವಿತ್ತು; ಸಮಯ ಪ್ರಜ್ಞೆಯಿತ್ತು. ಅವರು ಮೇಲಧಿಕಾರಿಗಳಿಗೆ ಅನುಮತಿಗಾಗಿ ಬರೆದು ಕಳಿಸಿದ ಯಾವುದೇ ನಿರ್ಣಯಗಳೂ ಅಮಾನ್ಯವಾದದ್ದಿಲ್ಲ. ಇದು ಅವರ ವ್ಯಕ್ತಿತ್ವಕ್ಕಿದ್ದ ಮರ್ಯಾದೆಯ ದ್ಯೋತಕವೂ ಹೌದು. ಸಾಮಾನ್ಯವಾಗಿ ಅಧಿಕಾರದ ಗದ್ದುಗೆಯ ಮೇಲೆ ಕುಳಿತು ಯಾರೋಕಳಿಸುವ ವರದಿಗಳನ್ನೋ, ಟಿಪ್ಪಣಿಗಳನ್ನೋ ಅವಲಂಬಿಸಿ ಪೂರ್ವಗ್ರಹಪೀಡಿತರಾಗಿ ಕ್ರಮಗಳನ್ನು ಕೈಕೊಳ್ಳುವ ಅಧಿಕಾರಿಗಳೇ ಹೆಚ್ಚು. ಆದರೆ ಡೆಪ್ಯೂಟಿಯವರು ಈ ಜಾಯಮಾನಕ್ಕೆ ಸೇರಿದವರಲ್ಲ. ತಮಗೆ ತಿಳಿದ ಸಂಗತಿಗಳ ಸತ್ಯಾಸತ್ಯತೆಯನ್ನು ವಿಮರ್ಶಿಸಿ ತಮಗೆ ಸರಿಕಂಡ ನಿರ್ಣಯಗಳನ್ನು ಕೈಕೊಳ್ಳುವುದು ಅವರ ಮೂಲಭೂತಗುಣವಾಗಿತ್ತು ಎನ್ನುವುದಕ್ಕೆ ಅವರ ಪರಿಪತ್ರಗಳೇ ಸಮೃದ್ಧ ದಾಖಲೆಗಳಾಗಿವೆ.

ಸಾಮಾನ್ಯವಾಗಿ ಅವರ ಪರಿಪತ್ರಗಳ ತುಂಬ ಒಡೆದು ಕಾಣುವ ಎರಡು ಪ್ರಮುಖ ಅಂಶಗಳೆಂದರೆ; ಒಂದು ಕನ್ನಡ ಭಾಷೆಯನ್ನು ಪುನಃ ಸ್ಥಾಪಿಸಿ ಅದರ ಬಳಕೆಯ ಬಗ್ಗೆ ನಿರಂತರತೆಯನ್ನು ಸಾಧಿಸುವುದು. ಮತ್ತೊಂದು ಶಿಕ್ಷಕರ ಲೋಪದೋಷಗಳ ಬಗ್ಗೆ ನಿಗಾಯಿಟ್ಟು ಅವರನ್ನು ತಿದ್ದಿತೀಡಿ ಆ ಕ್ಷೇತ್ರದಲ್ಲಿ ಶಿಸ್ತು ಹಾಗೂ ಶುದ್ಧತೆಯನ್ನು ತರುವುದು. ಈ ಎರಡೂ ವಿಷಯಗಳಲ್ಲಿ ಡೆಪ್ಯೂಟಿಯವರು ಯಾವ ಕಾರಣಕ್ಕೂ ಯಾರೊಂದಿಗೂ ರಾಜೀ ಮಾಡಿಕೊಳ್ಳಲು ಸಿದ್ಧರಿರಲಿಲ್ಲ. ಹೀಗಾಗಿ ಇವರ ಪರಿಪತ್ರಗಳ ವಸ್ತು, ಭಾಷೆಗಳ ಸಂಲಗ್ನತೆಯಲ್ಲಿ ನಯಗಾರಿಕೆಗಿಂತಲೂ ಕಟುತ್ವವನ್ನೇ ಹೆಚ್ಚಾಗಿ ಕಾಣುತ್ತೇವೆ. ಕೆಲವರಿಗೆ ಅವರು ಕೈಕೊಂಡ ಕ್ರಮಗಳು ಇಂದು ನಿರ್ದಯದ ಕ್ರಮಗಳಾಗಿ ಕಾಣಬಹುದು. ಆದರೆ ಅಂದಿನ ಸಾಮಾಜಿಕ ಸಂದರ್ಭದ ಹಿನ್ನೆಲೆಯಲ್ಲಿ ಆ ನಿರ್ದಯತೆಯ ಹಿಂದಿನ ಅಂತಃಕರಣ, ಕಳಕಳಿಗಳನ್ನು ನಾವು ಗ್ರಹಿಸದಿದ್ದರೆ ತಪ್ಪಾಗುತ್ತದೆ. ಚೆನ್ನಬಸಪ್ಪನವರಿಗೆ ಅಂದು ಮುಖ್ಯವಾದದ್ದು ಕನ್ನಡಭಾಷೆ ಮತ್ತು ಕನ್ನಡಜನವೇ ವಿನಃ ಔಪಚಾರಿಕವಾದ ಪ್ರಚಾರ-ಪ್ರಶಂಸೆಗಳಲ್ಲ, ಬಿರುದು-ಬಾವಲಿಗಳೂ ಅಲ್ಲ.

ಹಸಿದವನು ತಾನಾಗಿಯೇ ತನ್ನ ಹಸಿವೆಗಾಗಿ ಕೂಗುವುದಕ್ಕೂ, ಉಂಡವನೊಬ್ಬ ಹಸಿದವನೊಬ್ಬನ ಪರವಾಗಿ ಕೂಗುವುದಕ್ಕೂ ಎಷ್ಟೊಂದು ವ್ಯತ್ಯಾಸವಿರುತ್ತದೆಂಬುದು ಅನುಭವ ವೇದ್ಯವಾದ ಸಂಗತಿ. ನಿಜವಾದ ಕನ್ನಡಿಗನೊಬ್ಬ ತನ್ನ ಸಾಂಸ್ಕೃತಿಕ ನೆಲೆಯಿಂದ ವಂಚಿತನಾದಾಗ ಅವನ ಮಾನಸಿಕ ಸ್ಥಿತಿ ಏನೆಂಬುದು ಕನ್ನಡಿಗರಲ್ಲದವರಿಗೆ ಮತ್ತು ಕೇವಲ ಕನ್ನಡದ ಮುಖವಾಡ ಹಾಕಿಕೊಂಡು ಬದುಕುವವರಿಗೆ ಅರ್ಥವಾಗುವುದು ತೀರ ಕಷ್ಟ. ಡೆಪ್ಯೂಟಿಯವರನ್ನು ಬದುಕಿರುವ ವರೆಗೆ ಕನ್ನಡದ ಹಸಿವು ಬಾಧಿಸುತ್ತಲೇ ಇತ್ತು. ಆದ್ದರಿಂದ ಅವರು ಮಠಪತ್ರಿಕೆಯ ಪರಿಪತ್ರಗಳ ಮೂಲಕ ಅಭಿವ್ಯಕ್ತಿಸಿದ ವಿಚಾರಧಾರೆಯಲ್ಲಿ ಆಗ್ರಹವಿದೆ, ಆಕ್ರೋಶವಿದೆ, ತಳಮಳ ತಲ್ಲಣಗಳಿವೆ. ಯಾಕಂದರೆ, ಡೆಪ್ಯೂಟಿಯವರು ಕೂಗಿದ ಕೂಗು ಹಸಿದ ಕನ್ನಡಿಗನೊಬ್ಬನ ಕೂಗಾಗಿತ್ತು. ಈ ಹತ್ತಾರು ಸಂಗತಿಗಳನ್ನು ಅವರೇ ಹೊರಡಿಸಿದ ಪರಿಪತ್ರಗಳಿಂದಲೇ ಕಂಡುಕೊಳ್ಳುವದು ಅತ್ಯಂತ ಸಮರ್ಥನೀಯವೆನಿಸಬಲ್ಲುದು.

೧. ....ಚಿಕ್ಕ ಹುಡುಗರಿಗೆ ಸಸಾರ ಶಬ್ದಗಳನ್ನು ಬರಿಯಲಿಕ್ಕೂ, ಓದುವದಕ್ಕೂ ಕಲಿಸುವದನ್ನು ಬಿಟ್ಟು ಆಕರಕ್ಕೆ, ಜಾಟಕ್ಕೆ ಎಂಬ ತಿಳಿಯದಂಥಾವುಗಳನ್ನು ಕಲಿಸುವುದು ನಮ್ಮ ದೃಷ್ಟಿಗೆ ಬಿತ್ತು. ಮತ್ತು ಕಲಿಸುತ್ತಿರೆಂಬುದು ನಮಗೆ ಗೊತ್ತು ಆದೆ. ಆದರೆ ಈ ರೀತಿಯಿಂದ ಕಲಿಸುವುದು ನಮಗೆ ನೆಟ್ಟಗೆ ಕಾಣುವದಿಲ್ಲ.... ತಿಳಿಯದಂಥಾದನ್ನು ಕಲಿಸುವ ಗೊಡವೆಗೆ ಹೋಗಬಾರದು (ಶಾಲಾಪತ್ರಿಕೆ ೧೮೭೭ ಪುಟ ೨೬೦).

೨. .... ಯಾವ ಪಂತೋಜಿಗಳಾದರೂ ಮೆಹನತಿನಿಂದ ಮನಸ್ಸು ಕೊಟ್ಟು ಕಲಿಸದ್ದು ಮುಂದಿನ ವರ್ಷ ಪರೀಕ್ಷೇದ ಸಮಯಕ್ಕೆ ಕಂಡು ಬಂದರೆ ಅದರ ವಿಷಯಕ್ಕೆ ಯೋಗ್ಯ ತಜವೀಜು ಮಾಡಲಾಗುವುದು. ಎ|ಏ, ಶ|ಷ|ಸ, ಕ್ವ|ಕವ, ತ್ವ|ತವ, ಸತ್ತಮಿ| ಸಪ್ತಮಿ, ಬಹು| ಬಊ, ಈಶ್ವರ| ಈಸ್ವರ| ಈಷ್ವರ ಎನ್ನುತ್ತಾರೆ. ಆದರೆ ಹೀಗೆ ಅನ್ನಗೊಡಬಾರದು. ಹುಡುಗರಿಗೆ ಓದಿದ ವಾಕ್ಯಗಳ ಅರ್ಥ ತಿಳಿಯುವದಿಲ್ಲ. ಅಂದರೆ ಹೀಗೆ ಕಲಿಸದೆ ವಾಕ್ಯಗಳ ಅರ್ಥವನ್ನು ಕಲಿಸಬೇಕು.... ಲೆಕ್ಕ ಮಾಡುವಾಗೆ ಕನ್ನಡ ಅಂಕಿಗಳನ್ನು ಹಾಕಬೇಕು. ಆರೆ ಅಂಕಿಗಳನ್ನು ಹಾಕಗೊಡಬಾರದು. ಒಂದು ವರ್ಗದಲ್ಲಿ ೨೦ ಕ್ಕಿಂತಲೂ ಕಡಿಮೆ ಹುಡುಗರು ಇರಬಾರದು. (ಶಾಲಾಪತ್ರಿಕೆ ೧೮೭೭ ಪು ೮೪ ರಿಂದ ೯೭)

೩. ....ಒಬ್ಬ ಹುಡುಗನಿಗೆ ಏನಾದರೊಂದು ಪ್ರಶ್ನೆ ಕೇಳಿದರೆ ಆ ಹುಡುಗನ ಹತ್ರ ಇದ್ದ ಹುಡುಗರು ಆ ಪ್ರಶ್ನೆಗೆ ಉತ್ತರ ಹೇಳುತ್ತಾರೆ. ಇಲ್ಲವೆ ಬಾಯಿಲೆ ಸುಮ್ಮನೆ ವಟವಟ ಅನ್ನುತ್ತಾರೆ. ಅಥವಾ ಮೆಲ್ಲಗೆ ಆ ಹುಡುಗರಿಗೆ ಹೇಳುತ್ತಾರೆ. ಅಂದರೆ ಮಾಸ್ತರರು ಹೀಗೆ ಆಗದಂತೆ ಮೊದಲಿನಿಂದ ಅಭ್ಯಾಸ ಮಾಡಿಸಬೇಕು. ಇದಲ್ಲದೆ ಹುಡುಗರು ಓದುವಾಗ್ಗೆ ಪುಸ್ತಕವನ್ನು ಬಾಯಿಹತ್ತಿರ ಹಿಡಿಯುತ್ತಾರೆ, ಅಥವಾ ಪುಸ್ತಕವನ್ನು ಮುಟ್ಟಿ ಅತ್ತ ಇತ್ತ ನೋಡುತ್ತ ಮನಸಿಗೆ ಬಂದಂತೆ ನಿಂದಿರುತ್ತಾರೆ. ಹೀಗೆ ಆಗದಂತೆ ಬಂದೋಬಸ್ತು ಇಡಬೇಕು. (ಶಾಲಾಪತ್ರಿಕೆ ೧೮೭೮ ಪುಟ ೩೧೦, ೩೧೧)

೪. .... ನಾವು ವಾರ್ಷಿಕ ಪರೀಕ್ಷೆ ತೆಗೆದುಕೊಂಬುದಕ್ಕೆ ಕೆಲವು ಸ್ಥಳಗಳಲ್ಲಿ ಹೋದಾಗ್ಗೆ ಸಾಲಿಯ ಹತ್ತಿರ ಅತಿಶಯ ಹೊಲಸು ಇರುವುದರಿಂದ ಸಾಲಿಯಲ್ಲಿ ದುರ್ಗಂಧ ವಾಸ ಬರುತ್ತಿದ್ದರೂ ಆ ಮಾಸ್ತರರು ನಮ್ಮ ಕಡಿಗೆ ರಿಪೋರ್ಟ ಮಾಡಿ ತಜವಿಜಮಾಡಲಿಲ್ಲ. ಇದು ಬಹಳ ಮುಗ್ಗಲಗೇಡಿತನವು. ಇನ್ನು ಮುಂದೆ ಈ ಪ್ರಕಾರ ಆಗದಂತೆ ಮಾಸ್ತರರು ಎಚ್ಚರಿಕೆಯನ್ನು ಇಡಬೇಕು.

(ಶಾಲಾ ಪತ್ರಿಕೆ ಫೆಬ್ರುವರಿ ೧೮೭೮)

೫. ....ಹುಡುಗರು ಮೂರನೆಯ ಸ್ಟ್ಯಾಂಡರಿನ ಪ್ರಕಾರ ಅಭ್ಯಾಸ ಮಾಡಲಿಕ್ಕೆ ಹತ್ತಿದಾಕ್ಷಣವೇ ಅವರಿಗೆ ಕನ್ನಡ ಮತ್ತು ಆರೆ ಕಾಗದಗಳನ್ನು ದಿನಾ ತಾಸು ಓದಲಿಕ್ಕೆ ಕಲಿಸಬೇಕು. (ಶಾಲಾಪತ್ರಿಕೆ ೧೮೮೯. ಪುಟ ೨೬,೨೭)

೬. ....ಸಾಲೆಯಲ್ಲಿರುವ ಯಾವತ್ತೂ ಹುಡುಗರ ಹತ್ತಿರ ಸ್ಲೇಟ ಪಾಟಿಗಳು ಮತ್ತು ಅವರು ಕಲಿಯುವ ಪುಸ್ತಕಗಳು ಇರಲಿಕ್ಕೇಬೇಕು ಎಂದು ನೋಟೀಸು ಕೊಟ್ಟಿದ್ದು... ಯಾರು ಇನ್‌ಸ್ಪೆಕ್ಟರ ಸಾಹೇಬರ ನೋಟೀಸಿನಂತೆ ನಡೆಯಲಿಕ್ಕಿಲ್ಲ ಅವರಿಗೆ ಏನೇನೂ ಕಾರಣ ಕೇಳದೆ ದಂಡಮಾಡುವೆವು.

(ಶಾಲಾಪತ್ರಿಕೆ ೧೮೮೯ ಪುಟ ೨೯೦– ೨೯೧)

೭. .... ಕಲಿಯುವ ಹುಡುಗರು ತಾವು ಓದುವ ಪುಸ್ತಕಗಳೊಳಗಿನ ಕಠಿಣ ಶಬ್ದಗಳ ಅರ್ಥಗಳನ್ನು ಬರೆದು ಬಾಯಿಪಾಠ ಮಾಡುವುದರ ದಶಿಯಿಂದಾ ಕಾಗದ ವಹಿಗಳನ್ನು ಕಟ್ಟಿರಬೇಕು. ಮತ್ತು ಮಾಸ್ತರರು ಈ ವಹಿಗಳನ್ನು ಎಂಟು ದಿವಸಕ್ಕೊಮ್ಮೆ ತಪಾಸಮಾಡಬೇಕು. ಈಗ ಈಪ್ರಕಾರದಂತೆ ವಹಿವಾಟು ಇಲ್ಲದ ಕಾರಣ ಹುಡುಗರಿಗೆ ಶಬ್ದದ ಅರ್ಥಗಳು ಗೊತ್ತಿರುವದಿಲ್ಲ.

(ಶಾಲಾಪತ್ರಿಕೆ ೧೮೭೯ ಪುಟ ೨೧೬)

೮. .... ನಾವು ಸಾಲಿಗಳ ಪರೀಕ್ಷಾಕ್ಕೆ ಹೋದ ಸಮಯದಲ್ಲಿ ಸಾಲಿಯ ಸ್ಥಾಪನವಾದ ತಾರೀಖು, ಹೋದವರ್ಷ ಪರೀಕ್ಷೆಯಾದ ತಾರೀಖು ಇತ್ಯಾದಿ ಮಾಹಿತಿಯನ್ನು ಮಾಸ್ತರರಿಗೆ ಕೇಳಿದರೆ ಅವರಿಗೆ ಗೊತ್ತಿಲ್ಲದೆ ಇರುವುದರಿಂದ ನಮ್ಮ ವೇಳೆ ವ್ಯರ್ಥವಾಗಿ ಖರ್ಚು ಆಗುತ್ತದೆ. ಆದರೆ ಎಲ್ಲಾ ಮಾಸ್ತರರು ತಂಮ ತಂಮ ಸಾಲಿಗಳ ಎಲ್ಲ ಇತಿಹಾಸವನ್ನು ಗೊತ್ತುಮಾಡಿಕೊಂಡು ಇರಬೇಕು.

(ಶಾಲಾಪತ್ರಿಕೆ ೧೮೭೨ ಪುಟ ೨೦೪)

೯. ....ಜನರಿಗೆ ತಿಳಿಯದ ಶಬ್ದಗಳನ್ನು ಹಾಕಿ ಬರೆಯುವದೊಂದು ಶಾಹಣೆತನವೆಂದು ತಿಳಕೊಂಡು ಕೆಲವರು ಸಾಧಾರಣ ಶಬ್ದಗಳನ್ನು ಬಿಟ್ಟುಕೊಟ್ಟು ಜನರಿಗೆ ತಿಳಿಯದ ಶಬ್ದಗಳನ್ನು ಉಪಯೋಗಮಾಡುತ್ತಾರೆ .... ಈ ಮಾಸ್ತರರಿಗೆ ನಾವು ಛೀಮಾರಿ ಹಾಕುವವರಿದ್ದೇವೆ.
(ಶಾಲಾಪತ್ರಿಕೆ ೧೮೭೧ ಪುಟ ೧೬ – ೧೭)

೧೦. .... ಬರೆದಿರುವದನ್ನೆಲ್ಲಾ ಮನಸುಗೊಟ್ಟು ಓದಿನೋಡಿ ತಾವು ಇತ್ತ ಕಡೆಗೆ ಕಳಿಸುವ ಕಾಗದ ಪತ್ರಗಳನ್ನು ಎಚ್ಚರದಿಂದಾ ಬರೆದು ಕಳುಹಿಸುತ್ತಾ ಹೋಗಬೇಕು.

೧. ಓದಲಿಕ್ಕೆ ಬರುವ ಹಾಗೆ ಅಕ್ಷರಗಳನ್ನು ಸ್ಪಷ್ಟವಾಗಿ ಬರೆಯಬೇಕು.

೨. ಅಶುದ್ಧ ಬರಿಯಬಾರದು.

೩. ತಮ್ಮ ಕೈಲಾದ ಮಟ್ಟಿಗೆ ಶ್ರಮಪಟ್ಟು ಛಾಪಿಸಿದ ಅಕ್ಷರಗಳಂತೆ ಬರೆಯಲಿಕ್ಕೆ ಕಲಿಯಬೇಕು. ಕಚೇರಿ ತರದ ಅಕ್ಷರಗಳನ್ನು ಆಗದೀ ಬರೆಯಬಾರದು.

೪. ಬರೆದದ್ದೆಲ್ಲಾ ವ್ಯಾಕರಣದ ನೇಮಕ್ಕೆ ತಪ್ಪದ ಹಾಗೆ ಬರೆಯುವದಕ್ಕೆ ಕಲಿಯಬೇಕು. ತಪ್ಪುಗಳಲ್ಲಿ ಕೆಲವನ್ನು ನಾವು ಕೆಳಗೆ ಬರೆದಿದ್ದೇವೆ.

| ಶುದ್ಧ | ಅಶುದ್ಧ |
|---|---|
| ರಾಜಪೂಜಿತ | ರಾಜಪಜೀತ |
| ಕಸಬಾ | ಕ್ಸಬಾ |
| ಈತನ | ಯಿತನ |
| ನಿಂತು | ನಿತು |
| ಸಾಲಿಯ | ಶಾಳೆದ |

– (ಶಾಲಾಪತ್ರಿಕೆ ೧೮೭೯ ಪು. ೯೨ ರಿಂದ ೯೪)

೧೧. ....ಗೋಕಾವಿ, ಪರಸಗಡ ಮತ್ತು ಸಂಪಗಾವಿ ಈ ಮೂರು ತಾಲೂಕುಗಳಲ್ಲಿರುವ ಯಾವತ್ತೂ ಸ್ಕೂಲ ಮಾಸ್ತರರಿಗೆ ತಿಳಿಸುವದೇನೆಂದರೆ ಹಿಂದಕ್ಕೆ ನಾವು ನಿಮ್ಮ ಸಾಲಿಗಳಲೆಲ್ಲಾ ಬಾಳಬೋಧ ಪುಸ್ತಕಗಳನ್ನು ವೋದಲಿಕ್ಕೆ ಕಲಿಸಿದೆ ಕನ್ನಡ ಕಲಿಸಬೇಕೆಂದು ಹೇಳಿದ್ದಿವಿ. ಆದರಂತೆ ವಹಿವಾಟು ನಡೆಸಿದ್ದೀರಾದೀತು. ಯೆಲ್ಲಿ ಇನ್ನೂ ವಹಿವಾಟು ನಡೆದಿರಲಿಕ್ಕಿಲ್ಲಾ ಅಲ್ಲೆ ಈ ನೋಟೀಸ್ ಕಂಡ ದಿನದಿಂದಾ ಬಾಳಬೋಧ ವೋದಿಸುವದು ಬಂದ ಮಾಡಬೇಕು ಮತ್ತು ಯಾವತ್ತು ವಿಷಯಗಳನ್ನು ಕನ್ನಡಿನಿಂದಾ ಕಲಿಸಬೇಕು. ಬೇಕಾದರೆ ಆರೆ ಚೀಟು ವೋದಲಿಕ್ಕೆ ಕಲಿಸಬೇಕು.

(ಶಾಲಾಪತ್ರಿಕೆ ೧೮೬೭ ಪುಟ. ೧೭೪)

೧೨. .... ಈಗ ಎರಡು ತಿಂಗಳ ಮುಂದೆ ನಮ್ಮ ಕಡಿಗೆ ಕಳಿಸುವ ಕಾಗದ ಪತ್ರಗಳನ್ನು ಕನ್ನಡಿನಲ್ಲಿ ಬರೆದು ಕಳಿಸುತ್ತ ಹೋಗಬೇಕೆಂದು ನೋಟೀಸು ಕೊಟ್ಟಿರಲಿಕ್ಕಾಗಿ, ನಿಂಮಲ್ಲಿಯ ಕೆಲವರ ಕಡಿಯಿಂದಾ ಕನ್ನಡಿನಲ್ಲಿ ಕಾಗದ ಪತ್ರಗಳು ಬರುವದಿಲ್ಲ. ಅಂದರೆ ಇನ್ನು ಮೇಲೆ ಹೀಗೆ ಮಾಡದೆ ಕನ್ನಡಿನಲ್ಲಿ ಬರೆದು ಕಳಿಸುತ್ತಾ ಹೋಗಬೇಕು. ಯಾರಿಗೆ ಕನ್ನಡ ಬರೀಲಿಕ್ಕೆ ಬರುವದಿಲ್ಲ ಅವರು ಕನ್ನಡ ಬರೀಲಿಕ್ಕೆ ಕಲಿಬೇಕು.

(ಶಾಲಾಪತ್ರಿಕೆ ೧೮೬೭ ಪು. ೧೪೮)

೧೩. .... ಸವದತ್ತೀ ತಾಲೂಕಿನಲ್ಲಿರುವ ಎಕ್ಕುಂಡಿ ಊರಲ್ಲಿ ಸಾಲಿಯಾಗಿ ಈವತ್ತಿಗೆ ಒಂದು ವರ್ಷವಾಯಿತು. ಅಂದರೆ ನಾವು ತಿಂಗಳ ಮುಂದೆ ಅಲ್ಲಿಗೆ ಹೋದಾಗ್ಗೆ ಸಾಲಿಯ ಪರೀಕ್ಷಾ ತೆಗೆದುಕೊಳ್ಳಲಾಗಿ ಬಹಳ ಚೆನ್ನಾಗಿ ಆದ್ದರಿಂದ ಆ ಸಾಲಿಯ ಮಾಸ್ತರರಾದ ಕೃಷ್ಣಾಜೀ ನರಸೋ ಇವರಿಗೆ ೨ ರೂಪಾಯಿ ಸಂಬಳ ಹೆಚ್ಚು ಮಾಡಬೇಕೆಂದು ನಾವು ಮೆಹರ್ಬಾನ ಇನ್‌ಸ್ಪೆಕ್ಟರ ಸಾಹೇಬರಿಗೆ ಶಿಫಾರಸು ಮಾಡಲಾಗಿ, ಸಾಹೇಬರವರು ಮಂಜೂರಿ ಕೊಟ್ಟು ಈ ಮಜಕೂರು ಕನ್ನಡ ಮತಪತ್ರಿಕೆಯಲ್ಲಿ ಛಾಪಿಸಬೇಕೆಂದು ಬರೆದು ಕಳಿಸಿದ್ದಾರೆ. ತಿಳಿಯುವದು.

(ಶಾಲಾಪತ್ರಿಕೆ ೧೮೭೯. ಪುಟ ೫೭)

೧೪. .... ದುಂಡಸಿ ಸಾಲಿ ಮಾಸ್ತರರಾದ ಗುರಬಸಯ್ಯಾ ಮಹಾಗುಂಡಯ್ಯಾ ಇವರು ನಮ್ಮ ಅಪ್ಪಣೆಯನ್ನು ತೆಗೆದುಕೊಳ್ಳದೆ ಧಾರವಾಡಕ್ಕೆ ಬಂದು ತಿರುಗಿ ದುಂಡಸಿಗೆ ಹೋದರು. ೫ ದಿವಸಗಳ ತನಕಾ ಸಾಲಿಯ ಕೆಲಸದಿಂದ ಅಪ್ಪಣೆಯ ಹೊರ್ತು ಗೈರಹಾಜರಿದ್ದರು ಮತ್ತು ಇದರ ವಿಷಯವಾಗಿ ಬರದು ಅವರನ್ನು ಕೇಳಲಾಗಿ ಅವರು ಸುಳ್ಳು ರಿಪೋರ್ಟು ಬರದು ಕಳಿಸಿದರು. ಈ ಮಜಕೂರನ್ನು ನಾವು ಮೆ. ಇನ್‌ಸ್ಪೆಕ್ಟರ ಸಾಹೇಬರಿಗೆ ಬರೆದು ತಿಳಿಸಿದ್ದೀವಿ. ಮತ್ತು ಆ ಅಪರಾಧ ದಶಿಯಿಂದಾ ಅರ್ಧತಿಂಗಳದ ಪಗಾರವನ್ನು ದಂಡ ಮಾಡಬೇಕು ಮತ್ತು ೧ ರೂಪಾಯಿ ಪಗಾರವನ್ನು ಕಡಿಮೆ ಮಾಡಬೇಕು. ಹಾಗೂ ಈ ಮಜಕೂರನ್ನೆಲ್ಲಾ ಮತಪತ್ರಿಕೆಯಲ್ಲಿ ಛಾಪಿಸಬೇಕೆಂದು ಮೆಹರ್ಬಾನ ಇನ್‌ಸ್ಪೆಕ್ಟರ ಸಾಹೇಬರವರ ಕಡಿಗೆ ಬರದು ಕಳುಹಿಸಲಾಗಿ ಸಾಹೇಬರವರು ನಾವು ಬರದದ್ದನ್ನು ಮಂಜೂರ ಮಾಡಿದರು. ಮುಂದೆ ಮಾಸ್ತರರು ಗೈರಶಿಸ್ತಿನಿಂದ ನಡೀಬಾರದು. ನಡೆದರೆ ಈ ಪ್ರಕಾರ ಶಿಕ್ಷಾ ಮಾಡಬೇಕಾಗುವುದು.

(ಶಾಲಾ ಪತ್ರಿಕೆ ೧೮೭೯ ಪುಟ. ೨೧೫ ೨೧೬)

೧೫. .... ಟ್ರೇನಿಂಗ್ ಕಾಲೇಜು ಕಲಿಯುವದಕ್ಕೆ ಹೋಗತಕ್ಕ ಮಾಸ್ತರರು ನಮ್ಮ ಹುಕುಮಿನ ಪ್ರಕಾರ ತೀವ್ರವಾಗಿ ಟ್ರೇನಿಂಗ್ ಕಾಲೇಜದ ಪ್ರಿನ್ಸಿಪಾಲರ ಕಡಿಗೆ ಹಾಜರಾಗದೆ ತಡಮಾಡಿ ಹೋಗುವುದರಿಂದ ಕಾಲೇಜದ ಕೆಲಸಕ್ಕೆ ಬಹುತೊಂದರೆಯಾಗುತ್ತದೆ. ಆದರೆ ಈ ವರ್ಷದಲ್ಲಿ

ಕಲಿಯುವದಕ್ಕೆ ಹೋಗತಕ್ಕ ಮಾಸ್ತರರು ಕಾಲೇಜದ ಪ್ರಿನ್ಸಿಪಾಲರ ಕಡಿಯಿಂದಾ ಹುಕುಂ ಬಂದ ಕೂಡಲೇ ತಮ್ಮ ಸಾಲಿಯ ಅಸಿಸ್ಟಂಟನ ಕಡಿಗಾಗಲಿ ಅಥವಾ ನಾವು ನೇಮಿಸಿದ ಮನುಷ್ಯನ ಕಡಿಗಾಗಲಿ ಚಾರ್ಜಕೊಟ್ಟು ಅತೀ ತೀವ್ರ ಹೊರಟು ಸದರ ಕಾಲೇಜದ ಪ್ರಿನ್ಸಿಪಾಲರ ಕಡಿಗೆ ಹಾಜರಾಗಬೇಕು. ಯಾವ ಮಾಸ್ತರರು ಕಾಲೇಜಕ್ಕೆ ಹೋಗಿ ಹಾಜರಾಗಲಕ್ಕಿಲ್ಲವೋ ಅವರನ್ನು ಮೆಹರ್ಬಾನ ಇನ್‌ಸ್ಪೆಕ್ಟರ ಧೊರೆಗಳವರು ತಮಗೆ ಯೋಗ್ಯ ಕಂಡಂತೆ ಶಿಕ್ಷಿಸುವವರು. ತಿಳಿಯುವದು.

(ಶಾಲಾ ಪತ್ರಿಕ ೧೮೭೨ ಪುಟ ೧೩೩)

೧೯. .... ನವಲಗುಂದ ತಾಲೂಕ ಪೈಕಿ ಗುಡಿಸಾಗರ ಮಾಸ್ತರ ಗವಸಖಾನ ಸರದಾರಖಾನ ಇವರು ಒಂದು ವರ್ಷ ತಂಮ ಸಾಲಿಯ ಹಾಜರಿ ಶೀಸಪೆನಿಸಿಲಿನಿಂದ ತುಂಬಿದ್ದಾರೆ. ಮತ್ತು ಅದರಲ್ಲಿ ಮಸಿ ಚಿತ್ರಕಾಟ ಮಾಡಿದ್ದಾನೆ, ಇನ್‌ಸ್ಪೆಕ್ಟರ ಪ್ರಾಂತ ದಕ್ಷಿಣ ಭಾಗ ಇವರ ಮಂಜೂರಿ ಮ್ಯಾಲಿಂದ ಒಂದು ತಿಂಗಳ ಪಗಾರ ದಂಡ ಮಾಡಿರುತ್ತೇವೆ. ಇನ್ನು ಮುಂದೆ ಈ ತಪ್ಪು ಮಾಡಿದರೆ ೬.೭ ರೂಪಾಯಿ ಶಿಕ್ಷಕ ಜಾಗೆಯ ಮೇಲೆ ನೇಮಿಸೇವಂತ ಹುಕುಮ ಕೊಟ್ಟಿರುತ್ತೇವೆ. ಇದನ್ನು ಲಕ್ಷದಲ್ಲಿಟ್ಟು ಯಾವತ್ತೂ ಮಾಸ್ತರರು ಒಳ್ಳೆಯ ರೀತಿಯಿಂದ ವರ್ತಿಸಬೇಕು.

(ಶಾಲಾ ಪತ್ರಕ ೧೮೮೦ ಪುಟ ೬೮ – ೬೯)

ಈವರೆಗಿನ ಪರಿಪತ್ರಗಳ ಅಭ್ಯಾಸದಿಂದ ಬಹಳ ನಿಚ್ಚಳವಾಗಿ ತಿಳಿದುಬರುವ ಒಂದು ಸಂಗತಿ ಎಂದರೆ, ಪ್ರಾಥಾಮಿಕ ಶಾಲೆಯ ಮಟ್ಟದಲ್ಲಿ ಪಾಲಕ ಹಾಗೂ ವಿದ್ಯಾರ್ಥಿಗಳಿಗಿಂತ ಶಿಕ್ಷಕರ ಪಾತ್ರವೇ ಬಹು ಮುಖ್ಯವಾಗುವುದರಿಂದ ಅವನೇ ಇಲ್ಲಿ ಕೇಂದ್ರವ್ಯಕ್ತಿ. ಅವನು ಹೊಣೆಗೇಡಿಯಾದರೆ ಅನೇಕ ಸಾಮಾಜಿಕ ಹಾಗೂ ಶೈಕ್ಷಣಿಕ ಅನಿಷ್ಟಗಳು ಬೆಳೆಯಲು ದಾರಿಮಾಡಿಕೊಟ್ಟಂತಾಗುತ್ತದೆ ಎಂಬುದು ಚೆನ್ನಬಸಪ್ಪನವರಿಗೆ ಸಂಪೂರ್ಣ ಮನವರಿಕೆಯಾಗಿತ್ತು. ಆದ್ದರಿಂದ ಶಿಕ್ಷಕರಿಂದ ಜರಗುವ ಯಾವುದೇ ತಪ್ಪು ಉಪಕ್ರಮಗಳನ್ನು ಅವರು ಸಹಿಸುತ್ತಿರಲಿಲ್ಲ. ಶಿಕ್ಷಕರಾದವರು ತಾವು ಮೊದಲು ಒಂದು ಶೈಕ್ಷಣಿಕ ಶಿಸ್ತಿಗೆ ಒಳಪಡಬೇಕು, ಆಮೇಲೆ ಅದನ್ನು ವಿದ್ಯಾರ್ಥಿಗಳ ಮನೋಭೂಮಿಕೆಯಲ್ಲಿ ಬಿತ್ತಲು ಸಾಧ್ಯಾವಾಗುತ್ತದೆ. ತರುವಾಯ ಅವರಿಂದ ಒಳ್ಳೆಯ ಫಲಗಳನ್ನು ನಿರೀಕ್ಷಿಸುವುದು ತಪ್ಪೆನಿಸಲಾರದು. ಈ ದೃಷಿಯಿಂದ ಶಿಕ್ಷಕರನ್ನು ತಿದ್ದವುದೆಂದರೆ ವಿದ್ಯಾರ್ಥಿಗಳನ್ನು ತಿದ್ದಿದಂತೆ. ವಿದ್ಯಾರ್ಥಿಗಳನ್ನು ತಿದ್ದುವುದೆಂದರೆ ಇಡೀ ಸಮಾಜವನ್ನೇ ತಿದ್ದಿದಂತೆ. ಇದು ಚೆನ್ನಬಸಪ್ಪನವರ ಉದ್ದೇಶವಾಗಿತ್ತು.

ಪ್ರಾಥಮಿಕ ಶಾಲೆಯಲ್ಲಿರುವ ಮಕ್ಕಳ ಮನಸ್ಸು ಒತ್ತುಕಾಗದವಿದ್ದಂತೆ (Blotting paper). ಅದರ ದುರ್ಬಳಕೆಯಾಗದಂತೆ ನೋಡಿಕೊಳ್ಳುವ ದೊಡ್ಡ ಜವಾಬ್ದಾರಿ ಅದರ ಬಳಕೆದಾರನದಾಗಿರುತ್ತದೆ. ಈ ಅರಿವು ಇಟ್ಟುಕೊಂಡವನು ಮಾತ್ರ ವಿದ್ಯಾರ್ಥಿಗಳ ಅದಮ್ಯ ಚೈತನ್ಯವನ್ನು ಸದ್ವಿನಿಯೋಗ ಮಾಡಿಕೊಳ್ಳಬಲ್ಲ. ಇಲ್ಲವಾದಲ್ಲಿ ಆ ಮಕ್ಕಳು ತುಂಬಾ ಅಪಾಯಕಾರಿಯಾದ ಉತ್ಪಾದನೆಯ ಸಾಧನಗಳೆನಿಸಬಲ್ಲರು. ಅಕ್ಷರಗಳನ್ನು ಯಂತ್ರಗಳೂ ಕಲಿಸಬಲ್ಲವು ಆದರೆ ಅಕ್ಷರ ಕಲಿಸುವವರೆಲ್ಲ ಶಿಕ್ಷಕರಾಗಲಾರರು. ಇದನ್ನು ಮೀರಿದ ಯಾವುದೋ ಅನೂಹ್ಯವಾದ ಗುಣವಿಶೇಷಗಳು ಶಿಕ್ಷಕನಲ್ಲಿರಬೇಕಾಗುತ್ತದೆ. ಶಿಕ್ಷಕನ ವ್ಯಕ್ತಿತ್ವವೇ ಮಕ್ಕಳಿಗೊಂದು ಪಾಠ. ಅದನ್ನು ನೋಡಿ ಮಕ್ಕಳು ಪಾಠಕಲಿಯುತ್ತವೆ. ಪಾಠವೆಂದರೆ ವಿಷಯಗಳನ್ನು ಬಾಯಿಪಾಠಮಾಡುವದಷ್ಟೇ ಅಲ್ಲ, ಅದು ವರ್ತನಶಾಸ್ತ್ರದ ಪ್ರತ್ಯಕ್ಷಪಾಠವೂ ಆಗಿರಬೇಕೆಂಬ ನಿಲುವು ಚೆನ್ನಬಸಪ್ಪನವರದಾಗಿತ್ತು. ಮಕ್ಕಳು ನೋಡಿಕಲಿಯುವ ಮನೋಧರ್ಮದವರಾಗಿರುವುದರಿಂದ ಅವರಿಗೆ ಆದರ್ಶಗಳನ್ನು ತೋರಿಸುವ ನಿರಂತರ

ಪರಿಶ್ರಮ ಶಿಕ್ಷಕನದಾಗಿರಬೇಕಾಗುತ್ತದೆ. ಅವನ ನಿಮಿಷದ ಉದಾಸೀನ ವಿದ್ಯಾರ್ಥಿಗಳ ಜೀವನವನ್ನೇ ಪ್ರಪಾತಕ್ಕೆ ತಳ್ಳುತ್ತದೆ ಎಂಬುದನ್ನು ತಿಳಿದದ್ದ ಚೆನ್ನಬಸಪ್ಪನವರು, ಆ ಶಿಕ್ಷಕನ ಉದಾಸೀನ ಮನೋವೃತ್ತಿಯನ್ನು ಎಲ್ಲ ಬದಿಯಲ್ಲೂ ಕತ್ತರಿಸುತ್ತ ಚಿಕಿತ್ಸೆ ಮಾಡುವ ವಿಧಾನವನ್ನು ಈ ಪರಿಪತ್ರಗಳ ಮೂಲಕ ಅನುಸರಿಸಿದರು.

ಶಿಕ್ಷಕನಾದವನು ಮೈಯೆಲ್ಲಾ ಕಣ್ಣಾಗಿ ಕೆಲಸ ಮಾಡಬೇಕಾಗುತ್ತದೆ. ವಿದ್ಯಾರ್ಥಿಗಳು, ಸಮಾಜ ಮತ್ತು ಶಾಲೆ ಈ ಮೂರಕ್ಕೂ ಶಿಕ್ಷಕನೆ ಕೇಂದ್ರ ಬಿಂದುವಾಗುವುದರಿಂದ ಅವನು ಇವೆಲ್ಲವುಗಳ ಆಗುಹೋಗುಗಳನ್ನು ಗಮನದಲ್ಲಿಟ್ಟುಕೊಂಡೇ ಹೆಜ್ಜೆಯಿಡಬೇಕಾಗುತ್ತದೆ. ಹೀಗೆ ಮಾಡಬೇಕಾದಾಗ ಮೊದಲು ಸ್ವತ ಶಿಕ್ಷಕನಾದನು ಮನೋಧಾರ್ಡ್ಯ, ಆತ್ಮವಿಶ್ವಾಸ, ಅಖಂಡ ಶ್ರದ್ಧೆ, ನೈತಿಕಬಲಗಳನ್ನು ಹೊಂದಿರಬೇಕಾಗುತ್ತದೆ. ಆಗ ಮಾತ್ರ ಗುರು ಅನ್ನಿಸಿಕೊಂಡವ ತನ್ನ ಶಿಷ್ಯನಲ್ಲಿ ಆ ಶಕ್ತಿಪಾತಮಾಡಲು ಸಾಧ್ಯವಾಗುತ್ತದೆ. ಇಲ್ಲವಾದರೆ ಒಬ್ಬ ಶಿಕ್ಷಕ ಮಾಡುವ ಒಂದು ತಪ್ಪು ತನ್ನ ಕೈಯೊಳಗಿನ ನೂರು ಜನ ಶಿಷ್ಯರಿಗೆ ವರ್ಗಾವಣೆ ಹೊಂದುತ್ತ ಅದೇ ತಪ್ಪು ಮತ್ತೆ ಮತ್ತೆ ಕವಲೊಡೆಯುತ್ತ ಅದರ ವಂಶಾಬಿವೃದ್ಧಿಯಾಗುತ್ತಲೇ ಇರುವುದು ನಿಶ್ಚಿತ. ಹೀಗಾಗಿ ಚೆನ್ನಬಸಪ್ಪನವರು ಶಿಕ್ಷಕರು ಮಾಡುತ್ತಿದ್ದ ಇಂಥ ಹಲವಾರು ತಪ್ಪುಗಳ ಪಟ್ಟಿಮಾಡುತ್ತ ಪರಿಪತ್ರಗಳ ಮೂಲಕ ಅವುಗಳ ನಿವಾರಣೆಗೆ ಸಾಧ್ಯವಿದ್ದ ಎಲ್ಲ ಯತ್ನವನ್ನೂ ಮಾಡುತ್ತಾರೆ. ಹೇಳುವುದನ್ನು ಖಾರವಾಗಿಯೇ ಹೇಳುತ್ತಾರೆ. ಶಿಕ್ಷಕರು ಮಾಡುವ ತಪ್ಪುಗಳ ನೆಲೆಗಳನ್ನು ಗುರುತಿಸುತ್ತಾರೆ. ಅವುಗಳಿಗೆ ಆಮೇಲೆ ಪರಿಹಾರ ಸೂಚಿಸುತ್ತಾರೆ. ಪರಿಷ್ಕಾರಗಳನ್ನು ಅಳವಡಿಸಿಕೊಳ್ಳಲು ಒತ್ತಾಯಿಸುತ್ತಾರೆ. ಇಷ್ಟಾಗಿಯೂ ಪರಿಹಾರ ಕಾಣದೆ ಇದ್ದರೆ ಕ್ರಮ ಕೈಕೊಳ್ಳುತ್ತಾರೆ.

ಪ್ರಸ್ತುತ ಪರಿಪತ್ರಗಳಲ್ಲಿ ಚೆನ್ನಬಸಪ್ಪನವರ ಸುಧಾರಣೆಯ ಕಳಕಳಿ ಮಡುಗಟ್ಟಿ ನಿಂತಿರುವದನ್ನು ಅತ್ಯಂತ ಸುಲಭವಾಗಿ ಗುರುತಿಸಬಹುದಾಗಿದೆ. ಮಕ್ಕಳ ಮಾನಸಿಕ ಮಟ್ಟವನ್ನು ಸರಿಯಾಗಿ ತಿಳಿದಿದ್ದ ಚೆನ್ನಬಸಪ್ಪನವರು ಶಿಕ್ಷಕರಾದವರು ವಿದ್ಯಾರ್ಥಿಗಳಿಗೆ ಕಲಿಸುವಾಗ ತಮ್ಮ ಬೌದ್ಧಿಕ ಕಸರತ್ತನ್ನು ತೋರಿಸದೆ, ಆದಷ್ಟು ಸರಳವಾದ ರೀತಿಯಲ್ಲಿ ಕಲಿಸದೆ ಹೋದರೆ ಅದು ಮಕ್ಕಳ ಅಭಿರುಚಿಯನ್ನೇ ನಾಶಮಾಡಿ ಬಿಡಬಹುದು. ಇದರಂತಹ ದುರಂತ ಮಕ್ಕಳ ಜೀವನದಲ್ಲಿ ಬೇರೊಂದಿಲ್ಲ. ಆದ್ದರಿಂದ ಸುಲಭವಾದದ್ದನ್ನು ಸರಳವಾಗಿ ಕಲಿಸುವ ಪರಿಪಾಠವನ್ನು ರೂಢಿಗೆ ತಂದು ಕೊಳ್ಳುವಂತೆ ಅವರು ಶಿಕ್ಷಕರ ಮನವೊಲಿಸಲು ಪ್ರಯತ್ನಿಸುತ್ತಿದ್ದರು. ಕಲಿಸುವ ಸಂದರ್ಭದಲ್ಲಿ ಶಿಕ್ಷಕರಾದವರು ಅಕ್ಷರಗಳನ್ನು ಶುದ್ಧಬರೆಯುವ ಕಡೆಗೆ,ಅಷ್ಟೇ ಪರಿಶುದ್ಧವಾಗಿ ಅವುಗಳನ್ನು ಉಚ್ಚರಿಸುವುದರ ಕಡೆಗೆ, ವಾಕ್ಯಗಳ ಅರ್ಥಗ್ರಹಣದ ಕಡೆಗೆ, ವಿದ್ಯಾರ್ಥಿಗಳ ಹಾವಭಾವಗಳ ಕಡೆಗೆ, ತಮ್ಮ ಕಲಿಕೆಯ ಸಾಧನ ಸಲಕರಣೆಗಳನ್ನು ಓರಣವಾಗಿ ಇಟ್ಟುಕೊಳ್ಳುವುದರ ಕಡೆಗೆ,ಶಾಲೆ ಆವರಣವನ್ನು ನಿರ್ಮಲವಾಗಿ ಇಟ್ಟುಕೊಳ್ಳುವುದರ ಕಡೆಗೆ, ದಾಖಲಾತಿಗಳನ್ನಿಡುವಾಗ ನಿಯಮಿತತನ ಹಾಗೂ ಅಚ್ಚುಕಟ್ಟುತನವನ್ನು ಸಾಧಿಸುವುದರ ಕಡೆಗೆ, ಕನ್ನಡದಲ್ಲಿಯೇ ಬರೆಯುವ, ಕನ್ನಡದಲ್ಲಿಯೇ ಅಂಕಿ ಸಂಖ್ಯೆಗಳನ್ನಿಡುವುದರ ಕಡೆಗೆ ಹೀಗೇ ಇನ್ನೂ ಹಲವಾರು ವಿಷಯಗಳಲ್ಲಿ ಪ್ರಾಮಾಣಿಕತೆಯನ್ನು ಮೈಗೂಡಿಸಿಕೊಂಡು ಗಮನಹರಿಸುವುದು ಆದ್ಯ ಕರ್ತವ್ಯವೆಂದು ಭಾವಿಸಿದ್ದ ಡೆಪ್ಯೂಟಿಯವರು ಅವೆಲ್ಲವುಗಳನ್ನು ಮೂಲೆ ಮುಕ್ಕಾಗದಂತೆ ಶಿಕ್ಷಕರಿಂದಲೂ ಬಯಸಿದರು. ಈ ಕಟ್ಟುನಿಟ್ಟುಗಳನ್ನು ಶಿಕ್ಷಣಕ್ಷೇತ್ರದಲ್ಲಿ ಇಂದು ಕೂಡ ಕಿಂಚಿತ್ತೂ ಬದಲಾವಣೆ ಮಾಡದೆ ಅಳವಡಿಸಿಕೊಂಡರೆ ಕ್ರಾಂತಿಯನ್ನೇ ಮಾಡಬಹುದು. ಶಿಕ್ಷಣಕ್ಷೇತ್ರ ಇಂದಿಗೂ ಸೋಲುತ್ತಿರುವುದು ಇಲ್ಲಿಯೇ. ನಿಜವಾಗಿ ಇವತ್ತೂ ಕೂಡ ಶಿಕ್ಷಣಕ್ಷೇತ್ರದಲ್ಲಿ ಅರ್ಥಪೂರ್ಣತೆಯನ್ನು ತುಂಬುವ ಮನಸ್ಸಿದ್ದರೆ ಚೆನ್ನಬಸಪ್ಪನವರು ಅನುಸರಿಸುತ್ತಿದ್ದ ಸೂತ್ರಗಳನ್ನು ಯಥಾವತ್ತಾಗಿ ಜಾರಿಗೆ ತರಬೇಕು.

ಇದರಿಂದ ಶಿಕ್ಷಣ ಸುಧಾರಣೆಯ ಹೆಸರಿನಲ್ಲಿ ಪೋಲಾಗುತ್ತಿರುವ ಕೋಟ್ಯಾಂತರ ರೂಪಾಯಿಗಳನ್ನು ಉಳಿಸಿಕೊಳ್ಳುವುದರ ಬಗ್ಗೆ ಸಂದೇಹವೇ ಇಲ್ಲ. ಆದರೆ ಪ್ರಚಲಿತ ವಿದ್ಯಮಾನಗಳ ಹಿನ್ನೆಲೆಯಲ್ಲಿ, ಕಾನೂನುಗಳ ರಕ್ಷಣೆಯಲ್ಲಿ, ಭ್ರಷ್ಟಾಚಾರಗಳೇ ಮೌಲ್ಯವೆನ್ನುವಂತಹ ಪರಿಸ್ಥಿತಿಯಲ್ಲಿ, ಶಿಕ್ಷಣಕ್ಷೇತ್ರಕ್ಕಷ್ಟೇ ನೀತಿಸಂಹಿತೆ ಯಾಕೆ ಎಂದು ಕೇಳುವ ಕಾಲದ ವೈಪರೀತ್ಯಕ್ಕೆ ಕೂಡಾ ಚೆನ್ನಬಸಪ್ಪನವರ ಕರ್ಮಧಾರೆ ಮತ್ತು ವಿಚಾರಧಾರೆಗಳೆರಡೂ (ಮಾಡುವ ಮನಸ್ಸಿದ್ದರೆ) ಅಪ್ರಸ್ತುತ ವೆನಿಸಲಾರವೆಂಬ ಅಭಿಪ್ರಾಯವನ್ನಂತೂ ಇಂದಿಗೂ ಯಾರೂ ನಿರಾಕರಿಸಲಾರರು. ಈ ದೃಷ್ಟಿಯಿಂದ ಚೆನ್ನಬಸಪ್ಪನವರು ಸಮಕಾಲೀನರಲ್ಲಿ ಪ್ರಸ್ತುತರಾಗಿದ್ದಂತೆ ವರ್ತಮಾನದಲ್ಲಿಯೂ ಪ್ರಸ್ತುತರಾಗಿದ್ದಾರೆ. ಮುಂದೆಯೂ ಪ್ರಸ್ತುತರಾಗಿರುತ್ತಾರೆ.

ಚೆನ್ನಬಸಪ್ಪನವರು ಎಷ್ಟೊಂದು ಕಠೋರ ಶಿಸ್ತಿನ ಡೆಪ್ಯೂಟಿಯಾಗಿದ್ದರೆಂಬುದನ್ನು ಅವರ ಇನ್ನೂ ಕೆಲವು ಪರಿಪತ್ರಗಳಿಂದ ಪ್ರಮಾಣೀಕರಿಸುವದಕ್ಕೆ ಪ್ರಯಾಸಪಡಬೇಕಾಗಿಲ್ಲ. ಇಲ್ಲಿ ಉದ್ದಕ್ಕೂ ಅವರು ಬಳಸಿದ ಭಾಷೆ, ಕೈಕೊಂಡ ಕ್ರಮಗಳು, ಅಂಟಿಕೊಂಡಿದ್ದ ನಿಲುವು, ಸಾಧಿಸಬೇಕೆಂಬ ಛಲ, ಬತ್ತಲಾರದ ಉತ್ಸಾಹ, ನಿಷ್ಠುರಗಳನ್ನು ಎದುರಿಸುವ ದಿಟ್ಟತನ, ಕನ್ನಡಭಾಷೆ ಸಂಸ್ಕೃತಿಗಳ ಬಗೆಗಿನ ಅಪೂರ್ವಪ್ರೀತಿ ಇವು ಇಲ್ಲಿ ಉಲ್ಲೇಖಿತವಾಗಿರುವ ಪರಿಪತ್ರಗಳಲ್ಲಿ ಸಾಲು ಗಟ್ಟು ನಿಲ್ಲುತ್ತವೆ. ನಿದರ್ಶಕ್ಕೆ ಕೆಲವನ್ನಾದರೂ ಅವರ ಪರಿಭಾಷೆಯಲ್ಲಿಯೇ ನೋಡುವುದು ಹೆಚ್ಚು ಸಮರ್ಪಕ :

ನಂದಗಡ ಸಾಲಿಯ ಹೆಡ್‌ಮಾಸ್ತರರಾದ ವಿನಾಯಕ ಮೋರೇಶ್ವರ ಪಾಠಣಕರಯಿವರು ತಮ್ಮ ಕೆಲಸವನ್ನು ಲಕ್ಷಗೊಟ್ಟು ಮಾಡದ್ದರಿಂದಲೂ, ಬೆಳಗಾವಿಗೆ ತಮ್ಮ ಮನಸ್ಸಿಗೆ ಬಂದಾಗ ಬಂದು, ಮನಸ್ಸಿಗೆ ಬಂದಾಗ್ಗೆ ತಿರುಗಿ ನಂದಗಡಕ್ಕೆ ಹೋಗಿದ್ದು ತಿಳಿದು ಬಂದುದರಿಂದಲೂ ತಿಂಗಳ ಆಖೈರಕ್ಕೆ ನಮ್ಮ ಕಡಿಗೆ ಕಳಿಸುವ ಲೆಕ್ಕವನ್ನೆಲ್ಲಾ ಮನಸ್ಸಿಗೆ ಬಂದಂತೆ ತಯಾರು ಮಾಡಿ ಕಳುಹಿಸಿದ್ದು ನಮಗೆ ತಿಳಿದಿದ್ದರಿಂದಲೂ ಶಿಕ್ಷಕರ ಪಗಾರ ಕೊಡುವುದರಲ್ಲಿ ಧಾಂದಲೆ ಮಾಡಿದರಿಂದಲೂ ಮತ್ತು ನಮಗೆ ಗೈರಶಿಸ್ತ ಜವಾಬ ಕೊಟ್ಟದರಿಂದಲೂ ನಾವು ಮೆಹರ್ಬಾನ ಎಜ್ಯುಕೇಶನಲ್ ಇನ್‌ಸ್ಪೆಕ್ಟರ ಸಾಹೇಬ ಬಹದ್ದೂರ ದಕ್ಷಿಣಭಾಗ ಇವರ ಕಡಿಗೆ ಇವರನ್ನು ಕೆಲಸದಿಂದ ದೂರಮಾಡುವ ಬಗ್ಗೆ ರಿಪೋರ್ಟ ಮಾಡಲಾಗಿ, ಮೆಹರಬಾನ ಸಾಹೇಬರವರು ಸದರ ಮಾಸ್ತರನ ಕೆಲಸದಿಂದ ದೂರ ಮಾಡಿ, ಯೀ ಪ್ರಕಾರದ ನೋಟೀಸು ಶಾಲಾ ಪತ್ರಿಕೆಯಲ್ಲಿ ಛಾಪಿಸುವ ಬಗ್ಗೆ ನಂಮ ಕಡಿಗೆ ಬರದು ಕಳುಹಿಸಿದ್ದಾರೆ. (ಶಾಲಾ ಪತ್ರಿಕೆ ೧೮೬೭ ಅಕ್ಟೋಬರ)

ಪ್ರಸ್ತುತ ಪರಿಪತ್ರ ಕರ್ತವ್ಯಚ್ಯುತನಾಗಿ ಗೈರಶಿಸ್ತಿನಿಂದ ವರ್ತಿಸಿದಾಗ ಶಿಕ್ಷಕನೊಬ್ಬನ ಮೇಲೆ ಎಂಥ ಕ್ರಮ ಜರುಗಿಸಲಾಗುತ್ತಿತ್ತೆಂಬುದರ ಒಂದು ಮಾದರಿ ಮಾತ್ರ. ನಮಗಿಲ್ಲಿ ಪರಿಪತ್ರವನ್ನು ಬರೆಯುವ ಕ್ರಮ ಕೂಡ ಮುಖ್ಯವಾಗುತ್ತದೆ. ಮೊದಲು ಶಿಕ್ಷಕ ಮಾಡ ತಪ್ಪುಗಳೇನು ಎಂಬುದನ್ನು ಪರಿಚಯಿಸುವುದು, ಇದಕ್ಕೂ ಮುಂಚೆ ಅವನು ಮಾಡಿದ ತಪ್ಪುಗಳನ್ನು ಖಾತ್ರೀಪಡಿಸಿಕೊಳ್ಳುವುದು, ಅನಂತರ ಅವುಗಳನ್ನು ಮೇಲಾಧಿಕಾರಿಗಳ ಗಮನಕ್ಕೆ ತರುವುದು, ಕಟ್ಟಕಡೆಗೆ ಅವರ ಆದೇಶದಂತೆ ಕ್ರಮ ಕೈಕೊಂಡು ಅದನ್ನು ಶಾಲಾಪತ್ರಕಗಳಲ್ಲಿ ಜಾಹೀರಪಡಿಸುವುದು. ಈ ರೀತಿ ಒಂದು ಪರಿಪತ್ರ ಸಾಮಾನ್ಯವಾಗಿ ನಾಲ್ಕು ಮಜಲುಗಳಲ್ಲಿ ಮುಂದುವರೆದು ಕೊನೆಯ ಘಟ್ಟ ತಲುಪುವುದನ್ನು ಕಾಣುತ್ತೇವೆ. ಈ ಪರಿಪತ್ರಗಳ ಭಾಷೆ ಕೂಡಾ ಅಭ್ಯಾಸ ಯೋಗ್ಯವೆಂಬ ಅಂಶವನ್ನು ಮಠಪತ್ರಿಕೆಯ ಮಹತ್ವವನ್ನು ಕುರಿತು ಆಲೋಚಿಸುವ ಸಂದರ್ಭದಲ್ಲಿ ಸೂಚ್ಯವಾಗಿ ಹೇಳಿದ್ದರೂ ಮತ್ತೊಮ್ಮೆ ಪರಿಪತ್ರಗಳನ್ನು

ಸಮ್ಮುಖದಲ್ಲಿಟ್ಟುಕೊಂಡೇ ಆ ಸಂಗತಿ ಎಷ್ಟೊಂದು ಯಥಾಯೋಗ್ಯವಾಗಿದೆ ಎಂಬುದನ್ನು ಖಾತ್ರೀಪಡಿಸಿಕೊಳ್ಳಬಹುದು :

.... ನಾವು ಸಾಲಿಗಳ ಪರೀಕ್ಷಾ ತೆಗೆದುಕೊಳ್ಳಲಿಕ್ಕೆ ಹೋದ ಸಮಯದಲ್ಲಿ ಕೆಲವು ಸಾಲಿಗಳ ರಜಿಸ್ಟರನಲ್ಲಿ ೫೦ ಹುಡುಗರು ಇದ್ದು ಸರಾಸರಿ ಹಾಜರಿ ೪೦ ಅಥವಾ ೪೫ ಯಿರುತ್ತದೆ. ಪರಂತು ಸಾಲಿಯ ಪರೀಕ್ಷಾ ನೆಟ್ಟಗೆ ಉಳಿಯದಿದ್ದರೆ, ಮಾಸ್ತರರು ಈ ಊರು ಹಳ್ಳಿಊರು ಹುಡುಗರ, ನೇಮದಿಂದ ಸಾಲಿಗೆ ಬರುವದಿಲ್ಲ. ಆದರಿಂದ ಆಭ್ಯಾಸ ನೆಟ್ಟಗೆ ನಡೆಯುವದಿಲ್ಲವೆಂದು ಹೇಳುತ್ತಾರೆ. ಇದರ ಮೇಲಿಂದ ಸಾಲಿಗೆ ಹುಡುಗರು ನಿತ್ಯನೇಮದಿಂದ ಬಾರದೆಯಿದ್ದರೆ ಸರಾಸರಿ ಹಾಜರಿ ಕಡಿಮೆಯಿರಬೇಕು. ಸರಾಸರಿ ಖರೆಯಿದ್ದರೆ ದಿನಂಪ್ರತಿಯಲ್ಲಿ ಹುಡುಗರು ಬರುವುದಿಲ್ಲವೆಂಬುದು ಸುಳ್ಳು. ಆದಕಾರಣ ಹೀಗೆ ಹೇಳಿರುವ ಮಾಸ್ತರರು ಯಿಲ್ಲಾ ಸುಳ್ಳಹೇಳುತ್ತಾರೆ, ಯಿಲ್ಲಾ ಹಾಜರಿ ಖೊಟ್ಟಿಯಿಡುತ್ತಾರೆಂಬುದರಲ್ಲಿ ಏನೇನೂ ಸಂಶಯವಿಲ್ಲ. ಇದಲ್ಲದೆ ಮಾಸ್ತರರು ನಿತ್ಯ ಹಾಜರೀ ತೆಗೆದುಕೊಳ್ಳದೆ ಮನಸ್ಸಿಗೆ ಬಂದಾಗೊಮ್ಮೆ ಮನಸ್ಸಿಗೆ ಬಂದಂತೆ ಹಾಜರೀ ತೆಗೆದುಕೊಂಡು ನಂಮ ಕಡಿಗೆ ಸುಳ್ಳ ಲೆಕ್ಕಾ ಕಳಿಸುತ್ತಾರೆಂಬುದರಲ್ಲೇನೂ ಸಂಶಯವಿಲ್ಲ. ಇದರ ಹೊರ್ತು ಕೆಲವು ರಜಿಸ್ಟರಗಳನ್ನು ತಪಾಸಮಾಡಿ ನೋಡಿದರೆ ಈ ಮೇಲಿನ ಸಂಶಯಕ್ಕೆ ಕಾರಣಗಳು ಕಾಣಬರುತ್ತವೆ. ಅಂದರೆ ಮುಂದಿನ ವರ್ಷ ಪರೀಕ್ಷೆದ ಸಮಯದಲ್ಲಿ ಯಿಂಥಾ ಅಪರಾಧಗಳು ನಂಮ ದೃಷ್ಟಿಗೆ ಬಿದ್ದರೆ ನಾವು ಅವುಗಳ ವಿಷಯಕ್ಕೆ ಬಂದೋಬಸ್ತ ಮಾಡುವೆವು.

(ಶಾಲಾ ಪತ್ರಿಕೆ ೧೮೭೮ ಪುಟ ೩೪೨ – ೩೪೪)

ಆಗಲೇ ಸೂಚಿಸಿದಂತೆ ಈ ಪರಿಪತ್ರಗಳಲ್ಲಿ ಬಳಕೆಯಾಗಿರುವ ಪತ್ಯವನ್ನು ಒಂದೆಡೆ ಸರಿಸಿ ಇಲ್ಲಿ ಅಡಕವಾಗಿರುವ ಭಾಷೆಯನ್ನೇ ಪ್ರತ್ಯೇಕಿಸಿ ನೋಡಿದರೆ ಇದು ಶಿಷ್ಟ ಮತ್ತು ಆಡುನುಡಿಯ ಸಂಮಿಶ್ರಣವೆಂಬುದು ಮನವರಿಕೆಯಾಗುತ್ತದೆ. ಅದೇ ಸಂದರ್ಭದ ಸಾಹಿತ್ಯ ಇತ್ಯಾದಿಗಳಿಗೆ ಸಂಬಂಧಪಟ್ಟ ಭಾಷೆ ಸಂಪೂರ್ಣ ಶಿಷ್ಟಕ್ಕೆ ವಾಲಿರುವುದು ಕಂಡು ಬಂದರೆ, ಸರ್ಕ್ಯೂಲರ್ ಗಳ ಭಾಷೆ ಮಾತ್ರ ಈ ರೀತಿ ಉದಾಹರಣೆಗೆ ಕೆಲವು ಪದಬಳಕೆಯನ್ನು ದಿನಬಳಕೆಯ ಆಡು ಶಬ್ದಗಳು ಎಂದು ಗ್ರಹಿಸಲು ಸಾಧ್ಯವಿದೆ. ಮೆಹನತಿನಿಂದ ವಟವಟ, ಬಂದೋಬಸ್ತು, ತಜವೀಜು, ಮುಗ್ಗಲಗೇಡಿತನ, ದಶಿಯಿಂದಾ ವಹಿ, ತಪಾಸ, ಛೀಮಾರಿ, ಶಾಹಣೆತನ, ಪಗಾರ, ಮೆಹರ್ಬಾನ, ಧಾಂದಲೆ, ಗೈರಶಿಸ್ತ, ಬಹದ್ದೂರ, ಪರಂತು, ಖೊಟ್ಟಿ, ಹುಷಾರಿ, ಚೌಕಸಿ, ಹೊಲಸು, ಆಕರ್ಷಣೆ, ಕತಬಿ, ಜಬಾನಿ, ಶಮನ್ಸ, ದೋತ್ರ, ಕನ್ನಡಿಭಾಷಾಂತರ, ಆರೇಬೀಜು, ರಿಪೇರಿ, ಧಾರಕಡಿಯಿಂದಾ, ಇಂಡೇಂಟ, ಒಂದುವ್ಯಾಳೆ, ಸದರ, ಶಿಫಾರಸ್, ಮಂಜೂರ,ಭಲತೆ, ಅಗದಿ, ಹುಕಂ, ತನಕಾ, ಹೊರ್ತು, ಸಸ್ಪೆಂಡ, ನಿಖಾಲೆ, ಮಜಕೂರ, ವಿನಕಿ, ಖಾನೆಸುಮಾರಿ,ಆಸಿಸ್ಟಂಟ, ಚಾರ್ಜ, ಅಠವಡೇ, ತಪಶೀಲು, ಜಾಹೀರನಾಮೆ ಈ ರೀತಿಯಾಗಿ ಸುಮಾರು ಎಲ್ಲ ಪರಿಪತ್ರಗಳಲ್ಲಿ ಅನ್ಯದೇಶಿಯ, ಅನ್ಯಬಾಷೆಯ ಮತ್ತು ದೇಶಿಯ ಶಬ್ದಗಳು ಧಾರಳವಾಗಿ ಸಿಗುತ್ತವೆ. ಮರಾಠಿ, ಇಂಗ್ಲೀಷ, ಉರ್ದು, ಕನ್ನಡ ಹೀಗೆ ನಾಲ್ಕು ಭಾಷೆಗಳ ಮಿಶ್ರಣವಿರುವುದು ಅತ್ಯಂತ ಗಮನಾರ್ಹವಾದುದು. ಒಂದು ರೀತಿಯ ಸಾಂಸ್ಕೃತಿಕ ಸಂಕರಕ್ಕೆ ಇದು ನಿದರ್ಶನ. ವಿಧರ್ಮಿಯರು ಈ ನಾಡನ್ನು ಆಳಿದ್ದರ ಪ್ರತೀಕವೂ ಹೌದು. ಆಶ್ಚರ್ಯದ ಸಂಗತಿ ಎಂದರೆ ಕನ್ನಡಪರ ಪ್ರಚಂಡ ಹೋರಾಟಕ್ಕಿಳಿದಿದ್ದ ಚೆನ್ನಬಸಪ್ಪನವರೇ ಇವುಗಳನ್ನು ನಿಸ್ಸಂಕೋಚವಾಗಿ ಬಳಸುತ್ತಿದ್ದರೆಂಬುದು. 'ಪಗಾರ' ಎಂಬ ಮರಾಠಿ ಶಬ್ದವಂತೂ ಪರಿಪತ್ರಗಳಲ್ಲಿ ಹಲವು ಸಲ ಬಳಕೆಯಾಗಿದ್ದುದನ್ನು ನೋಡುತ್ತೇವೆ. ಇದು ಹೀಗೇಕೆ? ಎಂಬುದು ನಿಜವಾಗಿಯೂ 'ಜಿಜ್ಞಾಸೆ'ಯ ಪ್ರಶ್ನೆ. ಡೆಪ್ಯೂಟಿಯವರು ಸಮಕಾಲೀನ ಪರಿಸರದ ಪ್ರಭಾವದಿಂದ ಅಪ್ರಜ್ಞಾಪೂರ್ವಕವಾಗಿ ಇವುಗಳನ್ನು ಬಳಸುತ್ತಿದ್ದರೇ? ಅಥವಾ ಆಗಿನ

ಜನಭಾಷೆಯಲ್ಲಿಯೇ ತಮ್ಮ ವಿಚಾರಗಳನ್ನು ಹರಡಬೇಕೆಂಬ ಉದ್ದೇಶವಿತ್ತೇ? ಯಾವುದನ್ನೂ ನಿರ್ಣಯಾತ್ಮಕವಾಗಿ ಹೇಳಲು ಆಧಾರಗಳಿಲ್ಲ. ಕೆಲವರ ಪ್ರಕಾರ ಡೆಪ್ಯೂಟಿಯವರು ಪರಿಪತ್ರಗಳನ್ನು ಶುದ್ಧವಾದ ಕನ್ನಡದಲ್ಲೇ ಬರೆದು ಮಠಪತ್ರಿಕೆಗೆ ಕಳಿಸುತ್ತಿದ್ದರು. ಆದರೆ ಆ ಪತ್ರಿಕೆಗೆ ಲಿಪಿಕರೆಂದು (writers) ನಿಯುಕ್ತರಾದವರು, ಬಂದ ಇಂಥ ಪರಿಪತ್ರಗಳನ್ನು ಪರಿಷ್ಕರಿಸಿ ಬಳಸಿಕೊಳ್ಳುವ ಅಧಿಕಾರ ಹೊಂದಿದವರಾಗಿರುತ್ತಿದ್ದರು. ಅದು ಸಂಪಾದಕರ ಹಕ್ಕೂ ಆಗಿರುತ್ತದೆ. ಹೀಗಿರುವಾಗ ಲೇಖಕರು ಬರೆದು ಕಳಿಸಿದ ಮೂಲಪಾಠವೇ ವಿಕೃತಗೊಂಡು ಇಂಥ ಅಪಪಾಠಗಳು ಸೇರಿಕೊಳ್ಳುತ್ತಿದ್ದವು ಎಂಬ ವಾದವಿದೆ. ಈ ವಾದವನ್ನು ಮಾಡುವವರೇ ಇನ್ನೂ ಒಂದನ್ನು ಹೇಳುತ್ತಾರೆ. ಅದೇನೆಂದರೆ, ಕೆಲವರಂತೂ ಡೆಪ್ಯೂಟಿಯವರ ಘನತೆಗೆ ಮಸಿಬಳಿಯಲು, ಅವರ ಕನ್ನಡದ ಅನನ್ಯಪ್ರೀತಿಯನ್ನು ಬುಡಮೇಲು ಮಾಡಲು ಈ ರೀತಿಯ ಕುಚೋದ್ಯಗಳನ್ನು ಮಾಡುತ್ತಿದ್ದರು ಎಂದು.[೨] ಈ ವಿಚಾರವನ್ನು ಒಪ್ಪುವುದಕ್ಕೆ ಬಲವಾದ ಆಧಾರಗಳೇನೂ ಇಲ್ಲ. ಅಷ್ಟೇ ಅಲ್ಲ ನಿಷ್ಠುರವಾದಿ, ಹಠವಾದಿ ಎಂದೇ ಗುರುತಿಸಬಹುದಾದ ಚೆನ್ನಬಸಪ್ಪನವರು ತಮ್ಮ ಬರಹದಲ್ಲಿ ಇಷ್ಟೊಂದು ಅಧಿಕಪ್ರಸಂಗತನವನ್ನು ಸಹಿಸಿಕೊಳ್ಳುವುದು ಸಾಧ್ಯವೇ ಇಲ್ಲ. ಏನೋ ಕಣ್ತಪ್ಪಿನಿಂದ ನಾಲ್ಕಾರು ಪರಿಪತ್ರಗಳಲ್ಲಿ ಇವು ನುಸುಳಿರಬಹುದು. ಆದರೆ ಅನ್ಯಭಾಷೆಯ ಶಬ್ದಗಳು ಅವರ ಬಹುತೇಕ ಪರಿಪತ್ರಗಳಲ್ಲೆಲ್ಲಾ ಚೆದುರಿಕೊಂಡಿರುವುದರ ಹಿನ್ನೆಲೆಯಲ್ಲಿ ಇನ್ನೂ ಮುಕ್ತಮನಸ್ಸಿನ ಚರ್ಚೆ ಅವಶ್ಯವೆನಿಸುತ್ತದೆ.

ಪರಿಪತ್ರಗಳ ವಸ್ತುವೈವಿಧ್ಯವನ್ನು ಕಂಡುಕೊಳ್ಳುವುದಕ್ಕಾಗಿ ಕೆಲವು ಪರಿಪತ್ರಗಳ ಮುಖ್ಯಾಂಶಗಳನ್ನು ಪರಿಚಯಿಸಿಕೊಳ್ಳುವ ಅವಶ್ಯಕತೆಯಿದೆ. ಅಂದು ಶಿಕ್ಷಣಕ್ಷೇತ್ರದಲ್ಲಿ ರಾರಾಜಿಸುತ್ತಿದ್ದ ಬಹುಮುಖಸಮಸ್ಯೆಗಳು ಇಲ್ಲಿ ವಿದಿತವಾಗಿವೆ :

"ಕಾಲಕುಂದ್ರಿ, ಸತ್ತಿಗೇರಿ, ಶೇಡಬಾಳ ಮತ್ತು ಅಂಕಲಗಿ ಇಲ್ಲಿಯ ಮಾಸ್ತರರು ರಜಿಸ್ಟರ ಬುಕ್ಕುಗಳನ್ನು ತಿಳಿದು ತಿಳಿದು ತಪ್ಪು ಇಟ್ಟಿದ್ದು ವಾರ್ಷಿಕ ಪರೀಕ್ಷಾದ ಸಮಯದಲ್ಲಿ ಕಂಡು ಬಂದದರಿಂದ ...... ಅವರನ್ನೆಲ್ಲಾ ಆರಾರ ರೂಪಾಯಿ ಶಿಕ್ಷಕ (ಕಡಿಮೆ ಪಗಾರದ ಮೇಲೆ) ಕೆಲಸದ ಮೇಲೆ ನೇಮಿಸುವುದರಲ್ಲಿ ಬಂದಿದೆ..... ಯಾವತ್ತೂ ಮಾಸ್ತರರು ಲಕ್ಷಪೂರ್ವಕ ಓದಿನೋಡಿ ಬಹು ಹುಷಾರಿಯಿಂದ ಕೆಲಸ ನಡಿಸಬೇಕು.

- (ಶಾಲಾಪತ್ರಿಕೆ - ೧೮೬೮, ಮಾರ್ಚ, ಪುಟ. ೨೭೫-೨೭೬)

ಉದ್ದೇಶಪೂರ್ವಕವಾಗಿ (ತಿಳಿದೂ ತಿಳಿದೂ) ಮಾಡುವ ತಪ್ಪುಗಳಾವೂ ಕ್ಷಮಾರ್ಹವಲ್ಲ. ಅಂಥವುಗಳು ಕಾನೂನಿಗೆ ಮಾಡುವ ಅವಮಾನ. ಈ ರೀತಿಯ ವರ್ತನೆಗೆ ಶಾಸ್ತಿಯಾಗಲೇ ಬೇಕು ಎಂಬ ತತ್ವಬದ್ಧರಾದ ಡೆಪ್ಯೂಟಿಯವರು ಯಾರಿಗಾದರೂ ಒಬ್ಬರಿಗೆ ದಯೆ ದಾಕ್ಷಿಣ್ಯ ತೋರಿದರೆ ಸಾಕು, ಅದರ ದುರ್ಲಾಭಪಡೆಯಲು ಜನ ತುದಿಗಾಲಮೇಲೆ ನಿಂತಿರುತ್ತಾರೆ. ಇದು ಡೆಪ್ಯೂಟಿಯವರ ಪ್ರತಿಯೊಂದು ಪರಿಪತ್ರದ ಹಿಂದೆ ಅಡಗಿರುವ ರಹಸ್ಯ. ಅವರು ಸಕಾಲಕ್ಕೆ ಹೊರಡಿಸುತ್ತಿದ್ದ ಈ 'ಶೈಕ್ಷಣಿಕ ಸಂವಿಧಾನ'ಗಳು ತಪ್ಪಿತಸ್ಥರಿಗೆ ಪಾಠಗಳಾದರೆ, ಮುಂದಿನವರಿಗೆ ಎಚ್ಚರಿಕೆಯ ನೋಟೀಸುಗಳಾಗಿರುತ್ತಿದ್ದವು.

"..... ಯಿತ್ತಕಡಿಯ ನೋಟೀಸುಗಳನ್ನು ಮತ್ತು ಸರ್ಕ್ಯೂಲರಗಳನ್ನು ..... ಕೆಲವರು ತಮ್ಮ ಕೈಕೆಳಗಿರುವ ಶಿಕ್ಷಕರಿಗೆ ..... ತಿಳಿಹಿಸುವುದಿಲ್ಲಾ. ಇದರಿಂದ ಸಾಲಿಗಳ ಕೆಲಸ ನೆಟ್ಟಗೆ

---

೨. ನಾನು ಕ್ಷೇತ್ರಕಾರ್ಯಕ್ಕೆ ಹೋದ ಸಂದರ್ಭದಲ್ಲಿ ಪ್ರಸ್ತುತ ವಿಚಾರವನ್ನು ಕುರಿತು ಪ್ರಶ್ನಿಸಿದಾಗ ಟ್ರೇನಿಂಗ್ ಕಾಲೇಜಿನ ಶಿಕ್ಷಕರೂ, ಜೀವನ ಶಿಕ್ಷಣ ಪತ್ರಿಕೆಯ ಸಧ್ಯದ ಸಹ ಸಂಪಾದಕರೂ ಆದ ಶ್ರೀ ರಾಮಚಂದ್ರ ಪಾಟೀಲರು ಮೇಲಿನಂತೆ ಹೇಳಿದರು.

ನಡೆಯುವುದಿಲ್ಲಾ. ಆದಕಾರಣ ...... ಸರ್ಕ್ಯೂಲರಗಳನ್ನು ನೆಟ್ಟಗೆ ಓದಿ ನೆನಪಿನಲ್ಲಿಡಬೇಕು. ಮತ್ತು ಮೇಲಿಂದ ಮೇಲೆ ಶಿಕ್ಷಕರಿಗೆ ತಿಳುಹಿಸುತ್ತಿರಬೇಕು... ಪರೀಕ್ಷದ ಸಮಯದಲ್ಲಿ ಚೌಕಾಸಿ ಮಾಡುವೆವು"

- (ಶಾಲಾಪತ್ರಿಕೆ - ೧೮೭೮ ಅಕ್ಟೋಬರ).

ಒಬ್ಬ ಸಮರ್ಥ ಆಡಳಿತಗಾರನಾದವನು ತಾನು ಬಯಸುವ ಸುಧಾರಣೆಯಾಗಬೇಕಾದರೆ ತನ್ನ ವಿಚಾರಗಳು ಸಂಬಂಧಿಸಿದವರಿಗೆ ತಲುಪುತ್ತಿವೆಯೋ ಇಲ್ಲವೋ ಎಂಬುದನ್ನು ಗೊತ್ತುಪಡಿಸಿಕೊಳ್ಳಬೇಕಾಗುತ್ತದೆ. ತಲುಪುತ್ತಿಲ್ಲವೆಂದು ತಿಳಿದರೆ ಆ ಬಗ್ಗೆಯೂ ಕ್ರಮ ಕೈಕೊಳ್ಳಬೇಕಾಗುತ್ತದೆ. ಈ ಪರಿಪತ್ರ ಅಂಥದಕ್ಕೊಂದು ಉದಾಹರಣೆ ಮಾತ್ರ. ಡೆಪ್ಯೂಟಿಯವರ ಆಡಳಿತಾತ್ಮಕ ಪ್ರಜ್ಞೆಗೆ ಇಲ್ಲಿ ಬೇಕಾದಷ್ಟು ಪುರಾವೆಗಳಿವೆ.

"ಕೆಲವು ಮಾಸ್ತರರು ಕಾರಣವಿಲ್ಲದೆ ಕತಬಿ, ಜಬಾನಿ ಮುಂತಾದವುಗಳ ಮೇಲೆ ಸಾಕ್ಷಿಯನ್ನು ಹಾಕಿ (ಆ) ನಿಮಿತ್ಯವಾಗಿ ಕಚೇರಿಗೆ ಹೋಗುವರೋ ಅವರನ್ನು ಕೆಲಸದಿಂದ ತೆಗೆಯಬೇಕಾಗುವುದು.

- (ಶಾಲಾಪತ್ರಿಕೆ ೧೮೭೮ ನವ್ಹೆಂಬರ)

ಶಿಕ್ಷಕರು ತಮ್ಮ ಕರ್ತವ್ಯವನ್ನು ಕಡೆಗಣಿಸಿ ಇಲ್ಲಸಲ್ಲದ ನೆಪಹುಡುಕಿಕೊಂಡು ಕೆಲಸಗಳ್ಳರಾಗುವುದನ್ನು ಡೆಪ್ಯೂಟಿಯವರು ಗಂಭೀರವಾಗಿಯೇ ಪರಿಗಣಿಸುತ್ತಿದ್ದರು. ಅವರ ದೃಷ್ಟಿಯಲ್ಲಿ ಪ್ರಥಮ ಆದ್ಯತೆ, ತಾವು ದುಡಿಯುತ್ತಿದ್ದ ಕ್ಷೇತ್ರಕ್ಕೇ ಎಂಬುದು. ಅಲ್ಲದೆ ಇನ್ನು ಕೆಲವು ಶಿಕ್ಷಕರು ತಮ್ಮ ಕೈಯೊಳಗಿನ ವಿದ್ಯಾರ್ಥಿಗಳನ್ನು ತಮ್ಮ ಮನೆಗೆಲಸಗಳಿಗೆ ಅಂದರೆ ಪೇಟೆಯಿಂದ ಕಾಳುಕಡಿ ಹೊರಿಸಿಕೊಂಡು ಬರುವುದು, ನೀರು ತರಿಸುವುದು, ಬಟ್ಟೆಗಳನ್ನು ಒಗೆಯಹಚ್ಚುವುದು, ಇತ್ಯಾದಿಗಳಿಗೆ ಬಳಸಿಕೊಳ್ಳುವುದು ತಮ್ಮ ಹಕ್ಕು ಎಂದು ಭಾವಿಸಿ ವರ್ತಿಸುತ್ತಿದ್ದರು. ಇಂಥವರನ್ನೂ ತರಾಟೆಗೆ ತೆಗೆದುಕೊಳ್ಳದೆ ಡೆಪ್ಯೂಟಿಯವರು ಸುಮ್ಮನಿರುತ್ತಿರಲಿಲ್ಲ.

ಲಭ್ಯವಿರುವ, ಶಾಲಾಪತ್ರಕಗಳಲ್ಲಿ ಪ್ರಸಿದ್ಧಿಯಾಗಿರುವ ಈ ಪರಿಪತ್ರಗಳನ್ನೆ ಗಮನದಲ್ಲಿಟ್ಟುಕೊಂಡು ನೋಡುವಾಗ ಡೆಪ್ಯೂಟಿಯವರು ಒಬ್ಬ 'ನ್ಯಾಯನಿಷ್ಠುರ' ಅಧಿಕಾರಿಯಾಗಿದ್ದರೆಂಬುದಕ್ಕೆ ಅನುಮಾನವೇ ಉಳಿಯುವುದಿಲ್ಲ. ಅವರ ಒಲವು ಇರುವುದೆಲ್ಲ ಕನ್ನಡ-ಕನ್ನಡಿಗರು ಗೌರವಾರ್ಹವಾಗಿ ಬೆಳೆಯಬೇಕು, ಖಿಲಗೊಳ್ಳುತ್ತಿದ್ದ ಈ ಕನ್ನಡಿಗರ ಸಾಂಸ್ಕೃತಿಕ ಪರಂಪರೆಗೆ ಮತ್ತೆ ನ್ಯಾಯಯುತವಾದ ಸ್ಥಾನ ದಕ್ಕಬೇಕೆಂಬುದಾಗಿತ್ತು. ಹೀಗಾಗಿ ಶಿಕ್ಷಣಕ್ಷೇತ್ರ ಅವರ ಕೈಗೆಸಿಕ್ಕದ್ದೇ ಕನ್ನಡಕ್ಕೆ, ಕನ್ನಡಿಗರಿಗೆ ವರವಾಯಿತು. ಇಲ್ಲಿ ಸಿಕ್ಕ ಅವಕಾಶವನ್ನೆಲ್ಲಾ ಅವರು ತಮ್ಮ ಕನ್ನಡಪರ ಹಂಬಲವನ್ನು ಈಡೇರಿಸಿಕೊಳ್ಳುವುದಕ್ಕಾಗಿಯೇ ಬಳಸಿಕೊಂಡರು. ಇದರ ವಸ್ತುಸ್ಥಿತಿಯನ್ನು ತಿಳಿಸಿಕೊಡಲು ಈ ಕೆಲವು ಮುಖ್ಯಾಂಶಗಳು ಸಮರ್ಥವಾಗಿವೆ :

೧. ಏನೇ ಬರೆದರೂ ಕನ್ನಡದಲ್ಲೇ ಬರೆಯಬೇಕು.

೨. ಕಲಿಸುವುದನ್ನೆಲ್ಲ ಕನ್ನಡದಲ್ಲೇ ಕಲಿಸಬೇಕು.

೩. ಕನ್ನಡದ ಅಂಕಿಸಂಖ್ಯೆಗಳನ್ನೇ ಬಳಸಬೇಕು.

೪. ಕನ್ನಡವನ್ನು ಓದುವಾಗ ಬರೆಯುವಾಗ ಸ್ಖಾಲಿತ್ಯಗಳಾಗದಂತೆ ಎಚ್ಚರ ವಹಿಸಬೇಕು.

೫. ವಿದ್ಯಾರ್ಥಿಗಳಿಗೆ ಬಹುಮಾನ ರೂಪದಲ್ಲಿ ಕೊಡುವ ಪುಸ್ತಕ ಮೊದಲು ಮಾಡಿ ಪತ್ರಗಳ ವರೆಗೆ ಕನ್ನಡ ಪುಸ್ತಕಗಳೇ ಇರಬೇಕು.

೬. ಕನ್ನಡವನ್ನು ಓದುವಾಗ ಅಲ್ಲಿಯ ಅರ್ಥ ಭಾವಗಳನ್ನು ಗ್ರಹಿಸಿ ಓದುವುದನ್ನು ಅಭ್ಯಾಸಮಾಡಿಕೊಳ್ಳಬೇಕು.

೭. ಶಿಕ್ಷಕರು ಅಕ್ಷರ ಕಲಿಸುವುದರ ಜೊತೆಗೆ ವಿದ್ಯಾರ್ಥಿಗಳಲ್ಲಿ ಶಿಸ್ತು, ನಿಯಮಿತತನಗಳನ್ನು ರೂಢಿಸಬೇಕು.

೮. ಶಿಕ್ಷಕರಾದವರು ವಿದ್ಯಾರ್ಥಿಗಳ ಮೇಲೆ ಸುಪರಿಣಾಮ ಬೀರುವಂತಹ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಬೇಕು.

೯. ಶಿಕ್ಷಕರು ತಮ್ಮ ವೈಯಕ್ತಿಕ ದೌರ್ಬಲ್ಯಗಳನ್ನು ಮರೆಮಾಚುವುದಕ್ಕೋ ಅಥವಾ ಹಿತಾಸಕ್ತಿಗಳನ್ನು ಸಾಧಿಸಿಕೊಳ್ಳುವುದಕ್ಕೋ ಅಧಿಕಾರಿಗಳನ್ನು ಹೊಗಳುವ ಭಟ್ಟಂಗಿಗಳಾಗಬಾರದು.

೧೦. ಸೇವಾನಿಷ್ಠೆ, ಸೌಜನ್ಯ, ಸಮಯಪಾಲನೆ, ಕ್ರಿಯಾಶೀಲ ಮನೋಧರ್ಮ, ಸಮಯಪ್ರಜ್ಞೆ, ನಿಯಮಾನುಷ್ಠಾನಗುಣ, ವೃತ್ತಿಗೌರವಗಳನ್ನು ಬೆಳೆಸಿಕೊಳ್ಳುವ ಶಿಕ್ಷಕನು ಮಾತ್ರ ತನ್ನ ಕ್ಷೇತ್ರಕ್ಕೆ ನ್ಯಾಯಸಲ್ಲಿಸಬಲ್ಲ.

ಹೀಗೆ ಡೆಪ್ಯೂಟಿಯವರ ಚಿಂತನೆಗಳು ವಿಸ್ತೃತಗೊಳ್ಳುತ್ತಲೇ ಹೋಗುತ್ತವೆ.

ಬೆಳಗಾವಿ, ಸವದತ್ತಿ, ಹುಬ್ಬಳ್ಳಿ, ಸವಣೂರ, ಮುಧೋಳ, ನರೇಂದ್ರ, ಧಾರವಾಡ ಹೀಗೆ ತಾವು ಎಲ್ಲೆಲ್ಲಿ ಕ್ಯಾಂಪು ಮಾಡುತ್ತಾರೋ ಆಯಾ ಸ್ಥಳಗಳಿಂದಲೇ ಪರಿಪತ್ರಗಳನ್ನು ಹೊರಡಿಸುತ್ತ ತಮ್ಮ ಮೊನಚಾದ ಭಾಷೆಯಿಂದ ಅವುಗಳ ಪರಿಣಾಮಗಳನ್ನು ಹೆಚ್ಚಿಸುತ್ತಿದ್ದರು. ಉದಾಹರಣೆಗೆ, ಈ ನೋಟೀಸು ಕಂಡ ದಿವಸದಿಂದ, ಯೋಗ್ಯ ತಜವೀಜ ಮಾಡಲಾಗುವುದು, ಇದು ಬಹಳ ಗೈರಶಿಸ್ತು, ಇದು ಬಹಳ ಮುಗ್ಗಲಗೇಡಿತನವು, ಮಾಸ್ತರನಿಗೂ ವರ್ಗದ ಶಿಕ್ಷಕನಿಗೂ ದಂಡ ಮಾಡಲಾಗುವುದು, ಈ ಮಾಸ್ತರರಿಗೆ ನಾವು ಛೀಮಾರಿ ಹಾಕುವವರಿದ್ದೇವೆ. ಸದರ ಮಾಸ್ತರನ ಕೆಲಸದಿಂದ ದೂರಮಾಡಲಾಗಿದೆ, ಈ ವಿಷಯಕ್ಕೆ ನಾವು ನೆಟ್ಟಗೆ ಬಂದೋಬಸ್ತ ಮಾಡುವೆವು, ಹುಷಾರಿಯಿಂದ ಕೆಲಸನಡಿಸಬೇಕು, ಕೆಲಸದಿಂದ ತೆಗೆಯಬೇಕಾಗುವುದು, ಅವರಿಗೆ ಶಿಕ್ಷೆ ಮಾಡುವೆವು, ಇದೇ ಶಿಕ್ಷೆಗೆ ಪಾತ್ರರಾಗುವರು, ಮಾಸ್ತರನನ್ನು ಶಾಲಾ ಖಾತೆಯಿಂದ ತೆಗೆದಿದ್ದೇನೆ, ಎಂಬ ನುಡಿಗಟ್ಟುಗಳನ್ನು ಪರಿಶೀಲಿಸಬಹುದು. ಕಾಲಾಂತರದಲ್ಲಿ ಇವರ ಪರಿಶ್ರಮದ ಪರಿಣಾಮ ಹೇಗಾಯಿತೆಂಬುದನ್ನು ಮ.ಗು.ಹಂದ್ರಾಳ ಅವರು "ಚೆನ್ನಬಸಪ್ಪನವರ ಭಗೀರಥ ಪ್ರಯತ್ನಗಳ ಫಲವಾಗಿ ಕನ್ನಡ ಪ್ರಾಥಮಿಕ ಶಿಕ್ಷಣದ ಪ್ರಸಾರವಾಯಿತು. ೧೮೫೫-೫೬ ನೇ ಸಾಲಿನಲ್ಲಿ ಬೆಳಗಾವಿ, ಧಾರವಾಡ, ವಿಜಾಪೂರ ಜಿಲ್ಲೆಗಳಲ್ಲಿ ಅನುಕ್ರಮವಾಗಿ ೧೩, ೧೨, ೯ ಕನ್ನಡ ಶಾಲೆಗಳಿದ್ದವು. ಆದರೆ ೧೮೮೭ (ಡೆಪ್ಯೂಟಿಯವರು ನಿಧನರಾಗುವ ಹೊತ್ತಿಗೆ)ರಲ್ಲಿ ಅವುಗಳ ಸಂಖ್ಯೆ ಅನುಕ್ರಮವಾಗಿ ೧೬೬, ೩೪೧, ೧೫೦ ಕ್ಕೆ ಏರಿತು"[೩] ಎಂದು ಜಿಲ್ಲಾವಾರು ಅಂಕಿಸಂಖ್ಯೆಗಳನ್ನು ಕೊಟ್ಟು ಅಭ್ಯುದಯವನ್ನು ಬೆರಳಿಟ್ಟು ತೋರಿಸುತ್ತಾರೆ. ಅವರ ಕಾರ್ಯ ವೈಖರಿಗೆ ದೊರಕಿದ ಪ್ರಶಸ್ತಿ

೩. ಹಂದ್ರಾಳ ಮ.ಗು. : ಕನ್ನಡದ ದೀಪ : ಡೆಪ್ಯೂಟಿ ಚೆನ್ನಬಸಪ್ಪನವರ ಜೀವನ - ಸಾಧನೆ - ವ್ಯಕ್ತಿತ್ವ - ಪುಟ.೩೦.

ಎನ್ನುವಂತೆ ಶಾಲಾ ಪತ್ರಕದಲ್ಲಿ ಪ್ರಕಟವಾದ ಸಂಗತಿಯೊಂದು ಹೀಗಿದೆ : "ಮೆ|| ಎಜ್ಯುಕೇಶನಲ ಇನಸ್ಪೆಕ್ಟರ ದೊರೆಗಳವರು ಮೂರು ತಿಂಗಳ ಹಕ್ಕಿನ ರಜೆ ತಕ್ಕೊಂಡು ಹೋದ ಮೇಲೆ ಅವರ ಕೆಲಸಕ್ಕೆ ಧಾರವಾಡದ ಡಿಪುಟಿ ಇನಸ್ಪೆಕ್ಟರರಾದ ರಾವಸಾಹೇಬ ಚೆನಬಸಪ್ಪ ಬಸಲಿಂಗಪ್ಪ ಧಾರವಾಡ ಇವರನ್ನು .... ನೇಮಿಸಿದ ಬಗ್ಗೆ ಸರಕಾರಿ ಗ್ಯಜೇಟಿನಲ್ಲಿ ಪ್ರಸಿದ್ಧವಾಗಿರುತ್ತದೆ"[೪] ಇದನ್ನು ನೋಡುವಾಗ, ಒಂದು ವೇಳೆ ಚೆನ್ನಬಸಪ್ಪನವರು ಇನ್ನಷ್ಟು ಕಾಲ ಬದುಕಿದ್ದರೆ ಅವರು ನಿಸ್ಸಂದೇಹವಾಗಿ ಎಜ್ಯುಕೇಶನಲ್ ಇನ್ಸಸ್ಪೆಕ್ಟರರಾಗಿ ಇನ್ನೂ ವಿಶೇಷವಾದ ಕಾರ್ಯಗಳನ್ನು ಮಾಡುವುದು ಸಾಧ್ಯವಿತ್ತು. ಇದು ಡೆಪ್ಯೂಟಿಯಾಗಿ ಚೆನ್ನಬಸಪ್ಪನವರು ಸಾಧಿಸಿದ ಸಾಧನೆಯ ಸ್ವರೂಪ. ಹೀಗಾಗಿ ಕನ್ನಡ ಜನಕೋಟಿ ಎಂದೆಂದೂ ಅವರನ್ನು ಕೃತಜ್ಞತೆಯಿಂದ ನೆನೆಯುವಂತಾಗಿದೆ.



೪. ಶಾಲಾಪತ್ರಕ : ಪುಸ್ತಕ ೧೨, ಸಂಚಿಕೆ ೯. ೧೮೭೭ ಪುಟ ೪೮೧.

## ಲಿಂಗಾಯತ ಬೋರ್ಡಿಂಗ್ ಸಂಸ್ಥಾಪಕರು

ನಮ್ಮ ದೇಶದ ಶ್ರೇಣೀಕೃತ ಸಮಾಜವ್ಯವಸ್ಥೆಯಲ್ಲಿ ಮೇಲುವರ್ಗದವರಿಗೇ ಹಿರಿಯ ಸ್ಥಾನ. ಯಾಕೆಂದರೆ 'ಕಂಠಪಾಠ ಪರಂಪರೆ'ಯನ್ನು ಅತ್ಯಂತ ಎಚ್ಚರದಿಂದ ಉಳಿಸಿಕೊಂಡು, ಬೆಳೆಸಿಕೊಂಡು ಬಂದ ಈ ಸಮಾಜ ಅಕ್ಷರಗಳನ್ನು ಕ್ಷತ್ರಿಯರ ಕತ್ತಿಗಿಂತಲೂ ಪರಿಣಾಮಕಾರಿಯಾಗಿ ಬಳಸುತ್ತ ಬಂದಿತು. ಹೀಗಾಗಿ ಇನ್ನುಳಿದ ಮೂರೂ ವರ್ಗಗಳು ಸಹಜವಾಗಿಯೇ ಅಕ್ಷರಾಭ್ಯಾಸದಿಂದ ವಂಚಿತವಾಗುತ್ತ ಬಂದದ್ದು, ಪರಿಸ್ಥಿತಿಯ ಅನಿವಾರ್ಯತೆಯಾಗಿತ್ತು. ಇದರಿಂದಾಗಿಯೇ ಸಮಾಜದ ಎಲ್ಲಾ ರಂಗಗಳಲ್ಲಿಯೂ ಬ್ರಾಹ್ಮಣ ಸಮಾಜವೇ ಮುಂಚೂಣಿಯಲ್ಲಿ ನಿಲ್ಲುತ್ತ ಬಂದಿತು. ನೌಕರಶಾಹಿಗಳೆಂದರೇ ಬ್ರಾಹ್ಮಣರು; ಅವರೇ ದಕ್ಷರು ಎಂಬಂತಹ ಮನೋಭಾವ ಎಲ್ಲ ಆಡಳಿತವರ್ಗದವರಲ್ಲಂತೂ ಬೆಳೆಯಿತು. ಪುಣೆಯ ಬ್ರಾಹ್ಮಣರಾದ ಪೇಶ್ವೆಯರು ಕನ್ನಡನಾಡನ್ನು ಆಳುತ್ತಿದ್ದ ಸಂದರ್ಭದಲ್ಲೂ ಅದು ಇನ್ನಷ್ಟು ಉಚ್ಛ್ರಾಯ ಸ್ಥಿತಿಗೇರಿತು. 'ಕಾರ್ಯಾಂಗದ' ಎಲ್ಲ ಮುಖ್ಯವಾದ ಹುದ್ದೆಗಳೆಲ್ಲ (Key posts) ಅವರಿಗೇ ಮೀಸಲು. ಹೀಗಾದಾಗ ಅಬ್ರಾಹ್ಮಣಸಮಾಜದಲ್ಲಿ ಕೀಳರಿಮೆಯ ಮನೋಭಾವ ಇನ್ನೂ ಹೆಚ್ಚುತ್ತಲೇ ಹೋಯಿತು. ಸಾಕಷ್ಟು ಸಾಂಪತ್ತಿಕ ಬಲವನ್ನು ಹೊಂದಿದ ಲಿಂಗಾಯತ ಸಮಾಜವೂ ಇದರಿಂದ ಹೊರತಾಗಲಿಲ್ಲ. ನಿಜಾಮರ, ಪೇಶ್ವೆಯರ, ಆಂಗ್ಲರ ಆಳ್ವಿಕೆಯಲ್ಲೂ ಇದು ಮುಂದುವರೆಯಿತು.

ಬೆಳಗಾವಿ ಜಿಲ್ಲೆಯ ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರರಾಗಿ ಕಾರ್ಯನಿರ್ವಹಿಸುತ್ತಿದ್ದ ಚೆನ್ನಬಸಪ್ಪನವರು ಲಿಂಗಾಯತ ಸಮಾಜ ಹಿಂದೆ ಬೀಳುತ್ತಿರುವುದಕ್ಕೆ ಶಿಕ್ಷಣ ಪಡೆದು, ಬೇರೆ ಬೇರೆ ರಂಗಗಳಲ್ಲಿ ಒಳ್ಳೆಯ ಹುದ್ದೆಗಳನ್ನು ಸಂಪಾದಿಸಿಕೊಳ್ಳುವಲ್ಲಿ ವಿಫಲರಾಗುತ್ತಿದುದೇ ಕಾರಣವೆಂಬುದನ್ನು ಮನಗಂಡು ಸಾಮಾಜಿಕ ಅಸಮಾನತೆಯನ್ನು (Social disparity) ಸರಿದೂಗಿಸಲು ಡೆಪ್ಯೂಟಿಯವರು ಕೈಕೊಂಡ 'ಲಿಂಗಾಯತ ಬೋರ್ಡಿಂಗ್' ಸ್ಥಾಪನೆಯ ಕಾರ್ಯವೈಖರಿ ಮೆಚ್ಚತಕ್ಕದ್ದು. ಅಂದು ಅವರಿಗೆ ಹೊಳೆದ ಈ ವಿಚಾರ ಇಡೀ ಕರ್ನಾಟಕದಲ್ಲೇ ಹೊಚ್ಚಹೊಸದಾಗಿತ್ತಷ್ಟೇ ಅಲ್ಲ, ಮುಂದೆ ಕರ್ನಾಟಕದಾದ್ಯಂತ ಉಚಿತ ಪ್ರಸಾದನಿಲಯಗಳ ಹುಟ್ಟಿಗೆ ನಾಂದಿಯಾಯಿತು. ತಮಗೆ ಹೊಳೆದ ಆ ವಿಚಾರವನ್ನು ಅವರು ಎಷ್ಟು ಕಷ್ಟಪಟ್ಟು ಕಾರ್ಯರೂಪಕ್ಕೆ ತಂದರೆಂಬುದೂ, ಅದರ ಹಿಂದೆ ಎಂಥ ಮಹೋದ್ದೇಶ ಅಡಕವಾಗಿತ್ತೆಂಬುದೂ ಅರ್ಥವಾದರೆ ಈ ಮಾದರಿಯಲ್ಲಿ ಅಲ್ಲಲ್ಲಿ ವಿದ್ಯಾರ್ಥಿ ಪ್ರಸಾದನಿಲಯಗಳನ್ನು ತೆರೆದ ಇಡೀ ಅಬ್ರಾಹ್ಮಣ ಸಮಾಜವೇ ಅವರಿಗೆ ಋಣಿಯಾಗಿರಬೇಕಾಗುತ್ತದೆ. ಯಾಕೆಂದರೆ, ಪರಕೀಯರ ದಾಳಿಗಳಿಂದ ಹೆಚ್ಚು ಗಾಸಿಗೊಂಡವರು

ಬ್ರಾಹ್ಮಣೇತರ ಸಮಾಜದವರೇ ಈ ಹೊಡೆತದಿಂದ ಚೇತರಿಸಿಕೊಳ್ಳಲು ಶಿಕ್ಷಣವೊಂದರಿಂದಲೇ ಸಾಧ್ಯವಿತ್ತು. ಈ ಸೂಕ್ಷ್ಮವನ್ನು ಗ್ರಹಿಸಿ ಲಿಂಗಾಯತ ಸಮಾಜದವರ ಶೈಕ್ಷಣಿಕ ಅಭಿಪ್ಸೆಯನ್ನು ಪರಿಣಾಮಕಾರಿಯಾಗಿ ಈಡೇರಿಸಲು ಬೆಳಗಾವಿಯಲ್ಲಿ ಲಿಂಗಾಯತ ಬೋರ್ಡಿಂಗ್ ಸ್ಥಾಪನೆಯ ವಿಚಾರದಲ್ಲಿ ಚೆನ್ನಬಸಪ್ಪನವರು ಕಾರ್ಯೋನ್ಮುಖರಾದುದು ಚರಿತಾರ್ಹ ಘಟನೆಯಾಗಿದೆ. ಇದಕ್ಕೆ ಹಿನ್ನೆಲೆಯಾದ ಮತ್ತು ಚೆನ್ನಬಸಪ್ಪನವರ ವ್ಯಕ್ತಿತ್ವವನ್ನು ಇನ್ನೂ ಹೆಚ್ಚು ಸ್ಪಷ್ಟವಾಗಿ ಅರ್ಥೈಸಿಕೊಳ್ಳಲು ಪೂರಕವಾದ ಕೆಲವು ಪ್ರಸಂಗಗಳು ಹೀಗಿವೆ :

ಆ ಕಾಲದಲ್ಲಿ (೧೮೬೮) ಚಿತ್ರದುರ್ಗದ ಜಗದ್ಗುರುಗಳನ್ನು (ಮಹಾಲಿಂಗಸ್ವಾಮಿಗಳು) ಎದುರು ಹಾಕಿಕೊಳ್ಳುವುದೆಂದರೆ, ಪರಶಿವನನ್ನೇ ಕೆಣಕಿದಷ್ಟು ಸಾತ್ವಿಕ ಭಯ. ಆಗಿನ ಇಡೀ ವೀರಶೈವ ಸಮಾಜವೇ ಅವರನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದ ಸಂದರ್ಭ. ನೂರಿಪ್ಪತ್ತು ಸಂವತ್ಸರಗಳ ಹಿಂದೆ ಮೂವತ್ತು ನಾಲ್ವತ್ತು ಸಾವಿರ ಖರ್ಚುಮಾಡಿ ಉಳವೀಕ್ಷೇತ್ರದಲ್ಲಿ 'ಗಣಾರಾಧನೆ' ನೆರವೇರಿಸಿದ ಮಹಾಸ್ವಾಮಿಗಳ ಸಾಮರ್ಥ್ಯ ಅರಿವಿಗೆ ಬರುತ್ತದೆ. ಸಮಾಜದ ಮುಖಂಡರೆಲ್ಲ ಸೇರಿ 'ಪ್ರಸ್ತುತ' ಧಾರ್ಮಿಕಕಾರ್ಯವನ್ನು ಒಮ್ಮತದಿಂದ ಬೆಂಬಲಿಸುತ್ತಿದ್ದ ಸನ್ನಿವೇಶದಲ್ಲಿ ಚೆನ್ನಬಸಪ್ಪನವರು ಮಾತ್ರ ಅದನ್ನು ವಿರೋಧಿಸುತ್ತಾರೆ. ಸ್ವಾಮಿಗಳ 'ಸಂಕಲ್ಪ'ವನ್ನೇ ಅರ್ಥಹೀನ ಎಂದು ಭಾವಿಸಿ ತೀವ್ರವಾಗಿ ಪ್ರತಿಭಟಿಸುತ್ತಾರೆ. ಯಾವುದೇ ಮುಚ್ಚುಮರೆಯಿಲ್ಲದೆ ಅವರ ಕಾರ್ಯಾಚರಣೆಗಳನ್ನು ತಿರಸ್ಕರಿಸುತ್ತಾರೆ. ಈ ಬಗೆಗಿನ ಚೆನ್ನಬಸಪ್ಪನವರನ್ನು ಕುರಿತ ಅಭಿಪ್ರಾಯವೊಂದು ಹೀಗಿದೆ : .... ಅವರು ಒಮ್ಮೆ ಮಹಾಸ್ವಾಮಿಗಳ ದರ್ಶನಕ್ಕೆ ಹೋದಾಗ ನಿರರ್ಥಕ ವೆಚ್ಚಮಾಡುವುದರ ಅನವಶ್ಯಕತೆಯನ್ನೂ ಇಂಗ್ಲೀಷ ಶಿಕ್ಷಣದ ಅವಶ್ಯಕತೆಯನ್ನೂ ಒತ್ತಿ ಹೇಳಿದರು. ಮಹಾಸ್ವಾಮಿಗಳ ಹತ್ತಿರದ ಭಕ್ತರಿಗೆ ಈ ವಿಚಾರ ಹಿಡಿಸಲಿಲ್ಲ. "ಅವರು ಮ್ಲೇಂಛ ಭಾಷೆಯನ್ನು ಲಿಂಗಾಯತರಿಗೆ ಕಲಿಸಿ ಚೆನ್ನಬಸಪ್ಪನವರು ಧರ್ಮವನ್ನು ಕೆಡಿಸಿಬಿಡುವರು" ಎಂದು ನುಡಿದರು. ಚೆನ್ನಬಸಪ್ಪನವರ ಹಿತನುಡಿ ಫಲಿಸಲಿಲ್ಲ[೧] - ಈ ಸಂಗತಿಯನ್ನು ನೋಡುವಾಗ ಚೆನ್ನಬಸಪ್ಪನವರು ಉಳವೀ ಗಣಾರಾಧನೆಗಿಂತ ಮೊದಲೇ ಸ್ವಾಮಿಗಳಿಗೆ ಅದರ ಅಪ್ರಯೋಜಕತೆಯನ್ನು ನಯವಾಗಿಯೇ ಮನವರಿಕೆ ಮಾಡಿಕೊಡಲು ಪ್ರಯತ್ನಿಸಿದ್ದರೆಂದು ತೋರುತ್ತದೆ. ಆದರೆ ಸ್ವಾಮಿಗಳು ಚೆನ್ನಬಸಪ್ಪನವರ 'ದೂರಗಾಮಿ' ದೃಷ್ಟಿಕೋನವನ್ನು ತಿಳಿದುಕೊಳ್ಳದೆ ಕಾರ್ಯೋನ್ಮುಖರಾದಾಗ ಚೆನ್ನಬಸಪ್ಪನವರು 'ಗಣಾರಾಧನೆ'ಯ ಸಿಂಧುತ್ವವನ್ನೇ ಪ್ರಶ್ನಿಸಿದ್ದು ಸಹಜವಾಗಿತ್ತೆನ್ನ ಬೇಕಾಗುತ್ತದೆ. ಇದು ಚೆನ್ನಬಸಪ್ಪನವರ ಅಸಾಧ್ಯಧೈರ್ಯದ ಮತ್ತು ನೈತಿಕಬಲದ ದ್ಯೋತಕವೂ ಹೌದೆಂಬುದನ್ನು ಯಾರೂ ಒಪ್ಪುತ್ತಾರೆ.

ಇಷ್ಟು ಮಾತುಕತೆಯ ನಂತರವೂ ಸ್ವಾಮಿಗಳು 'ಗಣಾರಾಧನೆ'ಯನ್ನು ಜರುಗಿಸಲು ಮುಂದಾದಾಗ ಚೆನ್ನಬಸಪ್ಪನವರು"ಇಷ್ಟು ಜನ ಸೇರಿ ಭೋಜನ ಸಮಾರಂಭದಲ್ಲಿ ತೊಡಗುವುದರಿಂದ ಉಳವಿಕ್ಷೇತ್ರವನ್ನು ಹೊಲಸು ಮಾಡುವುದಲ್ಲದೆ, ಬೇರೆ ಏನನ್ನು ಸಾಧಿಸಿದಂತಾದೀತು? ಅಗತ್ಯವಿಲ್ಲದವರಿಗೆ ಊಟ ಮಾಡಿಸುವುದು ಹಣದ ಅಪವ್ಯಯ. ಹಾಗೆ ವೆಚ್ಚವಾಗುವ ಹಣವನ್ನು ವೀರಶೈವ ಬಡವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕಾಗಿ ವೆಚ್ಚಮಾಡಬೇಕು"[೨]- ಎಂದು ಆಗ್ರಹ ಮಾಡಿದರು. ಅಷ್ಟೇ ಅಲ್ಲ; ವೈಯಕ್ತಿಕವಾಗಿ ಆ

---

೧. ಕನ್ನಡದದೀಪ : ಕನ್ನಡ ಕುಲದೀಪಕ ಲಿಂಗೈಕ್ಯ ಡೆಪ್ಯೂಟಿ ಚೆನ್ನಬಸಪ್ಪನವರು : ಹಂದ್ರಾಳ ಮ.ಗು. - ಪುಟ. ೩೮.
೨. ಕನ್ನಡದದೀಪ : ಕನ್ನಡ ಕುಲದೀಪಕ ಲಿಂಗೈಕ್ಯ ಡೆಪ್ಯೂಟಿ ಚೆನ್ನಬಸಪ್ಪನವರು : ಹಂದ್ರಾಳ ಮ.ಗು. - ಪುಟ. ೩೮.

'ಸಮಾರಂಭ'ವನ್ನೇ ಬಹಿಷ್ಕರಿಸಿದರು. ಆನಂತರದ ಬೆಳವಣಿಗೆಯನ್ನು ಅರಟಾಳ ರುದ್ರಗೌಡರ ಮಾತಿನಲ್ಲೇ (ಅಪ್ರಕಟಿತ ಜೀವನಚರಿತ್ರೆ) ನೋಡಬಹುದು :

"ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಮಹಾಲಿಂಗಸ್ವಾಮಿ ಸಂಸ್ಥಾನ ಚಿತ್ರದುರ್ಗ ಮಹಾಸ್ವಾಮಿಗಳವರು ಮಿ.ಚೆನ್ನಬಸಪ್ಪ ಬಸವಲಿಂಗಪ್ಪ. ಧಾರವಾಡ ಡಿ.ಎ.ಇನ್‌ಸ್ಪೆಕ್ಟರ ಜಿಲ್ಲಾ ಬೆಳಗಾವ ಇವರ ವಿನಂತಿಯ ಪ್ರಕಾರ ಲಿಂಗಾಯತ ವಿದ್ಯಾರ್ಥಿಗಳ ಸಲುವಾಗಿ ಬೆಳಗಾವಿಯ 'ಕೇಳಕರ ಬಾಗ'ದಲ್ಲಿ ಬೋರ್ಡಿಂಗ್ ಸ್ಥಾಪನಾ ಮಾಡಿದ್ದರ ಸಂಬಂಧವಾಗಿ ನನಗೆ ಸ್ವತಃ ಗೊತ್ತಿದ್ದ ಮಟ್ಟಿಗೆ ತಪಶೀಲವಾರ ಹಕೀಕತು ಕೆಳಗೆ ಬರೆದಂತೆ ಇರುತ್ತದೆ :

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಮಹಾಲಿಂಗಸ್ವಾಮಿಗಳವರು ಸನ್ ೧೮೬೬ನೇ ಇಸವಿಯಲ್ಲಿ ಉಳವೀಕ್ಷೇತ್ರಕ್ಕೆ ದಯಮಾಡಿಸಿ, ಅಲ್ಲಿ ದೊಡ್ಡದೊಂದು ಮಂಟಪ ತಯಾರಿಸಿ, ಸಭೆ ಮಾಡಿ ಅಜಮಾಸು ಮೂವತ್ತು ನಾಲ್ವತ್ತು ಸಾವಿರ ರೂಪಾಯಿಗಳನ್ನು ಖರ್ಚುಮಾಡಿ ದೊಡ್ಡದೊಂದು ಗಣಾರಾಧನೆ ಮಾಡಿದರು. ಆಗ್ಗೆ ನಾನು ಹಾಗೂ ಮಿ.ಸಂಕನಗೌಡಾ ಕಲ್ಲನಗೌಡಾ ಪಾಟೀಲಕುಲಕರ್ಣಿ, ಸಾಕೀನ ಕುನ್ನೂರ ನಾವು ಬೇರೆ ಕೆಲವು ಜನರನ್ನು ಸಂಗಡ ಕರಕೊಂಡು, ಉತ್ಸವದ ಸಲುವಾಗಿ ಮುಂಬಯಿಯಿಂದ ತಂದಿದ್ದ ನಾನಾಪ್ರಕಾರದ ಬಣ್ಣಗಳುಳ್ಳ ಮದ್ದನ್ನು ಸಂಗಡಿಗರ ಮೇಲೆ ಹೊರಿಸಿಕೊಂಡು ಉಳವೀಯಾತ್ರೆಗೆ ಹೋದೆವು. ಹಂದಿಗನೂರು ದೇಸಾಯಿಯವರಾದ ಶ್ರೀಮಂತ ಬುಳ್ಳಪ್ಪನವರು ಕುಟುಂಬ ಸಹಿತವಾಗಿ ಅಲ್ಲಿಗೆ ಬಂದಿದ್ದರು. ಶ್ರೀ ಉಳವೀ ಕ್ಷೇತ್ರದಲ್ಲಿ ೮-೧೦ ದಿವಸಗಳ ವರೆಗೆ ಇದ್ದೆವು. ಈ ಯಾತ್ರೆಗೆ ಮಿ.ಚೆನ್ನಬಸಪ್ಪನವರು ಬರಲಿಲ್ಲ. ಯಾಕೆಂದರೆ ಈ ರೀತಿ ಹಣವನ್ನು ವ್ಯರ್ಥವಾಗಿ ಖರ್ಚು ಮಾಡುವುದು ಅವರ ಮನಸ್ಸಿಗೆ ಬರಲಿಲ್ಲ. ಆದ್ದರಿಂದ ದುರ್ಗದ ಮಹಾಸ್ವಾಮಿಗಳ ಪಾದದರ್ಶನಕ್ಕೆ ಬರುವುದಿಲ್ಲವೆಂದು ಹೇಳಿದರು. ನಾನು ಮಹಾಸ್ವಾಮಿಗಳವರ ಸೇವೆಯನ್ನು ಮಾಡುತ್ತಾ ಕಲಘಟಗಿ ತಾಲೂಕ ಪೈಕಿ ತಂಬೂರಗ್ರಾಮಕ್ಕೆ ಮುಂದಾಗಿ ಬಂದು, ಮುಂಡಗೋಡ ಶ್ರೀ ಗಡ್ಡದ ಚರಮೂರ್ತಿಸ್ವಾಮಿಗಳವರು ಹಾಗೂ ನಾನು ಅಲ್ಲಿಯ ಜನರನ್ನು ಕರೆದುಕೊಂಡು ಮಂಟಪ ತಯಾರಮಾಡಿದೆವು. ಮಹಾಸ್ವಾಮಿಗಳವರು ಅಲ್ಲಿ ಏಳೆಂಟು ದಿವಸ ಮುಕ್ಕಾಂ ಮಾಡಿ ಅಲ್ಲಿಂದ ಬಂಕಾಪುರ ತಾಲೂಕ ಪೈಕಿ ಕುನ್ನೂರಿಗೆ ದಯಮಾಡಿಸಿದರು. ಅಲ್ಲಿ ೮-೧೦ ದಿನ ಮುಕ್ಕಾಂ ಮಾಡಿ ಬಂಕಾಪೂರ ತಾಲೂಕ ಹಿರೇಬೆಂಡಿಗೇರಿಗೆ ದಯಮಾಡಿಸಿದರು. ಆಗ್ಗೆ ನಾನು ಅರಟಾಳ ಹಿರೇಮಠದ ಶಿವಬಸಯ್ಯನವರನ್ನು, ಪೂಜೇರಿ ತಿಪ್ಪಣ್ಣನನ್ನು, ನಿಂಗಪ್ಪ ಇವನನ್ನು ಕರೆದುಕೊಂಡು ಅಲ್ಲಿಗೆ ಹೋಗಿ ಮಹಾಸ್ವಾಮಿಗಳವರ ಸನ್ನಿಧಿಯಲ್ಲಿ ಅರಟಾಳ ಗ್ರಾಮದ ಕಾಣಿಕೆಯನ್ನು ಅರ್ಪಿಸಿದೆವು. ಆಮೇಲೆ ನನಗೆ ಮಹಾಸ್ವಾಮಿಗಳವರ ದರ್ಶನವೇ ಆಗಲಿಲ್ಲ.

ಮಹಾಸ್ವಾಮಿಗಳು ಶಿವಪೇಟೆಯಲ್ಲಿ ಮುಕ್ಕಾಂ ಮಾಡಿದ್ದಾಗ್ಗೆ "ಮಿ.ಚೆನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಡೆ. ಎ. ಇನ್‌ಸ್ಪೆಕ್ಟರ ಧಾರವಾಡ ಇವರು ನನಗೆ ಭೆಟ್ಟಿಯಾಗಲಿಲ್ಲ. ಇವರನ್ನು ಕರಕೊಂಡು ಬಂದು ಭೆಟ್ಟಿಯನ್ನು ಮಾಡಿಸಬೇಕೆಂದು" ನವಲಗುಂದ ಸಿದ್ರಾಮಸೆಟ್ಟರಿಗೆ ಮಹಾಸ್ವಾಮಿಗಳವರ ಅಪ್ಪಣೆಯಾಯಿತು. ಆಗ್ಗೆ ಮಿ. ಚೆನ್ನಬಸಪ್ಪನವರನ್ನೂ ಕೇಳಲು ಅವರು "ಮಹಾಸ್ವಾಮಿಗಳವರು ನನ್ನ ಮಾತು ಕೇಳುವಂತಿದ್ದರೆ ನಾನು ದರ್ಶನಕ್ಕೆ ಬರುತ್ತೇನೆಂ"ದು ತಮ್ಮ ಆಲೋಚನೆಯನ್ನು ಸಿದ್ರಾಮಸೆಟ್ಟರಿಗೆ ತಿಳಿಸಿದರು. ಕೂಡಲೇ ಸಿದ್ರಾಮಸೆಟ್ಟರು ಮಹಾಸ್ವಾಮಿಗಳವರಿದ್ದೆಡೆಗೆ ಅಂದರೆ ರಾಮದುರ್ಗ ಸಂಸ್ಥಾನ ಪೈಕಿ ಶಿವಪೇಟೆಗೆ ಹೋಗಿ ಚೆನ್ನಬಸಪ್ಪಣ್ಣನವರ ಅಭಿಪ್ರಾಯವನ್ನು ಶ್ರುತಗೊಳಿಸಿದರು. ಆಗ್ಗೆ

ಮಹಾಸನ್ನಿಧಿಯವರು "ಅಣ್ಣನವರ ಮಾತಿಗೆ ಅನುಕೂಲ ಮಾಡಿಕೊಡುತ್ತೇನೆ" ಎಂದು ವಚನಕೊಟ್ಟರು. ನಂತರ ಶೆಟ್ಟರು ಅಣ್ಣನವರನ್ನು ಶಿವಪೇಟೆಗೆ ಕರಕೊಂಡು ಹೋಗಿ ಮಹಾಸನ್ನಿಧಿಯಲ್ಲಿ ಎಲ್ಲರೂ ವಿಚಾರಮಾಡಿ, ಬೆಳಗಾವಿಯಲ್ಲಿ ಲಿಂಗಾಯತ ವಿದ್ಯಾರ್ಥಿಗಳ ಸಲುವಾಗಿ ಬೋರ್ಡಿಂಗ್ ಸ್ಥಾಪಿಸಬೇಕೆಂದು ನಿರ್ಣಯವೂ ಆಯಿತು. ಬೋರ್ಡಿಂಗ್‌ದ ಖರ್ಚಿನ ಸಲುವಾಗಿ ಮಹಾಸ್ವಾಮಿಗಳವರು ಪ್ರತಿ ತಿಂಗಳಿಗೆ ೩೦೦ ರೂ.ಗಳನ್ನು ಕೊಡತಕ್ಕದ್ದೆಂದು ಗೊತ್ತಾಯಿತು".

ಈ ರೀತಿ ಸ್ವತಃ ಸ್ವಾಮಿಗಳೇ ಆಮೇಲೆ ಚೆನ್ನಬಸಪ್ಪನವರ ರಚನಾತ್ಮಕ ಕಾರ್ಯವೈಖರಿಯನ್ನು ಮೆಚ್ಚಿಕೊಂಡು ತಾವು ಶಿವಪೇಟೆಯ ಮುಕ್ಕಾಮನಲ್ಲಿದ್ದಾಗೆ ಮಿ.ಚೆನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಡೆ.ಎ.ಇನ್‌ಸ್ಪೆಕ್ಟರ ಧಾರವಾಡ ಇವರು ನನಗೆ ಭೆಟ್ಟಿಯಾಗಲಿಲ್ಲ. ಇವರನ್ನು ಕರಕೊಂಡು ಬಂದು ಭೆಟ್ಟಿ ಮಾಡಿಸಬೇಕೆಂದು ನವಲಗುಂದ ಸಿದ್ರಾಮಸೆಟ್ಟರ ಮೂಲಕ ಹೇಳಿಕಳಿಸಿದರೆಂದರೆ, ಚೆನ್ನಬಸಪ್ಪನವರ ವ್ಯಕ್ತಿತ್ವ ಜೊತೆಗೆ ಮಹಾಸ್ವಾಮಿಗಳ ವ್ಯಕ್ತಿತ್ವ ಮೇರು ಸದೃಶವಾಗಿ ನಿಲ್ಲುತ್ತವೆ. "ಅಣ್ಣನವರ ಮಾತಿಗೆ ಅನುಕೂಲ ಮಾಡಿಕೊಡುತ್ತೇನೆ" ಎಂದು ಸ್ವಾಮಿಗಳವರು ಒಡಂಬಟ್ಟ ಮೇಲೆಯೇ ಚೆನ್ನಬಸಪ್ಪನವರು ಅವರ ದರ್ಶನಕ್ಕೆ ಹೋದ, ಅಲ್ಲಿ ಬೋರ್ಡಿಂಗ್ ಸ್ಥಾಪಿಸಬೇಕೆಂದು ನಿರ್ಣಯವಾಗಿ, ಆ ಬೋರ್ಡಿಂಗ್‌ದ ಖರ್ಚಿನ ಸಲುವಾಗಿ ಮಹಾಸ್ವಾಮಿಗಳವರು ಪ್ರತಿ ತಿಂಗಳಿಗೆ ೩೦೦ ರೂಪಾಯಿಗಳನ್ನು ಕೊಡಲು ವಚನವಿತ್ತ ಸಂಗತಿಯನ್ನು ಸಂತೋಷದ ವರ್ತಮಾನ ಎಂದು 'ಶಾಲಾಪತ್ರಿಕೆ'ಯ ೧೮೭೮ರ ಅಗಸ್ಟ, ಸಪ್ಟೆಂಬರ, ಅಕ್ಟೋಬರ, ನವ್ಹೆಂಬರ ಹೀಗೆ ಸತತವಾಗಿ ನಾಲ್ಕು ಸಂಚಿಕೆಗಳಲ್ಲಿ ಪ್ರಕಟವಾದ ಹಾಗೂ ಸಮಾಜ ಬಾಂಧವರ ಮಕ್ಕಳು ಆ 'ಬೋರ್ಡಿಂಗಿನ' ಪ್ರಯೋಜನವನ್ನು ಪಡೆಯುವಂತೆ ಮನವಿ ಮಾಡಿಕೊಂಡಿದ್ದನ್ನು ಇವು ಹೀಗೆ ತಿಳಿಯಪಡಿಸುತ್ತವೆ :

( i )

### ಸಂತೋಷ ವರ್ತಮಾನ

"ನಾವು ಬಹು ಸಂತೋಷದಿಂದ ಸಮಸ್ತ ಜನರಿಗೆ ವಿಶೇಷವಾಗಿ ಲಿಂಗವಂತರಿಗೆ ತಿಳಿಸುವುದೇನೆಂದರೆ, ಬೆಳಗಾವಿ ಜಿಲ್ಲೆಯ ಡೆಪ್ಯೂಟಿ ಇನ್‌ಸ್ಪೆಕ್ಟರರಾದ ಚೆನ್ನಬಸಪ್ಪನವರು ಕೇಳಿಕೊಂಡಿದ್ದರಿಂದ ಚಿತ್ರದುರ್ಗದ ಮುರಗಿ ಜಗದ್ಗುರು ಸ್ವಾಮಿಗಳವರು ಬಹುದಯಾಳುಗಳಾಗಿ ಅನಾಥರಾದ ವಿದ್ಯಾರ್ಥಿಗಳಿಗೆ ಬೆಳಗಾವಿಯಲ್ಲಿ ಅನ್ನ ಕೊಡುವುದಗೋಸ್ಕರ ಪ್ರತಿ ತಿಂಗಳಿಗೆ ೩೦೦ ರೂಪಾಯಿ ಕೊಡುವುದಕ್ಕೆ ಒಪ್ಪಿಕೊಂಡಿದ್ದಾರೆ. ಈ ಹಣದಿಂದ ಒಂದು ಮನೆಯನ್ನು ಬಾಡಿಗೆಯಿಂದ ತೆಗೆದುಕೊಂಡು ಅಡಿಗೆಯವರು ಮೊದಲಾದ ಚಾಕರರನ್ನು ಇಟ್ಟು ಸುಮಾರು ೫೦ ನಿರಾಶ್ರಿತರಾದ ವಿದ್ಯಾರ್ಥಿಗಳಿಗೆ ಯೆರಡುಹೊತ್ತು ಊಟ ಇರುವುದಕ್ಕೆ ಸ್ಥಳ ಕೊಡತಕ್ಕ ಬಗ್ಗೆ ಈಗ ತಜವೀಜ ನಡೆದಿದೆ.

ಈ ಕಾರಖಾನೆ ಯೆಂದು ಆರಂಭವಾಗುವುದು, ಇದರಲ್ಲಿ ಎಷ್ಟು ಜನ, ಯಾವ ಜಾತಿ. ವಿದ್ಯಾರ್ಥಿಗಳು ತೆಗೆದುಕೊಳ್ಳಲ್ಪಡುವರು ಅವರು ಏನೇನು ಕಲಿತಿರಬೇಕು ಎಂಬ ಮೊದಲಾದ ಸಂಗತಿಗಳು ತೀವ್ರವೇ ಒಂದು ಜಾಹಿರಾತಿನಿಂದ ತಿಳಿಸಲ್ಪಡುವವೆಂದು ಕೇಳುತ್ತೇವೆ".

- (ಶಾಲಾಪತ್ರಿಕೆ - ಅಗಸ್ಟ ೧೮೭೮ ಪುಸ್ತಕ-೪, ಸಂಚಿಕೆ-೫ ಪುಟ ೧೪೫-೭೦)

ಈ ಸುದ್ದಿಯನ್ನು ಸಂತೋಷದ ವರ್ತಮಾನವೆಂದು ಕರೆದಿರುವುದು ಅತ್ಯಂತ ಔಚಿತ್ಯಪೂರ್ಣವೆನಿಸುತ್ತದೆ. ಯಾಕೆಂದರೆ ಬಡಲಿಂಗಾಯತ ವಿದ್ಯಾರ್ಥಿಗಳ ಪಾಲಿಗೆ ಇದೊಂದು ವರದಾನವಾಗಿತ್ತು.

ಈ ಅವಧಿಯಲ್ಲಿ ರಸೆಲ್ಲರು ದಕ್ಷಿಣಭಾಗದ ಎಜ್ಯುಕೇಶನಲ್ ಇನ್‌ಸ್ಪೆಕ್ಟರರಾಗಿದ್ದರು. ಅವರೂ ಕೂಡ ಚಿತ್ರದುರ್ಗದ ಸ್ವಾಮಿಗಳು ಬೆಳಗಾವಿಯಲ್ಲಿ '೫೦ ಲಿಂಗಾಯತ ಹುಡುಗರನ್ನು ಇಂಗ್ಲೀಷ ಕಲಿಯುವುದಕ್ಕಾಗಿ ಇಡುವವರಿದ್ದಾರೆ' ಎಂಬ ನೋಟೀಸು ಹೊರಡಿಸಿ ಹಿಂದಿನ ತಿಂಗಳು ಶಾಲಾಪತ್ರಿಕೆಯಲ್ಲಿ ವ್ಯಕ್ತವಾಗಿದ್ದ 'ಲಿಂಗಾಯತ ಬೋರ್ಡಿಂಗ್' ವಿಚಾರವನ್ನು ಇನ್ನಷ್ಟು ದೃಢೀಕರಿಸುತ್ತಾರೆ. ಆ ಅಭಿಪ್ರಾಯ ಹೀಗೆ ವ್ಯಕ್ತವಾಗಿದೆ :

( ii )

**ನೋಟಿಸು**

॥ದುರ್ಗದ ಮಹಾಸ್ವಾಮಿಗಳು॥

ದಕ್ಷಿಣಭಾಗದ ಯಾವತ್ತು ಸ್ಕೂಲ ಮಾಸ್ತರರಿಗೆ ತಿಳಿಸುವುದೇನೆಂದರೆ - ೫೦ ಲಿಂಗಾಯತ ಹುಡುಗರಂನು ಬೆಳಗಾವಿಯಲ್ಲಿ ಇಂಗ್ರೀಜ ಕಲಿಯುವದರ ದಶಿಯಿಂದ ಇಡುವ ನಿಶ್ಚಯ ಶ್ರೀ ದುರ್ಗದ ಮಹಾಸ್ವಾಮಿಗಳು ಮಾಡಿದ ವಿಷಯವಾಗಿ ಸರ್‌ಕ್ಯುಲರ್‌ಗಳು ಇವೊತ್ತಾಗಲಿ ಅಥವಾ ನಾಳ್ಯಾಗಲಿ ನಿಮ್ಮ ಕಡಿಗೆ ಕಳಿಸುವೆವು. ಈ ಸರ್‌ಕ್ಯುಲರ್‌ಗಳ ಮೇಲೆ ನಮ್ಮ ಮತ್ತು ಡಿಪ್ಯೂಟಿ. ಇ. ಇನ್‌ಸ್ಪೆಕ್ಟರ ಚಂನಬಸಪ್ಪ ಇವರ ಸಹಿಗಳಿವೆ. ಆದರೆ ಈ ಸರ್‌ಕ್ಯೂಲರ್‌ಗಳು ನಿಮ್ಮ ಕಡಿಗೆ ಮುಟ್ಟಿದಾಕ್ಷಣವೇ ಅವುಗಳೊಳಗಿನ ಮಜಕೂರು ಹುಡುಗರಿಗೆ ತಿಳಿಹಿಸಿ ನಿಮ್ಮ ಊರನ್ನ ಶೆಟ್ಟಿಸಾವಕಾರರಿಗೆ ಸಹ ತಿಳುಹಿಸಬೇಕು.

(ಶಾಲಾಪತ್ರಿಕೆ - ಸಪ್ಟಂಬರ ೨೯, ೧೮೬೮ ಪುಸ್ತಕ-೪, ಸಂಚಿಕೆ-೭, ಮುಕ್ಕಾಂ ಬೆಳಗಾವಿ.)

W. A. ರಸೆಲ್

ಎಜ್ಯುಕೇಶನಲ್ ಇನ್ಸಪೆಕ್ಟರ ದಕ್ಷಿಣ ಭಾಗ

ಈ ಸಂಗತಿಯನ್ನು ಇನ್ನಷ್ಟು ನಿಚ್ಚಳಗೊಳಿಸುವ ಮತ್ತೊಂದು ನೋಟೀಸು ಹೀಗಿದೆ :

( iii )

**ನೋಟೀಸು**

॥ಚಿತ್ರಕಲ್ಲದುರ್ಗದ ಮಹಾಸ್ವಾಮಿಗಳು॥

೧. "ಯಾವತ್ತು ಲಿಂಗಾಯತ ಜನರಿಗೆ ತಿಳಿಯುವುದರ ದಶಿಯಿಂದ ಪ್ರಕಟಮಾಡುವದೇನೆಂದರೆ - ಲಿಂಗಾಯತ ಹುಡುಗರು ಇಂಗ್ರೇಜಿ ಕಲಿತು ಶಾಹ್ಯಣೆರಾಗಿ ಸರಕಾರ ಕೆಲಸಗಳಲ್ಲಿ ಶೇರಬೇಕೆಂಬುವ ಉದ್ದೇಶದಿಂದ ಬೆಳಗಾವಿಯಲ್ಲಿ ೫೦ ಲಿಂಗಾಯತ ಹುಡುಗರಂನು ಇಟ್ಟು ಆ

ಹುಡುಗರಿಗೆ ಅನ್ನ ವಸ್ತ್ರ ಮೊದಲಾದವುಗಳನ್ನು ತಾವು ತಮ್ಮ ಸ್ವಂತ ಖರ್ಚಿನಿಂದ ಪೂರೈಸುವ ನಿಶ್ಚಯ ಶ್ರೀ|| ...... || ಮಾಡಿದ್ದಾರೆ.

೨. ಈ ಹುಡುಗರ ಊಟ ಉಪಚಾರದ ದಶಿಯಿಂದ ಒಂದು ದೊಡ್ಡ ಮನೆಯನ್ನು ಬಾಡಗೀಲೆ ತೆಗೆದುಕೊಂಡಿದೆ. ಈ ಹುಡುಗರೆಲ್ಲಾ ಆ ಮನಿಯಲ್ಲಿ ಇರಬೇಕಾಗುವುದು. ಊಟ, ಉಪಚಾರಗಳು ನೆಟ್ಟಗೆ ಆಗುವುದರ ದಶಿಯಿಂದ ಒಬ್ಬ ಸಂಭಾವಿತ ಲಿಂಗಾಯತನಂನು ಇದರ ಮೇಲೆ ನೇಮಿಸಿದೆ. ಇವರು ಹುಡುಗರ ಮೇಲೆ ಎಲ್ಲಾ ಪ್ರಕಾರದ ಬಂದೋಬಸ್ತು ಇಡುವರು. ಹೈಸ್ಕೂಲಿಗೆ ಹೋಗಲಿಕ್ಕೆ ಯೋಗ್ಯರಿದ್ದವರಂನ ಹೈಸ್ಕೂಲಿಗೆ ಕಳಿಸುವೆವು. ಮತ್ತು ಸಂಣ ಸಾಲಿಗೆ ಹೋಗಲಿಕ್ಕೆ ತಕ್ಕವರಿದ್ದರೆ ಅವರನ್ನು ಮೊದಲು ಅಲ್ಲಿಗೆ ಕಳುಹಿಸಿ, ಬಳಿಕ ಹೈಸ್ಕೂಲಿಗೆ ಕಳುಹಿಸುವೆವು. ಈ ಹುಡುಗರಿಗೆ ಕಲಿಯುವುದರ ಹೊರ್ತು ಮತ್ತಿನ್ನೇನು ಯರಡನೇ ಕೆಲಸ ಮಾಡುವುದು ಬೀಳಲಿಕ್ಕಿಲ್ಲ. ಅಡಗೀ ಮಾಡುವುದರ ದಶಿಯಿಂದ ಮತ್ತು ನೀರು ತರುವುದರ ದಶಿಯಿಂದ ಬೇರೆ ಮನುಷ್ಯರಂನ ಯಿಡುವೆವು.

೩. ಯಾವ ಹುಡುಗರ ಮನಸ್ಸಿನಲ್ಲಿ ಇಂಗ್ರೇಜಿ ಕಲಿತು ಸರಕಾರದ ಕೆಲಸಗಳಲ್ಲಿ ಶೇರಬೇಕಂಬುವುದದೆ ಅವರು ತಾರೀಖ ೨ ನವ್ಹಂಬರ ೧೮೭೮ ದಿವಸ ೧೦ ಗಂಟೆಕ್ಕೆ ಕೆಳಗೆ ಸಹಿ ಮಾಡಿದವರ ಕಡಿಗೆ ಬೆಳಗಾವಿಯಲ್ಲಿ ಹಾಜರಾಗಬೇಕು.

೪. ಹನ್ನೆರಡು ವರ್ಷದೊಳಗಿನವರು ಮತ್ತು ಹದಿನೆಂಟು ವರ್ಷ ಮೀರಿದವರು ಬರಬಾರದು. ಮತ್ತು ತಂಮ ನಡತಿ ನೆಟ್ಟಗಿರುವ ಬಗ್ಗೆ ಸಂಭಾವಿತ ಜನರ ಕಡೆಯಿಂದ ಸರಟಿಫಿಕೇಟು ತರಬೇಕು. ಸರಕಾರಿ ಸಾಲಿಗಳಲ್ಲಿ ಕಲಿಯುತ್ತಿರುವ ಹುಡುಗರು ತಮ್ಮ ತಮ್ಮ ಪಂತೋಜಿಗಳ ಕಡಿಯಿಂದ ಸರಟಿಫಿಕೇಟು ತರಬೇಕು. ಆ ಸರಟೀಫಿಕೇಟುಗಳಲ್ಲಿ ಈ ಹುಡುಗರಿಗೆ ಪರೀಕ್ಷೆದಲ್ಲಿ ಪಾಸಾಗುವಷ್ಟು ಬರುತ್ತದೆಂದು ಬರೆದಿರಬೇಕು. ಕೆಳಗೆ ಬರದ ವಿಷಯಗಳಲ್ಲಿ ಪರೀಕ್ಷಾ ಆಗುವುದು. ಪರೀಕ್ಷೆದಲ್ಲಿ ಇಳಿದವರ ಹೊರ್ತು ಯೆರಡನೆಯವರಂನ ತೆಗೆದುಕೊಳ್ಳಲಿಕ್ಕಿಲ್ಲ. ಇಂಗ್ರೇಜಿ ಕಲಿತವರಿದ್ದರೆ ಮುಂಚೆ ಅವರನ್ನ ತೆಗೆದುಕೊಂಡ ಬಳಿಕ ಇಂಗ್ರೇಜಿ ಬಾರದವರಂನ ತೆಗೆದುಕೊಳ್ಳುವದು. ತಮ್ಮ ಹತ್ರ ಈಗಿರುವ ಅಭ್ಯಾಸದ ಪುಸ್ತಕಗಳಂನು ಸ್ಲೇಟ ಪಾಟಿಯಂನು ತೆಗೆದುಕೊಂಡು ಬರಬೇಕು"[೩]

ಆಗಲೇ ಬೆಳಗಾವಿಯಲ್ಲಿ ಬೋರ್ಡಿಂಗ್ ತೆರೆಯುವ ಉದ್ದೇಶದಿಂದಲೇ ಬಾಡಿಗೆ ಮನೆ ಹಿಡಿದಿರುವ ವಿಚಾರ ಈ ನೋಟೀಸಿನಲ್ಲಿ ಸ್ಪಷ್ಟವಾಗಿದೆ. ಅಲ್ಲದೆ ಊಟ-ಉಪಚಾರಗಳ ಮೇಲ್ವಿಚಾರಣೆಗಾಗಿ ಒಬ್ಬ ಸಂಭಾವಿತ ಲಿಂಗಾಯತನನ್ನು ನೇಮಿಸಿದ ಸಂಗತಿಯೂ ವ್ಯಕ್ತವಾಗಿದೆ. ಈ ಸಂಭಾವಿತ ವ್ಯಕ್ತಿ ಬಹುಶಃ ಗಂಗಾಧರ ಮಡಿವಾಳೇಶ್ವರ ತೂರಮರಿ ಆಗಿರಬೇಕೆಂದು ಅನಿಸುತ್ತದೆ.

ಈ ನೋಟೀಸನ್ನು ಪರಿಶೀಲಿಸುವಾಗ, ಹಿಂದಿಗಿಂತ ವಿಷಯವನ್ನು ಇನ್ನೂ ಹೆಚ್ಚು ಸ್ಪಷ್ಟಪಡಿಸುವ ಉದ್ದೇಶವಿತ್ತೆಂದು ತೋರುತ್ತದೆ. ಈ ನೋಟೀಸನ್ನು ಓದುವ ಯಾರಿಗೂ 'ವಿಷಯ ಸಂದಿಗ್ಧತೆ' ಕಾಡಬಾರದೆಂಬ ಆಶಯ ಇಲ್ಲಿ ಪ್ರಧಾನವಾಗಿದೆ. ಬೋರ್ಡಿಂಗ್ ನಡೆಸಲು ಬೇಕಾಗಿದ್ದ ಎಲ್ಲ ಪೂರ್ವ ತಯಾರಿಯನ್ನು ಮಾಡಿಕೊಂಡಿರುವ ಅಂಶ ಇದರಿಂದ

---

೩. ಕನ್ನಡದ ದೀಪ : ಪುಟ ೮೧

ಗೊತ್ತಾಗುತ್ತದೆ. ಇದರ ನಂತರ ಹೊರಡಿಸಲಾದ 'ಬಿಂನಹ ಪತ್ರ'ದಲ್ಲಿ ಮತ್ತಷ್ಟು ವಿಚಾರಗಳು ವ್ಯಕ್ತವಾಗಿದ್ದು; ಅವು ಸಮಾಜಬಾಂಧವರ ಲಕ್ಷಸೆಳೆಯುವಲ್ಲಿ ಯಶಸ್ವಿಯಾಗಿವೆ. ಇದನ್ನು ಮನದಟ್ಟು ಮಾಡಿಕೊಳ್ಳಬೇಕಾದರೆ ಬಿಂನಹಪತ್ರದ ಯಥಾಪಾಠವನ್ನೇ ನೋಡಬೇಕು :

## (iv)

## ಲಿಂಗಾಯತರಿಗೆಲ್ಲ ಬಿಂನಹಾಪತ್ರಾ

॥ಚಿತ್ರಕಲ್ಲದುರ್ಗದ ಮಹಾಸ್ವಾಮಿಗಳು॥

ಈ ಕರ್ನಾಟಕ ಪ್ರಾಂತದಲ್ಲಿ ಲಿಂಗಾಯತ ಜನರು ಅನೇಕರು. ಮತ್ತು ಬಹಳಮಾಡಿ ಅವರೇ ಸಾವಕಾರರು. ಉಳಿದ ಜನರು ಬಹಳ ಕನಿಷ್ಟರು ಮತ್ತು ಬಡವರು. ಹೀಗಿದ್ದು ಲಿಂಗಾಯತರು ಕನ್ನಡ ಮತ್ತು ಇಂಗ್ರೇಜಿ ಮೊದಲಾದ ವಿದ್ಯಗಳನ್ನು ಕಲಿತು, ಶ್ಯಾಹಣೆರಾಗಿ ಸರಕಾರದ ಕೆಲಸಗಳಲ್ಲಿ ಶೇರದೆ ಇದ್ದದ್ದರಿಂದ, ಅವರು ಎಷ್ಟು ಶ್ರೀಮಂತರಿದ್ದಾಗ್ಯೂ ಅವರಿಗೆ ತಕ್ಕಮಾನಗಳು ಸರಕಾರದಲ್ಲಿ ಆಗುವುದಿಲ್ಲ.

೨. ಏನಕೆ ಲಿಂಗಾಯತರಿಗೆ, ಪೆಶವಾಯಿ ಸರಕಾರ ಹೋಗಿ ಇಂಗ್ಲೀಷ ಸರಕಾರ ಬಂದದೆಂಬುದು ಗೊತ್ತೆಯಿಲ್ಲಾ. ಅವರಿಗೆ ಇಂಗ್ರೇಜಿ ಸರಕಾರದಲ್ಲಿ ಯೆಲ್ಲಾ ಜಾತಿಯವರು ಸಮಾನವೆಂಬುವುದು ಅಗದಿ ಗೊತ್ತಿಲ್ಲಾ. ಸರಕಾರ ಕೆಲಸಗಳಲ್ಲಿ ಸಹಸ್ರಮಂದಿ ಬ್ರಾಹ್ಮರಲ್ಲಿ ಲಿಂಗಾಯತರ ನಿಭಾನಕಿ ಆಗಲಿಕ್ಕಿಲ್ಲವೆಂದು ತಿಳಿದು, ಸರಕಾರ ಕೆಲಸಗಳನ್ನು ಸಂಪಾದಿಸುವ ಯತ್ನ ಮಾಡುವುದಿಲ್ಲಾ, ಅಂದರೆ ಇದು ಅವರ ತಪ್ಪು. ಇಂಗ್ರೇಜಿ ಸರಕಾರದವರು ಜಾತಿಯನ್ನು ನೋಡಿ ಕೆಲಸಗಳನ್ನು ಕೊಡುವುದಿಲ್ಲಾ. ಶ್ಯಾಹಣೆರಿಗೆ ಮಾತ್ರ ಕೆಲಸಗಳನ್ನು ಕೊಡುತ್ತಾರೆ. ಇದಲ್ಲದೆ ಸಾಹೇಬ ಜನರಿಗೆ ನಂಮ ಕನ್ನಡದ ಮಾತು ತಿಳಿಯುವದರಿಂದ, ಯಾವತ್ತು ಜನರ ದಾದು ಹತ್ತುತ್ತದೆ. ಅನ್ಯಾಯವಾಗದ ಹಾಗೆ ಸರಕಾರದವರು ಬಂದೋಬಸ್ತು ಮಾಡಿದ್ದಾರೆ. ಅಂದರೆ ನಂಮ ಜನರಿಗೆ ಇದು ನೆಟ್ಟಗೆ ತಿಳಿಯದ ಕಾರಣಾ ಯಾವ ಪ್ರಕಾರದ ಅನ್ಯಾಯವಾದರೂ ಪ್ರಯತ್ನ ಮಾಡದೆ ಸುಮ್ಮನೆ ಮನೆಯಲ್ಲಿ ಕೂಡುತ್ತಾರೆ.

೩. ಇಷ್ಟು ದಿವಸ ಆಗಿದ್ದು ಆಗಿಹೋಯಿತು. ಇಂನಮುಂದೆ ಲಿಂಗಾಯತರ ಸ್ಥಿತಿನೆಟ್ಟಗಾಗಿ ಅವರು ಸರಕಾರದ ಕೆಲಸಗಳಲ್ಲಿ ಶೇರಬೇಕೆಂಬುವ ಉದ್ದೇಶದಿಂದ ಬೆಳಗಾವಿಯಲ್ಲಿ ೩೦ ಹುಡುಗರಿಗೆ ಅಂನವಸ್ತ್ರ ಮೊದಲಾದವುಗಳನ್ನು ಕೊಟ್ಟು ಸವರಕ್ಷಿಣೆಯಂನು ಮಾಡಿ ಅವರಿಗೆ ಇಂಗ್ರೇಜಿ ವಿದ್ಯಾ ಕಲಿಸಬೇಕೆಂಬುವ ನಿಶ್ಚಯವಂನು ಶ್ರೀ...... ಮಾಡಿದ್ದಾರೆ.

೪. ಈ ಹುಡುಗರು ಇಲ್ಲೆ ಮೂರು ಅಥವಾ ನಾಲ್ಕು ವರ್ಷಗಳ ತನಕ ಕಲಿತು ಮುಂದೆ ಮುಂಬಯಿಗೆ ಹೋಗಿ ಅಲ್ಲೆ ಮ್ಯಾಟ್ರಿಕ್ಯೂಲೇಶನ್ ಪರೀಕ್ಷಾ ಕೊಡಬೇಕು. ಅಲ್ಲಿ ಪರೀಕ್ಷಾ ಇಳಿದವರಂನ ಪುಣೆದಲ್ಲಿಟ್ಟು, ಮುಂದೆ ನಾಲ್ಕಾರು ವರ್ಷಗಳ ತನಕಾ ಇಂಗ್ರೇಜಿ ಮೊದಲಾದ ವಿದ್ಯಗಳ ಅಭ್ಯಾಸ ಮಾಡಿಸುವರು. ಇದರಿಂದ ಲಿಂಗಾಯತ ಹುಡುಗರು ಶ್ಯಾಹಣೆರಾಗುವರು. ಅದರಿಂದ ಅವರಿಗೆ ಸರಕಾರದಲ್ಲಿ ದೊಡ್ಡ ದೊಡ್ಡ ಕೆಲಸಗಳು ಶಿಗುವವು. ಬ್ರಾಹ್ಮರು ಮೊದಲಾದವರಿಗೆ ಕಲೆಕಟರ, ಜಡಜ, ಡಿಪುಟಿಕಲೆಕಟರ, ದಫ್ತರದಾರ, ಸದರ ಅಮೀನ, ಪ್ರಿನ್ಸಿಪಾಲ, ಸದರ ಅಮಿನ, ಮೊದಲಾದ ದೊಡ್ಡ ದೊಡ್ಡ ಜಾಗಗಳು ಶಿಗೋದು ಗೊತ್ತಿದ್ದು

ಮಾತೇನರಿ. ಅಂದರೆ ಬ್ರಾಹ್ಮರಂತೆ ಲಿಂಗಾಯತರು ಕಲಿತು ಶ್ಯಾಹಣೆರಾದರೆ ಇವರಿಗೂ ಅಂಥಾ ಕೆಲಸಗಳು ಶಿಗುವವು.

೫. ಈ ಮಹತ್ಕಾರ್ಯಕ್ಕೆ ಶ್ರೀ ....... ತಿಂಗಳಿಗೆ ೩೦೦ ರೂಪಾಯಿಗಳು ಕೊಡುತ್ತೇವೆಂತ ಒಡಂಬಟ್ಟಿದ್ದಾರೆ. ಇದರಂತೆ ಚಿಕ್ಕೋಡಿ ಮುನಶಿಫರಾದ ವೀರಭದ್ರಯ್ಯನವರು ಒಬ್ಬ ಹುಡುಗನ ಖರ್ಚು ನಡೆಸುವವರಿದ್ಧಾರೆ. ಮತ್ತು ಇಟಗಿಯಲ್ಲಿರುವ ಸಾಣಿಕೊಪ್ಪದ ಮಲ್ಲಪ್ಪಂಣವರು ಒಬ್ಬ ಹುಡುಗನ ಖರ್ಚುನಡೆಸುತ್ತೇವೆಂದು ಹೇಳಿದ್ಧಾರೆ. ಮತ್ತು ನಾನು ಒಬ್ಬನ ಖರ್ಚು ನಡೆಸುತ್ತೇನೆಂದು ಮಹಾಸ್ವಾಮಿಗಳವರಿಗೆ ಬರಕೊಂಡಿದ್ದೇನೆ. ಇತರ ದೊಡ್ಡ ದೊಡ್ಡ ಶೆಟ್ಟಿ, ಸಾವಕಾರರು ತಂಮ ಕೈಲಾದಮಟ್ಟಿಗೆ ಈ ಮಹತ್ಕಾರ್ಯಕ್ಕೆ ಸಹಾಯ ಮಾಡಿದರೆ, ಅವರಿಗೆ ಜಾತಿ ಉದ್ಧಾರ ಮಾಡಿದ ಪುಣ್ಯ ಮತ್ತು ಕೀರ್ತಿ ಉಂಟಾಗುವುದು. ಘಳಿಸಿದ ದುಡ್ಡು ಎಂದಾದರೂ ಹಾಳಾಗಿ ಹೋಗುತ್ತದೆ. ಲಕ್ಷ್ಮಿ ಸ್ಥಿರವಲ್ಲವೆಂತ ಶಾಸ್ತ್ರ ಕೂಗುತ್ತದೆ. ಮತ್ತು ಯಾವತ್ತ ಕೂಡಿಡದೆ ಅಂದರೆ ಸತ್ಕಾರ್ಯಗಳಿಗೆ ಖರ್ಚುಮಾಡಿ ಪುಣ್ಯ ಮತ್ತು ಕೀರ್ತಿಗಳನ್ನು ಘಳಿಸುವುದು ಶ್ಯಾಹಣೆರ ಕೆಲಸಾ.

೬. ಈ ಮಹತ್ಕಾರ್ಯಕ್ಕೆ ಬೇಕಾಗುವ ಭಾಂಡೆ ಜೀನಸುಗಳನ್ನು ಕೊಳ್ಳುವುದಕ್ಕೆ ಬೆಳಗಾವಿ, ಶಾಹಾಪೂರದಲ್ಲಿರುವ ಕೆಲವು ಲಿಂಗಾಯತ ಸಾಹುಕಾರರು ೪೦೦ ರೂಪಾಯಿ ಪಟ್ಟಿಕೊಟ್ಟಿದ್ದಾರೆ. ಇಂನು ಉಳಿದ ಜನರ ಕಡಿಯಿಂದ, ಹಾಸಿಕಿ ಮುಂತಾದವುಗಳ ದಶಿಯಿಂದ ಪಟ್ಟಿ ಮಾಡಿಸುವದದೆ. ಹೀಗೆ ವಸೂಲಾದ ರೂಪಾಯಿಗಳಿಂದ ಭಾಂಡೆ ಜೀನಸುಗಳನ್ನು ಖರೇದಿ ಮಾಡಿ ಅವುಗಳ ಮೇಲೆ ಶ್ರೀ ಮುರಗ್ಯಾ ಜಗದ್ಗುರು ಸ್ವಾಮಿಗಳವರ ವಿದ್ಯಾಲಯವೆಂತ ವಿಳಾಸ ಹಾಕಿಸಿದ್ದೇವೆ.

೭. ಈ ಮಹತ್ಕಾರ್ಯದಿಂದ ಲಿಂಗಾಯತ ಜನರು ಬೆಳಕಿಗೆ ಬರುವರು. ಈಗ ದೊಡ್ಡ ದೊಡ್ಡ ವಿರಕ್ತರು, ಮತ್ತು ಸಾವಕಾರರು ಕಚೇರಿಯಲ್ಲಿರದಿದ್ದರೆ ಅವರಿಗೆ ತಕ್ಕ ಮಾನಪಾನಗಳು ಆಗುವುದಿಲ್ಲ. ಆದರೆ ಬ್ರಾಹ್ಮರು ಸರಕಾರದಲ್ಲಿ ದೊಡ್ಡ ದೊಡ್ಡ ಕೆಲಸಗಳಲ್ಲಿ ಇರುವುದರಿಂದ ಆ ಜನರಿಗೆ ತಕ್ಕ ಮರ್ಯಾದೆಗಳು ಆಗುತ್ತವೆ.

೮. ಈ ಮಹತ್ಕಾರ್ಯಕ್ಕೆ ಸಹಾಯಮಾಡುವರ ಹೆಸರುಗಳನ್ನು ಬೇರೆ ಛಾಪಿಸಿ ನಾಲ್ಕೂ ಕಡೆಗೆ ಪ್ರಸಿದ್ಧಮಾಡುವೆವು".

ಅನೇಕ ಶರಣಾರ್ಥಿಗಳು

| | |
|---|---|
| ತಾರೀಖು ೧ ನೇ ಮಾಹೆ | ಚಂನಬಸಪ್ಪಾ ಬಸಲಿಂಗಪ್ಪಾ ಧಾರವಾಡ |
| ಅಗಟೋಬರ ಸಂನ್ | ಡಿಪ್ಯುಟಿ ಇಜ್ಯುಕೇಶನಲ್ ಇನ್ಸಪೆಕ್ಟರ |
| ೧೮೬೮ನೇ ಇಸವಿ | ಜಿಲ್ಲಾ ಬೆಳಗಾವಿ. |

|| ಬೆಳಗಾಂವ ಸಮಾಚಾರ ಛಾಪಖಾನೆಯಲ್ಲಿ ಛಾಪಿಸಿದೆ. ||

ಎಂದು ಮುಕ್ತಾಯಗೊಳ್ಳುವ ಈ 'ಬಿಂನಹಾ ಪತ್ರಾ' ಒಂದು ಸಾಮಾಜಿಕ ಸಂದರ್ಭದ ಸ್ಥಿತಿಗತಿಯನ್ನು ಸಾಕಷ್ಟು ವಸ್ತುನಿಷ್ಠರಾಗಿಯೇ ವಿಶ್ಲೇಷಿಸಿದೆ. ಶಿಕ್ಷಣರಂಗದಲ್ಲಿ ಬ್ರಾಹ್ಮಣರಂತೆ ಲಿಂಗಾಯತರೂ ಮೇಲುಗೈ ಸಾಧಿಸಬೇಕೆಂಬ ಮತ್ತು ಇದು ಸಾಧ್ಯವಾದಾಗ ಮಾತ್ರ ಆ

ಸಮಾಜದ ಗೌರವ ಘನತೆಗಳು ಹೆಚ್ಚುವವೆಂಬ ಆಕಾಂಕ್ಷೆ ಇಲ್ಲಿ ವ್ಯಕ್ತವಾಗಿದೆ. ಇದರ ಹಿಂದಿರುವ ಅಡಚಣೆ ಏನೆಂಬುದೂ ಚೆನ್ನಬಸಪ್ಪನವರಿಗೆ ಚೆನ್ನಾಗಿ ಗೊತ್ತಿದೆ. ಆದ್ದರಿಂದಲೇ ಚಿತ್ರದುರ್ಗದ ಆಗಿನ ಮಠಾಧಿಪತಿಗಳ ಹಾಗೂ ಸಮಾಜದ ಕೆಲವು ಪ್ರತಿಷ್ಠಿತರ ಮನವೊಲಿಸಿ 'ಉಚಿತ ಪ್ರಸಾದನಿಲಯ'ಯನ್ನು ಆರಂಭಿಸುವ ಸಾಹಸಕ್ಕೆ ಕೈಹಾಕಿದ್ದು. ಇಂದು ಕರ್ನಾಟಕದಾದ್ಯಂತ ಸಾಕಷ್ಟು ಸಂಪನ್ಮೂಲಗಳನ್ನು ಹೊಂದಿರುವ ಹಲವಾರು ಬೋರ್ಡಿಂಗ್‌ಗಳಿರಬಹುದು. ಆದರೆ ನೂರಿಪ್ಪತ್ತೈದು ವರ್ಷಗಳ ಹಿಂದೆ ಈ ಕಲ್ಪನೆಯ ಬಿತ್ತನೆ ನಡೆದದ್ದು ಚೆನ್ನಬಸಪ್ಪನವರಿಂದ. ಸಮಾಜದ ತ್ಯಾಗವನ್ನು ಬಯಸುವ ವ್ಯಕ್ತಿ, ವೈಯಕ್ತಿಕ ತ್ಯಾಗಕ್ಕೂ ಸಿದ್ಧನಾಗಿರಬೇಕೆಂಬ ತತ್ವಕ್ಕೆ ಬದ್ಧರಾದಂತಿದ್ದ ಚೆನ್ನಬಸಪ್ಪನವರು ಆ ಕಾಲದಲ್ಲಿ ತಾವೂ ಒಬ್ಬ ಹುಡುಗನ ಖರ್ಚು ಭರಿಸಿದ ವಿಚಾರ ಸಣ್ಣ ವಿಷಯವೇನಲ್ಲ. ಸಮಾಜದ ಸ್ಥಿತಿವಂತರ ಮನಸ್ಸನ್ನು ಈ ನಿಟ್ಟಿನಲ್ಲಿ ಹುರಿಗೊಳಿಸಿ ಅವರ ಸಂಪತ್ತನ್ನು ಸತ್ಪಾತ್ರಕ್ಕೆ ಸಲ್ಲುವಂತೆ ನೋಡಿಕೊಂಡದ್ದು ಆದರ್ಶಪ್ರಾಯವಾದದ್ದು.

ಈ ಬಿನ್ನಹ ಪತ್ರದಲ್ಲಿ ನಮೂದಿಸಿದ ತೇದಿಯನ್ನವಲಂಬಿಸಿ ಹೇಳುವುದಾದರೆ "ಲಿಂಗಾಯತ ಬೋರ್ಡಿಂಗ್" ಬೆಳಗಾವಿಯಲ್ಲಿ ಪ್ರಾರಂಭವಾದುದು ೧೮೬೭ರಲ್ಲಿ. ಈ ಬೋರ್ಡಿಂಗ್ ಬೆಳಗಾವಿಯ 'ಕೇಳಕರ ಬಾಗ'ದಲ್ಲಿ ಇದ್ದಿತೆಂದು ಅರಟಾಳ ರುದ್ರಗೌಡರ ದಿನಚರಿಯ ಹಸ್ತಪ್ರತಿಯಿಂದ ತಿಳಿದು ಬರುತ್ತದೆ. ಇದರಲ್ಲಿ ೫೦ ವಿದ್ಯಾರ್ಥಿಗಳಿಗೆ ಪ್ರವೇಶದ ಅವಕಾಶವಿತ್ತು. ಇತರ ವಿವರಗಳು ಲಭ್ಯವಾಗುವುದಿಲ್ಲವಾದರೂ, ಈ ಪ್ರಸಾದನಿಲಯದ ಮೇಲ್ವಿಚಾರಣೆಯನ್ನು ಶ್ರೀ ಗಂಗಾಧರ ಮಡಿವಾಳೇಶ್ವರ ತೀರಮರಿ ಮತ್ತು ಮಡಿವಾಳಯ್ಯ ಪಂಡಿತ ನೋಡಿಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ.

ಡೆಪ್ಯೂಟಿಯವರು ಪ್ರಾರಂಭ ಮಾಡಿದ ಈ ಬೋರ್ಡಿಂಗಿಗೆ ವಿದ್ಯಾರ್ಥಿಗಳನ್ನು ಹುಡುಕಿತರುವುದು ಮೊದಮೊದಲು ಕಷ್ಟಕರವೆನಿಸಿದ್ದಿತು. ಈ ಸಂದರ್ಭದಲ್ಲಿ "ಚೆನ್ನಬಸಪ್ಪನವರು ೫೦ ಕತ್ತೆಗಳನ್ನು ಕೂಡಿಹಾಕಿ ಅವುಗಳಿಗೆ ದಿನಾಲು ಕರಾರಿ ಮಾಡಿಸಿ, ದಾಣೆ ತಿನಿಸಿ ಜೋಪಾನ ಮಾಡಿದ ಮಾತ್ರದಿಂದ ಅವು ಎಂದಾದರೂ ಕುದುರೆಗಳಾಗಬಹುದೋ?" ಎಂದು ಕೆಲವರು ಅಪಹಾಸ್ಯದ ಮಾತುಗಳನ್ನಾಡುತ್ತಿದ್ದರೆಂದೂ ತಿಳಿದುಬರುತ್ತದೆ. ಇದಾವುದಕ್ಕೂ ಸೊಪ್ಪುಹಾಕದೆ ಚೆನ್ನಬಸಪ್ಪನವರು ಬೋರ್ಡಿಂಗ್ ಸ್ಥಾಪನೆಯ ವಿಚಾರವನ್ನು ಮುಂದುವರೆಸಿದರು.

ಬಹುಶಃ ಶಾಲಾಪತ್ರಿಕೆ ಮತ್ತು ಬಿನ್ನಹ ಪತ್ರದ ಮೂಲಕ 'ಬೋರ್ಡಿಂಗ್' ಸ್ಥಾಪಿಸುವ ವಿಚಾರವನ್ನು ಸಾರ್ವಜನಿಕವಲಯದಲ್ಲಿ ಬಿಂಬಿಸಿದ ಮೇಲೆ ಅನೇಕರು ಈ ಪ್ರಭಾವನೆಗೆ ಒಳಗಾಗಿ ಹಲವಾರು ರೀತಿಯಿಂದ ಸಹಾಯ ಸಲ್ಲಿಸಲು ಮುಂದೆ ಬಂದ ಸಂಗತಿಯನ್ನು ಕಲ್ಲಚ್ಚಿನ ಶಾಲಾಪತ್ರಿಕೆ ಹೀಗೆ ಸ್ಪಷ್ಟಪಡಿಸುತ್ತದೆ :

(v)

"ಈ ಕರ್ನಾಟಕ ದೇಶದಲ್ಲಿ ಲಿಂಗಾಯತ ಜನರು ಬಹಳ ಮಂದಿ ಇದ್ದು ಯಾರೂ ವಿದ್ವಾಂಸರಾಗಿಲ್ಲ. ಒಬ್ಬಿಬ್ಬರ ಹೊರ್ತು ಯಾರೂ ಕಾಮದಾರರಾಗಿಲ್ಲ, ಇದರ ಕಾರಣವೇನೆಂದರೆ ಇವರಿಗೆ, ಇಂದಿನ ತನಕ ಯಾರೂ ತಿಳಿಹೇಳಲಿಲ್ಲ. ಈಗ ರಾ.ರಾಜಶ್ರೀ ಚೆನ್ನಬಸಪ್ಪ ಡಿ.ಇ.ಇ

ಜಿಲ್ಹಾ ಬೆಳಗಾಂವ ಇವರು ತಮ್ಮ ಇಲಾಖೆಯ ಸಾಲಿಗಳ ಪರೀಕ್ಷೆಯ ಸಲುವಾಗಿ ಊರೂರಿಗೆ ಹೋದಾಗ ಲಿಂಗವಂತ ಜನರಿಗೆ, ವಿದ್ಯೆ ಕಲಿಯೋಣದರಿಂದ ಇಂಥಿಂಥಾ ಲಾಭಗಳಾಗುತ್ತವೆಂದು ಉಪದೇಶ ಮಾಡಿ, ಅವರನ್ನು ಹುರುದುಂಬಿಸಿ, ಚಿತ್ರಕಲ್ಲದುರ್ಗದ ಮುರಿಗ್ಯೆ ಸ್ವಾಮಿಗಳಿಗೆ ಹೇಳಿಕೊಂಡದ್ದರಿಂದ ಅವರು ತಿಂಗಳೊಂದಕ್ಕೆ ೩೦೦ ರೂಪಾಯಿಗಳನ್ನು ಕೊಡುತ್ತೇವೆ. ೫೦ ಲಿಂಗವಂತ ಹುಡುಗರನ್ನು ಬೆಳಗಾವಿಯಲ್ಲಿಟ್ಟು ಇಂಗ್ರೇಜಿ ಕಲಿಸಬೇಕೆಂದು ಹೇಳಿದರು. ಆ ಸ್ವಾಮಿಗಳ ವಚನ ತಕ್ಕೊಂಡು ಸದರ ಡಿ.ಇ.ಇ. ಇವರು ಮೆ.ರಸೆಲ್‌ಸಾಹೇಬ ಬಹದ್ದೂರ ಇ.ಇ. ದಕ್ಷಿಣಭಾಗ ಇವರ ಬಳಿಗೆ ಬಂದು ಯಾವತ್ತು ಸಂಗತಿಗಳನ್ನು ಅರಿಕೆ ಮಾಡಿಕೊಳ್ಳಲಾಗಿ ಅವರು ದಕ್ಷಿಣಬಾಗದ ನಾಲ್ಕೂ ಜಿಲ್ಹೆಗಳೊಳಗಿನ ಲಿಂಗವಂತ ವಿದ್ಯಾರ್ಥಿಗಳಿಗೆ ನೋಟೀಸು ಕೊಟ್ಟಿದ್ದೇನಂದರೆ, ೧೨ ವರ್ಷದಿಂದ ೧೮ ವರ್ಷಗಳ ತನಕ ವಯಸ್ಸುಳ್ಳ ಲಿಂಗವಂತ ಹುಡುಗರು ತಾ.೧ನೇ ನವೆಂಬರ ದಿವಸ ಬೆಳಗಾಂವಿಗೆ ಬಂದು ಮೂರನೇ ಸ್ಟ್ಯಾಂಡ ಪ್ರ. ಪರೀಕ್ಷೆಯ ಕೊಡಬೇಕಾದ ಪರೀಕ್ಷೆಯೊಳಗೆ ಪಾಸ ಆದವರನ್ನು ಸ್ವಾಮಿಗಳ ಅನ್ನಛತ್ರದಲ್ಲಿ ಅವರಿಗೆ ಇಂಗ್ರೇಜಿ ಕಲಿಸಲಾದೀತೆಂದು ನೋಟೀಸು ಕೊಟ್ಟರು. ಅದರಂತೆ ತಾ.೧ ನವೆಂಬರ ದಿವಸ ೧೪೮ ಹುಡುಗರು ಪರೀಕ್ಷೆ ಕೊಡುವುದಕ್ಕೆ ಹಾಜರಾದರು. ಮೊದಲನೇ ದಿವಸ ಪರೀಕ್ಷೆಯನ್ನು ತಕ್ಕೊಳ್ಳುವುದಕ್ಕೆ ಮೆ.ರಸೆಲ ಸಾ.ಬಾ.ಇ.ಇ. ಮತ್ತು ಮಿ.ಷ್ಪೋಕ ಸಾ.ಬಾ.ಅ. ಕಲೆಕ್ಟರ್ ಮತ್ತು ಮಿ. ಜಾರ್ಡನ್ ಸಾ.ಬಾ. ಅಸಿಸ್ಟಂಟ ಜಡ್ಜ ಈ ಮೂರು ಮಂದಿ ದೊರೆಗಳು ಮತ್ತು ಕಾಮದಾರರು ಮತ್ತು ಶೆಟ್ಟಿ ಸಾವುಕಾರರು ಕೂತಿದ್ದರು. ಎರಡನೇ ದಿವಸ ರಸೆಲ್ ದೊರೆಗಳು ಷ್ಪೋಕ ದೊರೆಗಳು ಕೂತಿದ್ದರು. ಈ ಮೇರೆಗೆ ಪರೀಕ್ಷೆಯನ್ನು ತಕ್ಕೊಳ್ಳಲಾಗಿ ಪಾಸ ಆದ ಹುಡುಗರ ವಿವರ :

| ಯಾವ ಜಿಲ್ಲೆಯವರು | ಎಷ್ಟು ಹುಡುಗರು | ಪಾಸ ಆದವರು |
|---|---|---|
| ಬೆಳಗಾಂವ | ೧೧೩ | ೪೧ |
| ಧಾರವಾಡ | ೩೧ | ೯ |
| ಕಲಾದಗಿ | ೪ | ೦ |
| ಒಟ್ಟು | ೧೪೮ | ೫೦ |

ಈ ಮೇರಿಗೆ ಪಾಸ ಆದ ಹುಡುಗರನ್ನು ಇಟ್ಟುಕೊಂಡು ಇಂಗ್ರೇಜಿ ಕಲಿಯಲಿಕ್ಕೆ ಶೇಖರಿಸುತ್ತಾರೆ. ಈ ಹುಡುಗರಿಗೆ ಅನ್ನ ವಸ್ತ್ರ ಪುಸ್ತಕ ಮುಂತಾದ ಖರ್ಚು ಮುರಿಗ್ಯ ಸ್ವಾಮಿಗಳು ನಡಿಸುತ್ತಾರೆ. ಈ ೫೦ ಹುಡುಗರು ಇರುವುದಕ್ಕೂ ಮಲಗಿಕೊಳ್ಳುವುದಕ್ಕೂ ಊಟಮಾಡುವುದಕ್ಕೂ ಬೆಳಗಾವಿಯಲ್ಲಿ 'ಕೇಳಕರ ಬಾಗ'ದಲ್ಲಿ ಒಂದು ದೊಡ್ಡಮನಿಯನ್ನು ಬಾಡಿಗಿ ತಕ್ಕೊಂಡು ಅಲ್ಲಿ ಅಡಗಿ ಮಾಡುವವರನ್ನು ಇಟ್ಟು ಅದರ ಮೇಲೆ ಯಾವತ್ತೂ ಬಂದೋಬಸ್ತಿಯ ಸಲುವಾಗಿ ಡಾ.ಮಡಿವಾಳಯ್ಯ ಪಂಡಿತ ಇವರನ್ನು ನೇಮಿಸಿ ಇವರ ಕೈಯೊಳಗೆ ಇಬ್ಬರು ಕಾರಕೂನರನ್ನು ಕೊಟ್ಟು ಗೊತ್ತು ಮಾಡಿರುತ್ತಾರೆ.

ಮೊದಲನೆ ದಿವಸ ಸಭೆಯೊಳಗೆ ಚೆನ್ನಬಸಪ್ಪನವರು ಲಿಂಗವಂತ ಜನರನ್ನು ಹುರಿದುಂಬಿಸುವುದಕ್ಕಾಗಿ ಸಂಭಾಷಣೆಯ ಮಾಡಿದರು. ಆಗ ಬೆಳಗಾವಿಯ ಗಣಾಚಾರಿ ಪಟ್ಟದಪ್ಪನವರೂ, ಶಾಪೂರ ಬೋಳಮಲ್ಲಿ ಶಿವಲಿಂಗಪ್ಪನವರೂ, ಬೈಲಹೊಂಗಲದ ಜವಳಿ ಉಳವಪ್ಪನವರೂ ಒಬ್ಬೊಬ್ಬ ವಿದ್ಯಾರ್ಥಿಗೆ ಆಗುವಷ್ಟು ಖರ್ಚು ನಾವು ನಮ್ಮ ಪದರಿನಿಂದ

ನಡಿಸುತ್ತೇವೆಂದು ಎದ್ದು ಹೇಳಿದರು. ಇದೇ ಮೇರಿಗೆ ಮತ್ತೂ ಕೆಲವು ಗೃಹಸ್ತರು ಹೇಳಿರುತ್ತಾರೆ".
(ಶಾಲಾಪತ್ರಿಕೆ - ಪುಸ್ತಕ ೪, ಸಂಚಿಕೆ-೮, ನವೆಂಬರ ೧೮೬೭)

ಇಲ್ಲಿಯ ತನಕ ಪರಿಶೀಲಿಸಿದ ಸರ್ಕ್ಯೂಲರ್, ನೋಟೀಸು, ಬಿಂನಹ ಪತ್ರಗಳ ಆಧಾರದಿಂದ ಹೇಳುವುದಾದರೆ, ಚೆನ್ನಬಸಪ್ಪನವರು ತಮ್ಮ ಪಟ್ಟು ಬಿಡದ ಸ್ವಭಾವದಿಂದಾಗಿ, ಬೋರ್ಡಿಂಗ್‌ನ್ನು ಸ್ಥಾಪಿಸುವಲ್ಲಿ ಯಶಸ್ವಿಯಾಗುತ್ತಾರೆ. ಈ ನಿಟ್ಟಿನಲ್ಲಿ ಚಿತ್ರದುರ್ಗ ಮಹಾಸ್ವಾಮಿಗಳ, ಪಾಲಕರ, ವಿದ್ಯಾರ್ಥಿಗಳ ಮತ್ತು ನೆರವು ನೀಡುವ ಇತರರ ಮನವೊಲಿಸಿ ಬೋರ್ಡಿಂಗ್ ಪರಂಪರೆಗೆ ಶ್ರೀಕಾರ ಬರೆದ ಚೆನ್ನಬಸಪ್ಪನವರ ಕತೃತ್ವಶಕ್ತಿ ಅಸಾಧಾರಣವಾದುದು.

ಲಿಂಗಾಯತರ ಕನ್ನಡ ನಿಷ್ಠೆಯನ್ನು ಅರ್ಥಮಾಡಿಕೊಂಡಿದ್ದ ರಸೆಲ್ಲರು, ಅವರಿಗೆ ಕನ್ನಡದ ಪುನರುಜ್ಜೀವನ ಸಂದರ್ಭದಲ್ಲಿ ಶೈಕ್ಷಣಿಕ ಪ್ರೋತ್ಸಾಹ ನೀಡಿದರಲ್ಲದೆ, ಮೇಲೆ ಸೂಚಿಸಿದ ಸರ್ಕ್ಯುಲರ ಹೊರಡಿಸುವ ಮೂಲಕ ಲಿಂಗಾಯತ ಬೋರ್ಡಿಂಗ ಸ್ಥಾಪನೆಯ ಕಾರ್ಯವನ್ನು ಅತ್ಯಂತ ಕಳಕಳಿಯಿಂದ ಬೆಂಬಲಿಸಿದರೆಂದು ಹೇಳಬೇಕಾಗುತ್ತದೆ. ಬಹುಶಃ ಇವೆಲ್ಲವನ್ನು ಗಮನಿಸಿಯೇ ವೆಂಕಟ ರಂಗೋ ಕಟ್ಟಿಯವರು "ರಸೆಲ್ಲರ ಆಡಳಿತದಿಂದ ವೀರಶೈವರಿಗೆ ವಿಶೇಷ ಲಾಭವಾಗಿದೆ. ಆದ್ದರಿಂದ ಅವರು ರಸೆಲ್ಲರ ಚಿರಸ್ಮರಣೆಗಾಗಿ ಒಂದು ಸ್ಮಾರಕ ನಿರ್ಮಿಸುವುದು ಅವಶ್ಯ"[೪] ಎಂದು ಹೇಳಿದಂತಿದೆ.

ಬೋರ್ಡಿಗ್ ನಡೆಸುವ ಸಂದರ್ಭದಲ್ಲಿ ಉದ್ಭವಿಸಿದ ಕಠಿಣ ಪರಿಸ್ಥಿತಿಯನ್ನು ಅರಟಾಳ ಅವರು ಹೀಗೆ ವಿವರಿಸುತ್ತಾರೆ: "ಕೆಲಕಾಲ ಬೋರ್ಡಿಂಗ್ ನಡೆಯಿತು. ಮುಂದೆ ಪ್ರತಿತಿಂಗಳಿಗೆ ಹಣ ಬರಲಿಲ್ಲ. ಆದರೂ ಮಿ.ಚೆನ್ನಬಸಪ್ಪನವರು ಮಾರವಾಡೇರ ಹತ್ತಿರ ಉದ್ರಿಯಿಂದ ಬೇಕಾದ ಸಾಮಾನು ಖರೀದಿ ಮಾಡಿಕೊಟ್ಟರು. ಮುಂದೆ ಸ್ವಲ್ಪ ಕಾಲದಲ್ಲಿ ಶ್ರೀಗಳವರು ಜ್ವರದಿಂದ ರೋಗಗ್ರಸ್ಥರಾದರು. ಗುಳೇದಗುಡ್ಡದ ಗ್ರಾಮದಲ್ಲಿ ವಿಷಮಜ್ವರ ಪೀಡಿತರಾಗಿ ತಿರುಗಿ ಮೇಣೇದೊಳಗಿಂದ ಶಿವಪೇಟೆಗೆ ಬರುವಾಗ್ಗೆ ಮಾರ್ಗದಲ್ಲಿ ಶಿವಾಧೀನರಾದರು. ಶ್ರೀಗಳವರ ಶವವನ್ನು ಶಿರಸಂಗಿ ಗ್ರಾಮಕ್ಕೆ ತಂದು ಯೋಗಸಮಾಧಿಯಲ್ಲಿ ದಪಣಮಾಡಿದರು.

(ಆಮೇಲ) ಬೆಳಗಾವಿಯಲ್ಲಿ ಮಾರವಾಡೇರು ತಮಗೆ ಬರತಕ್ಕ ಬಾಕೀ ಹಣವನ್ನು ಮಿ.ಚೆನ್ನಬಸಪ್ಪನವರ ಮೇಲೆ ದಾವೇಮಾಡಿ ವಸೂಲ ಮಾಡಿಕೊಂಡರು. ಈ ಪ್ರಸಂಗದಲ್ಲಿ ಅಣ್ಣನವರಿಗೆ ತಮ್ಮ ಕುಟುಂಬದ ಮೈಮೇಲಿನ ಆಭರಣಗಳನ್ನು ಮಾರಿ ಹಣವನ್ನು ಮುಟ್ಟಿಸಬೇಕಾಯಿತು. ಆಮೇಲೆ ಮಿ.ಚೆನ್ನಬಸಪ್ಪನವರಿಗೆ ಧಾರವಾಡ ಜಿಲ್ಲೇದ ಡೆ.ಎ.ಇನ್‌ಸ್ಪೆಕ್ಟರ ಜಾಗಕ್ಕೆ ವರ್ಗವಾಯಿತು".[೫]

ನವ್ಹೆಂಬರ ೧೮೬೮ರ ವರೆಗೂ ಬೋರ್ಡಿಂಗ್‌ನಲ್ಲಿ ವಿದ್ಯಾರ್ಥಿಗಳಿಗೆ ಪ್ರವೇಶ ನೀಡುವಷ್ಟರಲ್ಲಿ ಡೆಪ್ಯೂಟಿಯವರಿಗೆ ಧಾರವಾಡಕ್ಕೆ ವರ್ಗವಾಯಿತು. ಮುಂದೆ ಈ ಬೋರ್ಡಿಂಗ್ ಎಷ್ಟು ಕಾಲ ನಡೆಯಿತೆಂಬುದು ಸ್ಪಷ್ಟವಿಲ್ಲ. ನೂರು ದೇವಾಲಯಗಳನ್ನು ಕಟ್ಟಿದ್ದರೂ ಅವು ಇಂದು ಕಾಲಗರ್ಭದಲ್ಲಿ ಮರೆಯಾಗಿ ಮರೆತುಹೋಗುತ್ತಿದ್ದವು. ಆದರೆ ಚೆನ್ನಬಸಪ್ಪನವರು

---

೪. ಕನ್ನಡದ ದೀಪ : ಹಂಜಿ. ಸ.ವೀ ತಿ ಲಿಂಗೈಕ್ಯ ಡೆಪ್ಯೂಟಿ ಚೆನ್ನಬಸಪ್ಪನವರ ವಂಶಜರು, ಪುಟ. ೨೪.
೫. ಅರಟಾಳ ರುದ್ರಗೌಡರನ್ನು ಕುರಿತ ಅಪ್ರಕಟಿತ ಜೀವನ ಚರಿತ್ರೆ.

ಇಷ್ಟೆಲ್ಲ ಯಾತನೆ ಪಟ್ಟ 'ಪ್ರಸಾದನಿಲಯ ಸಂಸ್ಕೃತಿ'ಯು ಮಾತ್ರ ಬದುಕನ್ನು ಸಂಸ್ಕರಿಸುವ ಕೆಲಸಮಾಡುತ್ತಲೇ ಇನ್ನೂ ವೀರಶೈವರಲ್ಲಿ ಮುನ್ನಡೆದಿದೆ. ಹೀಗೆ ಒಂದರ್ಥದಲ್ಲಿ ಸಂಸ್ಕೃತಿ ಬಿತ್ತುವ ಕೆಲಸದಲ್ಲಿ ಚೆನ್ನಬಸಪ್ಪನವರು ಪಟ್ಟ ಪರಿಶ್ರಮ ಎಲ್ಲ ನಿಟ್ಟಿನಿಂದಲೂ ಶ್ಲಾಘನೀಯವಾದುದು.



## ಚೆನ್ನಬಸಪ್ಪನವರ ಬರವಣಿಗೆ

ನಾಡು-ನುಡಿಯ ಬಗ್ಗೆ ನಿಗಿನಿಗಿಸುವ ಪ್ರಜ್ಞೆಯನ್ನು ಇಟ್ಟುಕೊಂಡು ಆಮರಣಾಂತ ಹೋರಾಟ ನಡೆಸಿದ ಚೆನ್ನಬಸಪ್ಪನವರು ಸ್ವತಃ ಕನ್ನಡ ಸಾಹಿತಿಗಳಾಗಿದ್ದರೇ? ಸಾಹಿತಿಗಳೆಂದು ಬೆರಳಿಟ್ಟು ಗುರುತಿಸುವಷ್ಟು ಸಾಹಿತ್ಯವನ್ನು ಅವರು ಸೃಷ್ಟಿಸಿದ್ದರೇ? ಎಂಬಂತಹ ಕುತೂಹಲದ ಪ್ರಶ್ನೆಗಳು ಅನೇಕರಲ್ಲಿ ಉದ್ಭವಿಸುವುದು ಸ್ವಾಭಾವಿಕ. ಈಗ ನಮಗೆ ತಿಳಿದಿರುವ ಮಟ್ಟಿಗೆ ಶೇಕ್ಸಪಿಯರನ ಎರಡು ಕೃತಿಗಳನ್ನು ಕನ್ನಡಕ್ಕೆ ಅವರು ಭಾಷಾಂತರಿಸಿದ ಬಗ್ಗೆ ಸ್ಪಷ್ಟ ಉಲ್ಲೇಖಗಳಿವೆ. ಅಲ್ಲದೆ ಅವರ ನಾಲ್ಕು ಗಣಿತ (ಎರಡು ಕನ್ನಡ, ಎರಡು ಮರಾಠಿ) ಪುಸ್ತಕಗಳಲ್ಲಿ ಎರಡು ಮಾತ್ರ(ಒಂದು ಕನ್ನಡ, ಒಂದು ಮರಾಠಿ) ಉಪಲಬ್ಧವಿದ್ದು, ಈ ಎಲ್ಲ ಕೃತಿಗಳ ವಿವರವನ್ನು ಇಲ್ಲಿ ನೋಡಬಹುದು:

### ಅನುವಾದ ಕೃತಿಗಳು

ಡೆಪ್ಯೂಟಿಯವರು ಶೇಕ್ಸಪಿಯರನ ಕಾಮೆಡಿ ಆಫ್ ಎರರ್ಸ್ ಮತ್ತು ಮ್ಯಾಕಬೆಥ್ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ ಬಗ್ಗೆ ಸೂಚನೆಗಳು ಸಿಗುತ್ತವೆ. ಆ ವಿವರ ಹೀಗಿದೆ: ಕಾಮೆಡಿ ಆಫ್ ಎರರ್ಸ್‌ದ ಅನುವಾದದ ಒಂದು ಪ್ರತಿಯನ್ನು ಸ್ವೀಕರಿಸಿದ 'ಶಾಲಾಪತ್ರಕ' ತನ್ನ ಅಭಿಪ್ರಾಯವನ್ನು ಮುಂದೆ ಪ್ರಕಟಿಸುವುದಾಗಿ ಹೀಗೆ ತಿಳಿಸಿದೆ :

"ಹೊಸ ಪುಸ್ತಕವು : ಧಾರವಾಡ ಜಿಲ್ಲೆಯ ಇನ್‌ಸ್ಪೆಕ್ಟರರಾದ ರಾ.ರಾ.ಚೆನ್ನಬಸಪ್ಪ ಬಸಲಿಂಗಪ್ಪ ಇವರು ಇಂಗ್ಲೀಷದಿಂದ ಕನ್ನಡ ಭಾಷೆಯೊಳಗೆ ಭಾಷಾಂತರ ಮಾಡಿ, ಧಾರವಾಡದೊಳಗೆ ಶಿಲಾಯಂತ್ರದಲ್ಲಿ ಛಾಪಿಸಿದ"ನಗದವರನ್ನು ನಗಿಸುವಂಥ ಒಂದು ಬಹು ಚಮತ್ಕಾರದ ಕಥೆಯು"ಯೆಂಬ ಪುಸ್ತಕದ್ದೊಂದು ಪ್ರತಿಯನ್ನು ನಮಗೆ ಕಳುಹಿಸಿದಂತೆ ನಾವು ಅತ್ಯಾದರಪೂರ್ವಕವಾಗಿ ಅದನ್ನು ಸ್ವೀಕರಿಸುತ್ತೇವೆ. ಈ ಪುಸ್ತಕದ ಬಗ್ಗೆ ನಮ್ಮ ಅಭಿಪ್ರಾಯವನ್ನು ಬೇಗ ಪ್ರಕಟಿಸುವೆವು".[೧] ಈ ಸಾದರ ಸ್ವೀಕೃತಿಯಿಂದ ಚೆನ್ನಬಸಪ್ಪನವರು ಈ ಕೃತಿಯನ್ನು ರಚಿಸಿದ್ದು ಸ್ಪಷ್ಟವಾಗುತ್ತದೆ.[೨] ಈ ಅವಧಿಯಲ್ಲಿ ಶಾಲಾಪತ್ರಕದ ಪ್ರಧಾನ

---

೧. ಶಾಲಾಪತ್ರಕವು : (ಜೂನ್ ೧೮೭೨) ಪುಟ.೭೦.

೨. ಅರಟಾಳ ರುದ್ರಗೌಡರ ಜೀವನ ಚರಿತ್ರೆಭಾಗ-೧ ಪುಟ. ೮೬. ಇಲ್ಲಿಯೂ ಪುಸ್ತಕದ ಹೆಸರನ್ನು ಮಾತ್ರ ಪ್ರಸ್ತಾಪಿಸಲಾಗಿದೆ.

ಸಂಪಾದಕರು ಹುಯಿಲಗೋಳ ಭುಜಂಗರಾಯರು. ಶಾಂತವೀರ ರಾಚಿದೇವ ಸಹಸಂಪಾದಕರು. ರಸೆಲ್ ಸಾಹೇಬರು ಸಂಚಾಲಕರರಾಗಿದ್ದರು. ಹೀಗಿದ್ದೂ ನಂತರದ 'ಶಾಲಾಪತ್ರಕ' ಸಂಚಿಕೆಗಳಲ್ಲಿ ಪ್ರಸ್ತುತ ಕೃತಿಯ ಬಗ್ಗೆ 'ಅಭಿಪ್ರಾಯ' ಪ್ರಕಟವಾಗದಿದ್ದುದು ಸಖೇದಾಶ್ಚರ್ಯಕ್ಕೆ ಎಡೆಮಾಡಿಕೊಟ್ಟಿದೆ. ಈ ವರೆಗೆ ಎಷ್ಟೇ ಪ್ರಯತ್ನಿಸಿದರೂ ಆ ಕೃತಿ ಲಭಿಸದಿರುವುದು ಇನ್ನೂ ನೋವಿನ ಸಂಗತಿಯಾಗಿದೆ.

'ಶಾಲಾಪತ್ರಕ'ದ ತರುವಾಯ ನಮಗೆ ಈ ಕೃತಿಯ ಬಗ್ಗೆ ಮಾಹಿತಿ ಸಿಗುವುದು ರೆವೆರೆಂಡ ಕಿಟೆಲ್‌ರು ಸಂಪಾದಿಸಿದ ನಾಗವರ್ಮನ 'ವಂದೋಂಬುಧಿ'ಗೆ ಪ್ರಸ್ತಾವನೆಯಾಗಿ ಇಂಗ್ಲೀಷ್‌ನಲ್ಲಿ ಬರೆದ "ಕನ್ನಡ ಸಾಹಿತ್ಯ ಕುರಿತು" ಎಂಬ ಪ್ರಬಂಧದಲ್ಲಿ . ಅಲ್ಲಿ "Chennabasappa Basalingappa Dharwad as Deputy Educational Inspector ventured on a translation of Shakespeare's Comedy of Errors, 1871 had it printed at Dharwad under the title "A wonderful story that will cause to laugh who do not laugh"[೩] ಎಂಬ ವಿವರಣೆ ಬರುತ್ತಿದ್ದು, ಇದರ ಪ್ರತಿ ಕಿಟೆಲ್‌ರ ಗಮನಕ್ಕೂ ಬಂದುದು ಸ್ಪಷ್ಟವಾಗುತ್ತದೆ. ಅಲ್ಲದೆ ಇದು ೧೮೭೧ರಲ್ಲಿಯೇ ಧಾರವಾಡದಲ್ಲಿ ಮುದ್ರಣಗೊಂಡ ವಿಚಾರವೂ ತಿಳಿಯುತ್ತದೆ. ಅಂದರೆ ಚೆನ್ನಬಸಪ್ಪನವರ 'ನಗದವರನ್ನು ನಗಿಸುವಂಥ ಒಂದು ಬಹು ಚಮತ್ಕಾರದ ಕಥೆಯು' ೧೮೭೧ಕ್ಕಿಂತ ಮೊದಲೇ ರಚನೆಯಾಗಿದ್ದಿರಬೇಕು. ಆದರೆ ೧೮೭೨ರಲ್ಲಿ ಶಾಲಾಪತ್ರಕರಲ್ಲಿ ಆದರ ಸಾದರಸ್ವೀಕೃತಿ ವಿಚಾರ ಪ್ರಕಟವಾಗಿದೆ.

ಫ.ಗು. ಹಳಕಟ್ಟಿಯವರು 'ಕೈ.ವಾ. ಚೆನ್ನಬಸಪ್ಪ ಬಸಲಿಂಗಪ್ಪ ಧಾರವಾಡ, ಇವರ ಚರಿತ್ರೆಯು' (೧೯೩೦) ಗ್ರಂಥದಲ್ಲಿ ಶೇಕ್ಸಪಿಯರನ ಕೃತಿಗಳನ್ನು ಚೆನ್ನಬಸಪ್ಪನವರು ಕನ್ನಡಕ್ಕೆ ಭಾಷಾಂತರಿಸಿದ ವಿಚಾರವನ್ನು ಪ್ರಸ್ತಾಪಿಸಿ, ಅವರು "ಕಾಮೆಡಿ ಆಫ್ ಎರರ್ಸ" ಮತ್ತು "ಮ್ಯಾಕಬೆಥ್" ಎಂಬ ಎರಡು ಇಂಗ್ಲೀಷ ನಾಟಕಗಳನ್ನು ಕನ್ನಡದಲ್ಲಿ ಭಾಷಾಂತರಿಸಿದರು; ಇವುಗಳ ಭಾಷೆಯು ಅಷ್ಟೇನು ಮೇಲ್ತರದಿರದಿದ್ದರೂ ಇವು ಚೆನ್ನಬಸಪ್ಪನವರ ಮನಸ್ಸಿನ ಒಲವನ್ನೂ ಕನ್ನಡ ಭಾಷೆಯ ಸೇವೆಯನ್ನೂ ಮಾಡಬೇಕೆಂಬ ಅವರ ಆಕಾಂಕ್ಷೆಯನ್ನು ಪ್ರಕಟಿಸುತ್ತವೆ"[೪] ಎಂದು ಹೇಳಲಾಗಿದೆ. ಇವುಗಳಲ್ಲಿ "ನಗದವರನ್ನು ನಗಿಸುವ ಬಹು ಚಮತ್ಕಾರದ ಕಥೆಯು" ಎಂಬುದನ್ನು ಇತ್ತೀಚಿನ ಚರಿತ್ರೆಕಾರರು "ನಗದವರನ್ನು ನಗಿಸುವ ಕಥೆಯು" ಎಂದಷ್ಟೇ ದಾಖಲಿಸುತ್ತಿದ್ದಾರೆ. ಅದೇನೆ ಇದ್ದರೂ ಇವರು ಭಾಷಾಂತರಿಸಿದ ಕೃತಿಗಳ ಉಲ್ಲೇಖ ಅಲ್ಲಲ್ಲಿ ಕಂಡು ಬರುತ್ತಿದ್ದರೂ ಈಗ ಆ ಕೃತಿಗಳು ಅನುಪಲಬ್ಧವಾಗಿರುವುದರಿಂದ ಆ ಬಗ್ಗೆ ಕರಾರುವಾಕ್ಕಾಗಿ ಏನೂ ಹೇಳುವುದು ಸಾಧ್ಯವಾಗದುದಕ್ಕೆ ವಿಷಾದವೆನಿಸುತ್ತದೆ.

---

೩. ನಾಗವರ್ಮನ ಕನ್ನಡ ಛಂದಸ್ಸು: By Rev. F.Kittle An Essay on canarese literature page.L.XXI. Mangalore 1895.

೪. ಹಳಕಟ್ಟಿ ಫ.ಗು.: ಕೈ.ವಾ. ಚೆನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು ಪುಟ.೧೫

## ಗಣಿತ ಪುಸ್ತಕಗಳು

ಮೇಲೆ ಉಲ್ಲೇಖಿಸಿದ ಎರಡು ಭಾಷಾಂತರಗಳನ್ನಲ್ಲದೆ ಕನ್ನಡದಲ್ಲಿ ಎರಡು ಅಂಕ ಗಣಿತ, ಮರಾಠಿಯಲ್ಲಿ ಎರಡು ಬೀಜಗಣಿತ - ಹೀಗೆ ಗಣಿತವನ್ನು ವಿಷಯವನ್ನು ಕುರಿತು ೪ ಗ್ರಂಥಗಳನ್ನು ಬರೆದಿರುವರು. ಇವುಗಳಲ್ಲಿ ಒಂದು ಕನ್ನಡ ಗಣಿತ, ಒಂದು ಮರಾಠಿ ಗಣಿತ ಪುಸ್ತಕಗಳು ಉಪಲಬ್ಧವಿಲ್ಲ. ಮರಾಠಿಯ ಎರಡು ಬೀಜಗಣಿತಗಳ ಪೈಕಿ 'ಸಮೀಕರಣ ಸಂಗ್ರಹ'ವು ಮಾತ್ರ ಪುಣೆಯ "ಮಹಾರಾಷ್ಟ್ರ ಶಾಸಕೀಯ ವಿಭಾಗ" (ವಿಶ್ರಾಮ ಭಾಗ) ಗ್ರಂಥಾಲಯದಲ್ಲಿತ್ತು. ಇದರ ಬಗ್ಗೆ ಮೊದಲು ಮಾಹಿತಿ ಸಂಗ್ರಹಿಸಿದ್ದ ಡಾ.ಶ್ರೀನಿವಾಸ ಹಾವನೂರರ ನೆರವಿನಿಂದ ಕ್ಷೇತ್ರಕಾರ್ಯ ನಡೆಸಿ ಅದನ್ನು ಪಡೆದುಕೊಳ್ಳಲಾಗಿದೆ. "ಸಮೀಕರಣ ಅಥವಾ ಸಿದ್ಧಾಂತ ಸಂಗ್ರಹ ಭಾಗ-೨" ಇನ್ನೊಂದು ಗಣಿತ ಪುಸ್ತಕ ಅದೇ ಗ್ರಂಥಾಲಯದ ಪುಸ್ತಕ ಸೂಚಿ ರಜಿಸ್ಟರದಲ್ಲಿ ನಮೂದಿಸಲ್ಪಟ್ಟಿದ್ದರೂ ಕೃತಿ ಮಾತ್ರ ಲಭ್ಯವಾಗಲಿಲ್ಲ.

ಇವರು ಕನ್ನಡದಲ್ಲಿ ಬರೆದಿದ್ದ ಎರಡು ಅಂಕಗಣಿತಗಳು ಸಾಕಷ್ಟು ಜನಪ್ರಿಯವಾಗಿದ್ದಂತೆ ತೋರುತ್ತದೆ. ೧೮೬೮ರ ಶಾಲಾಪತ್ರಕದ ಜಾಹಿರಾತೊಂದು ಈ ಬಗ್ಗೆ ಹೀಗೆ ಉಲ್ಲೇಖ ಮಾಡಿದ್ದು ಕಂಡುಬರುತ್ತದೆ : "ಧಾರವಾಡ ಡಿಸ್ಟ್ರಿಕ್ಟ ಬುಕ್ ಡಿಪೋದಲ್ಲಿ ದೊರೆಯುವ ಬುಕ್‌ಗಳ ತಪಶೀಲು, ಕೆಳಗೆ ಬರೆದ ಕನ್ನಡ ಪುಸ್ತಕಗಳ ಹೆಸರುಗಳು" - ಎಂದು ಹಲವಾರು ಕನ್ನಡ ಪುಸ್ತಕಗಳ ಹೆಸರನ್ನು ಅವುಗಳ ಬೆಲೆ ಸಹಿತ ಯಾದಿ ಮಾಡುತ್ತ ಆ ಯಾದಿಯ ಅನುಕ್ರಮ ನಂಬರ ೨೧ ರ ಮುಂದೆ "ಅಂಕಗಣಿತ-ಚೆನ್ನಬಸಪ್ಪನವರು ಮಾಡಿದ್ದು -ದರ- ೦೦-೧೪-೦೦" ಎಂದು ಸ್ಪಷ್ಟವಾಗಿ ಸೂಚಿಸಲಾಗಿದೆ. ಹೀಗೆ ಎಲ್ಲ ಪುಸ್ತಕಗಳ ಹೆಸರಿನ ಯಾದಿ ಕೊಟ್ಟ ನಂತರ ಮೇಲೆ ಮತ್ತೂ ಒಂದು ಗಮನ ಸೆಳೆವ ಸೂಚನೆಯಿದೆ. ಅದರಲ್ಲಿ ....(ಈ) "ಪುಸ್ತಕಗಳು ಶಿಲಕು ಇಲ್ಲದ ದಸಿಯಿಂದಾ ಧಾರವಾಡ ಜಿಲ್ಲೆಯಲ್ಲಿ ಬೊಬ್ಬಾಟ ಆಗಿತ್ತು. ಈಗ ಪುಸ್ತಕಗಳು ಬಂದದರಿಂದಾ ಎಲ್ಲರಿಗೂ ತಿಳಿಯೋ ದಶಿಯಿಂದಾ ಈ ಜಾಹೀರನಾಮೆ ಕೊಟ್ಟಿದೆ" - ಎಂದು ಹೇಳಿ ಅಡಿಯಲ್ಲಿ "ವಿಶ್ವನಾಥ ಮೋರೇಶ್ವರ ಬಾಪಟ ಡಿ. ಬುಕ್ ಡಿಪೋಕೀಪರ"[೫] ಎಂಬ ವಿಳಾಸ ಕೂಡಾ ಕೊಡಲ್ಪಟ್ಟಿದೆ.

ಈ 'ಜಾಹೀರನಾಮೆ'ಯಲ್ಲಿ ನಮಗೆ ಮುಖ್ಯವಾದದ್ದು ಪುಸ್ತಕ ತೀರಿ ಬೊಬ್ಬಾಟಕ್ಕೆ ಕಾರಣವಾದವುಗಳ ಪೈಕಿ ಚೆನ್ನಬಸಪ್ಪನವರ ಅಂಕಗಣಿತವೂ ಒಂದೆಂಬ ಸಂಗತಿಯು. ಆರಟಾಳ ರುದ್ರಗೌಡರ ಟಿಪ್ಪಣಿಯು ಪ್ರಸ್ತುತ ಅಭಿಪ್ರಾಯವನ್ನೇ ಇನ್ನಷ್ಟು ಹರಳುಗಟ್ಟಿಸುತ್ತದೆ. ಅವರು ಚೆನ್ನಬಸಪ್ಪನವರ ಗಣಿತಜ್ಞಾನ ಮತ್ತು ಅವುಗಳ ಜನಪ್ರಿಯತೆಯನ್ನು ಕೊಂಡಾಡುತ್ತ "ಇವರ (ಚೆನ್ನಬಸಪ್ಪನವರ) ಮತಿಯು ಗಣಿತ ವಿಷಯದಲ್ಲಿ ಒಳ್ಳೆಯ ತೀವ್ರವಾದ ಗತಿಯುಳ್ಳದಾಗಿತ್ತು. ಇದರಾಚೆಗೆ ಕನ್ನಡದಲ್ಲಿ ಗಣಿತ ಪುಸ್ತಕಗಳನ್ನು ಯಾರೂ ಮಾಡಿದ್ದಿಲ್ಲ. ಅದರಿಂದ ಮುಂಬೈ ಕರ್ನಾಟಕದ ಪ್ರಾಥಮಿಕ ಶಾಲೆಗಳ ವಿದ್ಯಾರ್ಥಿಗಳಿಗೆ ಬಹಳೇ ತೊಂದರೆಯಾಗುತ್ತಿತ್ತು. ಈ ತೊಂದರೆಯನ್ನು ಪರಿಹರಿಸುವದಕ್ಕೋಸ್ಕರ ಕನ್ನಡದಲ್ಲಿ ಎರಡು ಅಂಕಗಣಿತ ಪುಸ್ತಕಗಳನ್ನು ಬರೆದರು. ಇವೆರಡು ಪುಸ್ತಕಗಳು ಸರಕಾರದಿಂದ ಮಾನ್ಯ ಮಾಡಲ್ಪಟ್ಟು ಗವರ್ನಮೆಂಟಾಗಿ ಎಲ್ಲ ಶಾಲೆಗಳಲ್ಲಿ ಈಗಲೂ ಕಲಿಸಲ್ಪಡುತ್ತವೆ. ಚೆನ್ನಬಸಪ್ಪನವರ ಗಣಿತ ಪುಸ್ತಕರಗಳೆಂದು ಎಲ್ಲ ಕಡೆಗೂ ಪ್ರಸಿದ್ಧಿಯುಂಟು. ಈ ಅಂಕಗಣಿತ ಪುಸ್ತಕಗಳನ್ನಲ್ಲದೆ ಇವರು ಬೀಜಗಣಿತ,

---

೫. ಶಾಲಾಪತ್ರಕ : (೧೮೬೮)ಪುಟ. ೨೬೧ ರಿಂದ ೨೬೪.

ನಗದವರನ್ನು ನಗಿಸುವ ಕಥೆ, ಮುಂತಾದ ಬೇರೆ ಎರಡು ಪುಸ್ತಕಗಳನ್ನು ಬರೆದಿರುವರು. ಇವರು ಧಾರವಾಡದಲ್ಲಿ ತಮ್ಮ ಮನೆಯಲ್ಲಿಯೇ ಕ್ರಿ.ಶ.೧೮೮೧ ನೇ ಇಸವಿಯಲ್ಲಿ ಜಾನೆವರಿ ತಿಂಗಳಲ್ಲಿ ಮೃತರಾದರು"[೬] ಎಂದು ಬರೆದಿದ್ದಾರೆ. ಈ ವಿಚಾರಗಳನ್ನು ಗಮನಿಸಿದಾಗ ಗಣಿತ ವಿಷಯದ ಬಗ್ಗೆ ಚೆನ್ನಬಸಪ್ಪನವರಿಗಿದ್ದ ಆಸಕ್ತಿ, ಅವರು ಬರೆದ ಪುಸ್ತಕಗಳಿದ್ದ ಮಹತ್ವ ಹಾಗೂ ಪ್ರಸಿದ್ಧಿ ಮತ್ತು ಅವು ಸರಕಾರದ ಮಾನ್ಯತೆ ಪಡೆದು ಪ್ರಾಥಮಿಕ ಶಾಲೆಗಳಲ್ಲಿ ಪಠ್ಯಗಳಾಗಿದ್ದ ಸಂಗತಿ ಇವೆಲ್ಲ ಥಟ್ಟನೆ ಹೊಳೆಯುತ್ತವೆ.

ಈ ಸಂದರ್ಭದಲ್ಲಿ ಮತ್ತೊಂದು ಅಂಶವೆಂದರೆ : ಆ ಕಾಲದಲ್ಲಿ ಗಣಿತ ಬಲ್ಲವನಿಗೆ ಸಾಮಾಜಿಕವಾದ ವಿಶೇಷಗೌರವ ಇರುತ್ತಿತ್ತು. ಪ್ರಾಯಶಃ ಗಣಿತ ವಿಷಯವು ಪ್ರತಿಯೊಬ್ಬರ ಜೀವನದಲ್ಲಿ ಪುನಃ ಪುನಃ ಎದುರಾಗುವ ವ್ಯಾವಹಾರಿಕ ಸಂಬಂಧವುಳ್ಳದ್ದೂ ಆಗಿರುವುದರಿಂದ ಶಿಕ್ಷಣ ಕ್ಷೇತ್ರದಲ್ಲಿಯಂತೂ ಅದಕ್ಕೆ ಪ್ರಾಶಸ್ತ್ಯವೂ ಇತ್ತು. ಬಹುಶಃ ಈ ಅಂಶವನ್ನು ಗಮನದಲ್ಲಿಟ್ಟುಕೊಂಡೇ ಚೆನ್ನಬಸಪ್ಪನವರು ಬಾಲ್ಯದಿಂದಲೂ ಆ ವಿಷಯದ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿದಂತೆ ತಿಳಿದು ಬರುತ್ತದೆ. ಪುಣೆಯಲ್ಲಿ ಅವರು ವಿದ್ಯಾರ್ಥಿಯಾಗಿದ್ದಾಗ ಗಣಿತ ವಿಷಯದಲ್ಲಿ ತಮಗಿದ್ದ ಪ್ರತಿಭೆಯನ್ನು ಹೊಮ್ಮಿಸುತ್ತಲೇ ಅವರು ಅಲ್ಲಿಯ ಶಿಕ್ಷಕರ, ಸಹಪಾಠಿಗಳ ವಿಶೇಷ ಪ್ರೀತಿಗೆ ಪಾತ್ರರಾದರೆಂಬ ವಿಚಾರವನ್ನು ಈ ಹಿಂದೆ ಉಲ್ಲೇಖಿಸಿದ್ದನ್ನು ನೆನಪಿಸಿಕೊಳ್ಳಬೇಕು.

ಈ ವಿಷಯದ ಬಗೆಗಿದ್ದ ಆಸಕ್ತಿಯು ಚೆನ್ನಬಸಪ್ಪನವರನ್ನು ಅವರ ಕಾರ್ಯ ಬಾಹುಳ್ಯದ ಮಧ್ಯೆಯೂ ಸುಮ್ಮನಿರಲು ಬಿಡುತ್ತಿರಲಿಲ್ಲವೆಂಬುದಕ್ಕೆ ಇತ್ತೀಚೆಗೆ ದೊರೆತ ಅವರ 'ಕನ್ನಡ ಅಂಕಗಣಿತ ಭಾಗ-೨' ಪುಸ್ತಕವೇ ಸಾಕ್ಷಿ. ಚೆನ್ನಬಸಪ್ಪನವರ ಗಣಿತಾಸಕ್ತಿಯ ಬಗೆಗೆ ಇದೊಂದು ಹೆಮ್ಮೆಯ ದಾಖಲೆ ಕೂಡಾ. ಆ ಪುಸ್ತಕವು ಸುಮಾರು ಸನ್ ೧೮೬೭ರ ಎಡಬಲದಲ್ಲಿ ರಚಿತವಾಗಿರಬೇಕೆಂದು ತೋರುತ್ತದೆ. ಯಾಕೆಂದರೆ, ನಮಗೆ ಸಿಕ್ಕಿರುವ ಇದರ ನಾಲ್ಕನೆಯ ಆವೃತ್ತಿಯ ಮುಖಪುಟದ ಒಳಬದಿಯ ಪುಟಗಳೆರಡರ ಪೈಕಿ ಒಂದು ಇಂಗ್ಲೀಷಿನಲ್ಲೂ, ಇನ್ನೊಂದು ಕನ್ನಡದಲ್ಲೂ ಅಚ್ಚಾಗಿದ್ದು, ಅವೆರಡೂ ಪುಟಗಳ ವಿಷಯ ವಿವರ ಒಂದೇ ಆಗಿದೆ. ಅಲ್ಲಿಯ ಒಂದು ಅಂಶ ಹೀಗಿದೆ : "ಈ ಪುಸ್ತಕದ ಬಾಧ್ಯತೆಯು ಹಿಂದೂ ಸ್ಥಾನದ ಸರಕಾರದ ಸನ್ ೧೮೬೭ನೆಯ ಇಸವಿಯ ಆ್ಯಕ್ಟಿನಂತೆ ರಿಜಿಸ್ಟರ ಮಾಡಿ ಅದೆ" ಎಂಬುದನ್ನು ಗಮನಿಸುವಾಗ ಪ್ರಸ್ತುತ ಮಾತಿಗೆ ಸಮರ್ಥನೆ ಸಿಗುತ್ತದೆ. ನಮಗೆ ಸಿಕ್ಕಿರುವ ನಾಲ್ಕನೆಯ ಆವೃತ್ತಿಯನ್ನು ಮುಂಬಯಿ ಇಲಾಖೆಯೊಳಗಿನ ಸರಕಾರಿ ವಿದ್ಯಾಖಾತೆ (The Department of Public Instruction Bombay)ಯ ಆಧೀನದಲ್ಲಿ ಅಲ್ಲಿಯ ಗವರ್ನಮೆಂಟ ಸೆಂಟ್ರಲ್ ಬುಕ್ ಡಿಪೋ, ೧೮೯೭ರಲ್ಲಿ ಪಬ್ಲಿಶ್ ಮಾಡಿದೆ. ಈ ಆವೃತ್ತಿಯು ಮಂಗಳೂರಿನ ಕೊಡಿಯಾಲಬೈಲ ಪ್ರೆಸ್ಸಿನಲ್ಲಿ ಮುದ್ರಿತವಾಗಿದೆ. ಬೆಲೆ ೯।। ಆಣೆ, ಮುದ್ರಿತ ಪ್ರತಿಗಳು ೬೦೦೦ ಸಾವಿರ. ಸುಮಾರು ನೂರುವರ್ಷಗಳ ಹಿಂದೆಯೇ ಇದು ಮೂರು ಆವೃತ್ತಿಗಳನ್ನು ಕಂಡು, ಮತ್ತೆ ನಾಲ್ಕನೆಯ ಆವೃತ್ತಿಯಾಗಿ ಆರುಸಾವಿರ ಪ್ರತಿಗಳು ಅಚ್ಚಾಗಿರುವುದನ್ನು ನೋಡಿದರೆ ಆ ಪುಸ್ತಕಕ್ಕೆ ಇದ್ದ ಜನಮನ್ನಣೆ ಗಮನಕ್ಕೆ ಬರುತ್ತದೆ. ಅದರ ವಿಷಯ ವಿವರ ಹೀಗಿದೆ: ಕನ್ನಡ ಅಂಕಗಣಿತ ಭಾಗ೧ರ ಬಗ್ಗೆ ನಮಗೆ ಹೆಚ್ಚಿನ ಮಾಹಿತಿ ಏನೂ ಸಿಗುವುದಿಲ್ಲ. ಅದು ಸಿಕ್ಕರೆ ಚೆನ್ನಬಸಪ್ಪನವರ ಗಣಿತ ಜ್ಞಾನದ ಬಗ್ಗೆ ಇನ್ನಷ್ಟು ನಿಖರವಾಗಿ ಬರೆಯಲು ಸಾಧ್ಯವಾಗುತ್ತದೆ.

---

೬. ಹಿರೇಮಠ ಬಸವಯ್ಯ ಚನ್ನಬಸವಯ್ಯ (ಉರ್ಫ) ಕಂಬಿ - ಅರಟಾಳ ರುದ್ರಗೌಡ ಚನ್ನವೀರಗೌಡ. ಜೀವನ ಚರಿತ್ರ ಭಾಗ-೧, ಪುಟ.೮೬.

ಕನ್ನಡ ಅಂಕಗಣಿತ - ಭಾಗ ೨ :

೧೯೮ ಪುಟಗಳುಳ್ಳ ಈ ಪುಸ್ತಕದ (೪ನೆಯ ಆವೃತ್ತಿ ೧೮೯೭) ಮುದ್ರಣ ಸ್ಫುಟವಾದ, ದುಂಡಾದ ಕನ್ನಡ ಅಕ್ಷರ, ಅಂಕಿಗಳಿಂದೊಡಗೂಡಿದೆ. ಡೆಪ್ಯೂಟಿ ಚೆನ್ನಬಸಪ್ಪನವರ ಮರಣದ ನಂತರ ಪ್ರಕಟಗೊಂಡಿರುವ ಈ ೪ನೆಯ ಆವೃತ್ತಿ ಅವರ ಕನ್ನಡ ನಿಷ್ಠೆಗೆ ಬದ್ಧವಾದಂತಿದ್ದು, ಪಠ್ಯಭಾಗದಲ್ಲಿ ಎಲ್ಲಿಯೂ ಅಪ್ಪಿತಪ್ಪಿ ಕೂಡಾ ಅನ್ಯಭಾಷಾ ಲಿಪಿಗಳನ್ನು ಬಳಸಿದ್ದು ಕಂಡುಬರುವುದಿಲ್ಲ. ಶುದ್ಧವಾದ ಇಲ್ಲಿಯ ಕನ್ನಡ ಬಳಕೆಯನ್ನು ಗಮನಿಸಿದಾಗ, ಮರಾಠಿ ಭಾಷೆಯ ಪ್ರಭಾವವಲಯದಿಂದ ತಪ್ಪಿಸಿಕೊಂಡು ಬರೆಯುವ ದಿಟ್ಟನಿಲುಮೆ ಇದೆಂದು ತೋರುತ್ತದೆ. ಈ 'ಆವೃತ್ತಿ'ಯಲ್ಲಿ ಸೂಚಿಸಿದಂತೆ ಇದು ಚೆನ್ನಬಸಪ್ಪನವರಿಂದ ಬರೆಯಲ್ಪಟ್ಟಿದ್ದರೂ ಕನ್ನಡ ಟ್ರಾನ್ಸಲೇಟರರಿಂದ ಪರಿಷ್ಕರಿಸಲ್ಪಟ್ಟಿರುವುದೂ ಕಾರಣವಾಗಿ ಇದಕ್ಕೆ ಇನ್ನಷ್ಟು ಅಚ್ಚುಕಟ್ಟುತನ ಪ್ರಾಪ್ತವಾಗಿದೆ. ಈ ಪುಸ್ತಕದ ಹಕ್ಕುಗಳು ಸರಕಾರಕ್ಕೆ ಮೀಸಲಾಗಿವೆ.

ಇದು ಡೆಪ್ಯೂಟಿಯವರಿಂದ ರಚಿಸಲ್ಪಟ್ಟ ಅಂಕಗಣಿತದ ೨ನೇ ಭಾಗವಾಗಿರುವುದರಿಂದ ೫ನೇ ಪ್ರಕರಣ, ೬೮ನೇ ಕ್ರಮ ಸಂಖ್ಯೆಯಿಂದ ಇಲ್ಲಿ ವಿಷಯಾರಂಭವಾಗುತ್ತದೆ. ಅಂದರೆ ಬಹುಶಃ ಅಂಕಗಣಿತ ಭಾಗ-೧ರಲ್ಲಿ ೧-೪ ಪ್ರಕರಣಗಳು, ಕ್ರಮಸಂಖ್ಯೆ ೬೭ರ ವರೆಗಿನ ವಿಷಯಗಳು ನಿರೂಪಿತವಾಗಿರಬೇಕು. ಇದರ ಮುಂದಿನ ಭಾಗವೇ ಈ ಅಂಕಗಣಿತ ಭಾಗ-೨ ಎಂಬುದು ನಿರ್ವಿವಾದವಾದ ಸಂಗತಿ. ಇದರ ೫ನೇ ಪ್ರಕರಣದಲ್ಲಿ ಠೋಕತಾಳೆ, ೬ನೇ ಪ್ರಕರಣದಲ್ಲಿ ಪ್ರಮಾಣಗಣಿತ, ತ್ರೈರಾಶಿಕಗಳು, ಮಿಶ್ರ ಪ್ರಮಾಣಗಳು ಎಡೆ ಪಡೆದಿವೆ. ೬ನೇ ಪ್ರಕರಣವೇ ಈ ಪುಸ್ತಕದಲ್ಲಿ ದೊಡ್ಡ ಭಾಗ. ಸುಮಾರು ಒಟ್ಟು ಪುಸ್ತಕದ ಮುಕ್ಕಾಲು ಭಾಗವನ್ನು ಇದೇ ಆಕ್ರಮಿಸಿದೆ. ಹೀಗಾಗಿ ವಿಷಯ ವೈವಿಧ್ಯತೆಗೂ ಇಲ್ಲಿ ತಕ್ಕಷ್ಟು ಅವಕಾಶ ಸಿಕ್ಕಿದೆ. ಈ ಪ್ರಕರಣವು ಬಡ್ಡಿವ್ಯವಹಾರ ಕುರಿತು ವಿಷಯವನ್ನು ಆರಂಭಿಸಿ ಸರಳಬಡ್ಡಿ, ಚಕ್ರಬಡ್ಡಿ ಬಗ್ಗೆ ವಿವರಿಸುತ್ತ, ಮುಂದುವರೆದು ವಿಮಾ, ಕಮೀಶನ್, ದಲಾಲಿ, ಠೇವು ಹಾಗೂ ಅದರಲ್ಲಿಯ ಲಾಭ, ಲುಕಸಾನು, ಈ ವಿಷಯಗಳ ಬಗ್ಗೆ ಸ್ಪಷ್ಟ ತಿಳುವಳಿಕೆ ನೀಡುತ್ತದೆ. ಆ ತರುವಾಯ ಸಂಖ್ಯೆಗಳನ್ನು ಪ್ರಮಾಣದಲ್ಲಿ ವಿಭಾಗಿಸುವುದು, ವರ್ಗ, ಘನ, ಚತುರ್ಘಾತ, ಪಂಚಘಾತಗಳನ್ನು ವಿವರಿಸುತ್ತ ಇವುಗಳೊಟ್ಟಿಗೆ ವರ್ಗಾಂಕಗಳ ಗುಣಗಳು, ವರ್ಗಮೂಲ-ಘನಮೂಲಗಳನ್ನು ತೆಗೆಯುವದು, ಕ್ಷೇತ್ರಫಲತೆಗೆಯುವದು, ಘನಪರಿಮಿತಿ ಇತ್ಯಾದಿ ವಿಷಯಗಳನ್ನು ಸ್ಪಷ್ಟವಾಗಿ ಮನವರಿಕೆ ಮಾಡಿಕೊಡಲಾಗಿದೆ. ಇದರ ತರುವಾಯ ಪುಟ ೧೪೫ ರಿಂದ ೧೮೦ ರ ವರೆಗಿನ ೩೫ ಪುಟಗಳು 'ಪ್ರಶ್ನ ಸಮುದಾಯ' ಎಂಬ ವಿಭಾಗಕ್ಕೆ ಮೀಸಲಾಗಿವೆ. ಈ ಭಾಗದಲ್ಲಿ ಆಗಲೇ ಉಲ್ಲೇಖಿತವಾಗಿರುವ ವಿಷಯ ವೈವಿಧ್ಯಗಳನ್ನು ಆಧರಿಸಿ ಪ್ರತಿಯೊಂದು ವಿಷಯವೂ ಒಳಗೊಳ್ಳುವಂತೆ ಒಟ್ಟು ೨೭೫ ಪ್ರಶ್ನೆಗಳನ್ನು ಕೇಳಲಾಗಿದೆ. ಉತ್ತರಗಳಿಗೆ ಮೀಸಲಾಗಿರುವ ಕೊನೆಯ ಭಾಗದಲ್ಲಿ ಆ ಎಲ್ಲ ೨೭೫ ಪ್ರಶ್ನ ಸಮುದಾಯಗಳಿಗೂ ಉತ್ತರಗಳನ್ನು ಒದಗಿಸಲಾಗಿದೆ. ಈ ಕೃತಿಯಲ್ಲಿ ಹೆಚ್ಚಿನ 'ಅಭ್ಯಾಸ'ಕ್ಕಾಗಿ ಕೊಟ್ಟಿರುವ ಎಲ್ಲ ಉದಾಹರಣೆಗಳಿಗೂ ವಿಷಯಾನುಸಾರ ಉತ್ತರಗಳನ್ನು ಕೊಟ್ಟು ಆಸಕ್ತರಿಗೆ ಅತ್ಯಂತ ಅನುಕೂಲ ಮಾಡಿಕೊಡಲಾಗಿದೆ. ಇದು ಈ ಕೃತಿಯ ಒಟ್ಟು ಶಿಲ್ಪಮಾತ್ರ.

ವಸ್ತುವಿವೇಚನೆಯ ದೃಷ್ಟಿಯಿಂದ ನೋಡಿದರೆ, ಇದೊಂದು ಅತ್ಯಂತ ಗಮನಾರ್ಹ ಕೃತಿ ಎನಿಸುತ್ತದೆ. ಇದು ಸಮಕಾಲೀನ ಪರಿಸರದಲ್ಲಿ ತನ್ನ ಸಾಮಗ್ರಿಯ ಎಲ್ಲ ಬದಿಯಿಂದಲೂ

'ಜನಪ್ರಿಯ' ಹಾಗೂ 'ಪ್ರಸ್ತುತ' (relevent)ವೆನಿಸಿದ್ದಿತೆಂದು ತೋರುತ್ತದೆ. ಉದಾಹರಣೆಗೆ : ಮಣ, ಔನ್ಸು, ಡ್ರಾಮು, ಕ್ವಾರ್ಟರು, ಪೆನಿವೇಟು, ಗ್ರೇನಿಗೇನು, ರೂಡು, ಪೋಲಿ, ಪೆನ್ಸು, ಖಂಡುಗ, ಹೇರು, ಚಿಟ್ಟಿ, ಮೊದಲಾದ ತೂಕಕ್ಕೆ ಸಂಬಂಧಿಸಿದ ಶಬ್ದಗಳೂ, ಯಾರ್ಡು, ಮೊಳ, ಗಡ್ಡಿ, ಪೋಲು, ಇತ್ಯಾದಿ ಅಳತೆಗೆ ಬಳಸುತ್ತಿದ್ದ ಪದಗಳೂ, ಪೌಂಡು, ಶಿಲ್ಲಿಂಗು, ಪೆನಿ, ಅಣೆ, ಪಾವಲಿ, ದುಡ್ಡು, ಅದ್ದೇಲಿ, ಪೈ, ಗಿನಿ, ಮುಂತಾದ ನಾಣ್ಯನಾಮಗಳೂ, ವಜಾ, ಬಾಕಿ, ಕ್ರಯ, ಅಗ್ರಸರ, ಉಪಾಗ್ರಸರ, ಯುಗ್ಮ, ಜಿಂದಗಿ, ಗಂಟು, ಮುದ್ದಲು, ರಾಸು, ವಿಮಾ, ವಿಮೆಯ ಕತಬಿ, ಬದುಕು ಹವಾಲಿ, ತುಬಾಕಿ, ವೃಷ್ಯಫಲ ಇಂಥ ವ್ಯಾವಹಾರಿಕ ಪದಬಳಕೆಗಳೂ ಇದರಲ್ಲಿ ಇಡಿಕಿರಿದಿವೆ. ಈಗ ಇವುಗಳ ಸ್ಥಾನವನ್ನು ಹೊಸ ಪರಿಭಾಷೆಗಳು ಆವರಿಸಿಕೊಂಡಿವೆ. ಆದರೆ ಒಂದು ಸಾಮಾಜಿಕ ಘಟ್ಟದ ಸ್ಪಷ್ಟವಾದ ಹೆಜ್ಜೆಗಳನ್ನು ಇಲ್ಲಿ ಗುರುತಿಸಬಹುದಾಗಿದೆ.

ಈ ಕೃತಿಯ ಬಗ್ಗೆ ಹೇಳಲೇಬೇಕಾದ ಇನ್ನೊಂದು ಮಹತ್ವದ ಅಂಶವೆಂದರೆ, ಅದರ ಜನಪರ ದೃಷ್ಟಿ. ದೈನಂದಿನ ಜೀವನದಲ್ಲಿ ಮಾಮೂಲಿಯಾಗಿ ಬಳಕೆಯಾಗುತ್ತಿದ್ದ ಧಾನ್ಯ, ಪ್ರಾಣಿ, ಪದಾರ್ಥ ಸಲಕರಣೆಗಳನ್ನೇ ಇಲ್ಲಿ ಬಳಸಿಕೊಳ್ಳಲಾಗಿದೆ. ನಿದರ್ಶನಕ್ಕೆ ಬೆಲ್ಲ, ಕಡ್ಡಿ, ಗೋದಿ, ಯಾಲಕ್ಕಿ, ಅಳಲೀಕಾಯಿ, ಹವೀಜ, ಜೋಳ, ಎಮ್ಮೆ, ಆಡು, ಕುರಿ, ಕುದುರೆ, ಎತ್ತು, ತುಪ್ಪ, ಸಕ್ಕರೆ, ಎಣ್ಣೆ, ರೊಟ್ಟಿ, ತಂಬಿಗೆ, ಕೊಡ, ಜಕಾತಿ, ಗಡಿಯಾರ, ಅಡವಿ, ಪುಸ್ತಕ, ಬೆಳ್ಳಿ, ಬಂಗಾರ, ಗಿತ, ತೆಂಗಿನಕಾಯಿ, ಓಣಿ, ಕೊಪ್ಪರಿಗೆ, ಸಾಣೆಕಲ್ಲು, ಕಟ್ಟಿಗೆ, ಗಾಲಿ, ರಥ, ಇತ್ಯಾದಿಗಳನ್ನು ಉದಾಹರಿಸಬಹುದು.

ಇನ್ನು ಲೆಕ್ಕಗಳನ್ನು ತಿಳಿಸುವ ವಿಧಾನದ (Methodology) ಬಗ್ಗೆಯೂ ಹೇಳಬೇಕೆಂದರೆ; ಪ್ರತಿಯೊಂದು ಹೊಸರೀತಿಯನ್ನು ಹೇಳಿಕೊಡುವಾಗ ಸಾಧ್ಯವಿದ್ದಷ್ಟು ಸುಲಭ ದಾರಿಗಳನ್ನು ತೋರಿಸಿಕೊಡಲಾಗಿದೆ. ಪ್ರಾಯಶಃ ಠೋಕತಾಳೆ ಲೆಕ್ಕದ ಮಾದರಿಯೊಂದು ಈ ಅಭಿಪ್ರಾಯವನ್ನು ಸಮರ್ಥಿಸಬಹುದು.

**ಠೋಕ ತಾಳೆ**

"ಅಂಗಡಿಕಾರರು ತಮ್ಮ ಲೆಕ್ಕಗಳನ್ನು ಮಾಡುವದೊಂದು ರೀತಿಯುಂಟು. ಅದಕ್ಕೆ ಠೋಕತಾಳೆ ಎನ್ನುತ್ತಾರೆ. ಅವರು ಬಹುತರವಾಗಿ ಈ ರೀತಿಯಿಂದ ತಮ್ಮ ಲೆಕ್ಕಗಳನ್ನು ಮಾಡುತ್ತಾರೆ. ಹೀಗೆ ಮಾಡಿದರೆ ಲೆಕ್ಕಗಳು ತೀವ್ರ ಆಗುತ್ತವೆ. ಕೆಲವು ಲೆಕ್ಕಗಳನ್ನು ಈ ರೀತಿಯಿಂದ ಕೆಳಗೆ ಮಾಡಿ ತೋರಿಸಿದ್ದೇವೆ.

**೧ನೇ ಪ್ರಕಾರದ ಲೆಕ್ಕಗಳು :**

ಒಂದು ಪದಾರ್ಥದ ಬೆಲೆಯು ಇಷ್ಟಾದರೆ, ಅಂಥ ಇಷ್ಟು ಪದಾರ್ಥಗಳ ಬೆಲೆ ಎಷ್ಟು? ಎಂಬ ಲೆಕ್ಕಗಳು ಮೊದಲನೇ ಪ್ರಕಾರದವು.

೧. ಮಣಕ್ಕೆ ೩ ರೂಪಾಯಿ ೮ ಆಣೆಯಾದರೆ, ೩೬ ಮಣಕ್ಕೇನು?

ರೀತಿ: ೩ ರೂಪಾಯಿ ೮ ಆಣೆಯನ್ನು ೩೬ರಿಂದ ಗುಣಿಸಿದರೆ ಈ ಲೆಕ್ಕದ ಉತ್ತರವು ಬರುತ್ತದೆ. ೩ ರೂಪಾಯಿಯನ್ನು ೩೬ ರಿಂದ ಗುಣಿಸಿ, ೧೦೮ ರೂಪಾಯಿ ಬಂದವು. ೮ ಆಣೆಯನ್ನು (ಅರ್ಧ ರೂಪಾಯಿಯನ್ನು) ೩೬ ರಿಂದ ಗುಣಿಸಿದರೆ ೧೮ ರೂಪಾಯಿ ಬಂದವು. ಆದರಿಂದ ಇವೂ ಅವೂ ಕೂಡಿ ೧೦೮+೧೮ ರೂ ೧೨೬ ರೂಪಾಯಿ ಆದವು.

೩ ರೂಪಾಯಿಯನ್ನು ೩೬ ರಿಂದ, ಅಥವಾ ೩೬ ರೂಪಾಯಿಯನ್ನು ೩ ರಿಂದ ಗುಣಿಸಿದರೆ, ಗುಣಾಕಾರವು ಅಷ್ಟೇ ಬರುತ್ತದೆ. ಹ್ಯಾಗೆ ಮಾಡಿದರೂ ಗುಣಾಕಾರವು ೧೦೮ ರೂಪಾಯಿ ಬರುತ್ತದೆ".[೭]

ಇದೇ ರೀತಿ ಇನ್ನೊಂದು ಲೆಕ್ಕ ಬಡ್ಡೀವ್ಯವಹಾರಕ್ಕೆ ಸಂಬಂಧಿಸಿದ್ದು; ಆ ವಿಷಯವನ್ನು ಮನವರಿಕೆ ಮಾಡಿಕೊಡುವ ಪೂರ್ಣ ಕಳಕಳಿ ಇಲ್ಲಿ ಅಡಕವಾಗಿದೆ:

"ವ್ಯವಹಾರದಲ್ಲಿ ಒಬ್ಬನ ಕಡೆಯಿಂದ ಏನಿಕೆ ಹಣವನ್ನು ಸಾಲಾತಂದು ಕೆಲವು ದಿವಸಗಳ ಮೇಲೆ ಅವನಿಗೆ ಆ ಹಣಕ್ಕಿಂತ ಹೆಚ್ಚು ಹಣವನ್ನು ಕೊಡುತ್ತಾರೆ. ಆ ಹೆಚ್ಚಿನ ಹಣಕ್ಕೆ ಆ ತಂದಿರುವ ಹಣದ ಅಷ್ಟು ದಿವಸದ ಬಡ್ಡಿ ಅನ್ನುತ್ತಾರೆ.

ಉದಾಹರಣೆಗಳು :

೧. ಒಬ್ಬ ಸಾವುಕಾರನ ಕಡೆಯಿಂದ ನಾನು ೧೦೦೦ ರೂಪಾಯಿ ಸಾಲಾ ತಂದು ೯ ತಿಂಗಳಾದ ಬಳಿಕ ಅವನಿಗೆ ೧೨೫೦ ರೂಪಾಯಿ ಕೊಟ್ಟರೆ ೨೫೦ ರೂಪಾಯಿ ಬಡ್ಡೀ ಕೊಟ್ಟಂತಾಯಿತು.

೨. ೮೦೦ ರೂಪಾಯಿ ೨ ಪಾವಲೀ ಸಾಲಾತಂದು ೧೧ ತಿಂಗಳಾದ ಬಳಿಕ ೯೩೦ ರೂಪಾಯಿ ೩ ಆಣೆ ಕೊಟ್ಟರೆ ೧೨೯ ರೂಪಾಯಿ ೧೧ ಆಣೆ ಬಡ್ಡಿಕೊಟ್ಟಂತಾಯಿತು."[೮]

ಹೀಗೆ ಪ್ರತಿಯೊಂದು ವಿಷಯಗಳಿಗೂ ಉದಾಹರಣೆಗಳನ್ನು ಕೊಟ್ಟು, ಹಲವಾರು ಮಾದರಿಗಳನ್ನು ಸ್ಪಷ್ಟವಾಗಿ ಬಿಡಿಸಿ ತೋರಿಸಲಾಗಿದೆ.[೯] ಇಂದು ಈ ಸೂತ್ರಗಳು ಹಳತಾಗಿದ್ದರೂ ಅವರ ಮರಾಠಿ ಬೀಜಗಣಿತದಂತೆಯೇ ಇದೂ ಕೂಡ ಮನೆಯಲ್ಲಿ ಕುಳಿತು ಅಭ್ಯಾಸ ಮಾಡುವವರಿಗೆ ತುಂಬ ಉಪಯುಕ್ತವಾಗಿರುವುದರಿಂದ ಅಷ್ಟೇ ಜನಪ್ರಿಯ ಪುಸ್ತಕ ಇದಾಗಿರಬೇಕು. ಈ ಪ್ರಕಾರ ಚೆನ್ನಬಸಪ್ಪನವರು ಗಣಿತ ವಿಷಯವನ್ನು ಆದಷ್ಟೂ ಸರಳಗೊಳಿಸಿ ಜನರ ಹತ್ತಿರ ಒಯ್ದು ಆ ಬಗ್ಗೆ ಹೆಚ್ಚಿನ ಅಭಿರುಚಿ ಉಂಟಾಗುವಂತೆ ಮಾಡುವಲ್ಲಿ ಯಾವಾಗಲೂ ಗಮನಹರಿಸುತ್ತಿದ್ದರು. ಡೆಪ್ಯೂಟಿಯವರ ಈ ಎಲ್ಲ ಗುಣವಿಶೇಷಗಳನ್ನು ಶ್ರೀ ಎಸ್.ಬಿ.ಹಳಕಟ್ಟಿಯವರು ಕ್ರೋಢೀಕರಿಸಿಕೊಡುತ್ತ "ಅವರಿಗೆ (ಡೆಪ್ಯೂಟಿಯವರಿಗೆ) ಕನ್ನಡದ ಜೊತೆಗೆ ಗಣಿತ, ತತ್ವಜ್ಞಾನಗಳು ಮೆಚ್ಚುಗೆಯ ವಿಷಯಗಳಾಗಿದ್ದವೆಂದು ತಿಳಿದು ಬರುತ್ತದೆ. ಅವರು ಹೋದಲೆಲ್ಲ ಈ ವಿಷಯಗಳ ಬಗ್ಗೆ ಹಾಗೂ ಅವುಗಳನ್ನು ಅಭ್ಯಸಿಸಿದವರ ಬಗ್ಗೆ ತುಂಬಾ ಅಭಿಮಾನ ವ್ಯಕ್ತಪಡಿಸುತ್ತಿದ್ದರು. ಅದನ್ನವರು ತಮ್ಮ ಸಾಹಿತ್ಯರಚನೆಯ ಮೂಲಕ ತೋರಿಸಿ ಕೊಟ್ಟಿದ್ದಾರೆ. ಡೆಪ್ಯೂಟಿಯವರ "ಕನ್ನಡ ಅಂಕಗಣಿತ ಭಾಗ-೨"ವೆಂಬ ಪುಸ್ತಕ ೧೮೬೭ರ ಎಡಬಲದಲ್ಲಿ ರಚನೆಗೊಂಡಿರುವುದರಿಂದ ಭಾಗ-೧ ಪುಸ್ತಕ ಈ ಮೊದಲು ಪ್ರಕಾಶನಗೊಂಡುದು ಸಹಜ. ಅದುವೆ (ಕನ್ನಡದಲ್ಲಿ) ಗಣಿತಶಾಸ್ತ್ರದಲ್ಲಿ ಮುದ್ರಣಗೊಂಡ ಪ್ರಥಮ ಪುಸ್ತಕ. ಅದಕ್ಕಿಂತಲೂ ಪೂರ್ವದಲ್ಲಿ ತಾಡೋಲೆಗಳಲ್ಲಿ, ಕೈಬರಹದ ಹೊತ್ತಿಗೆಗಳಲ್ಲಿ, ಮುಖೋದ್ಗತವಾಗಿ ಲಭ್ಯವಾದ ಗಣಿತದ ಕೃತಿಗಳು ಇಲ್ಲದಿಲ್ಲ. ಅವುಗಳನ್ನವರು ಅವಲೋಕಿಸಿರಲೂ ಸಾಕು....."[೧೦] ಎಂದು ಬರೆದಿದ್ದಾರೆ.

---

೭. ಧಾರವಾಡ ಚನ್ನಬಸಪ್ಪ ಬಸಲಿಂಗಪ್ಪ : ಕನ್ನಡ ಅಂಕಗಣಿತ - ೨ನೇ ಭಾಗ. ಪುಟ.೧.

೮. ಧಾರವಾಡ ಚನ್ನಬಸಪ್ಪ ಬಸಲಿಂಗಪ್ಪ : ಕನ್ನಡ ಅಂಕಗಣಿತ - ೨ನೇ ಭಾಗ. ಪುಟ.೪೫.

೯. ಶಾಲಾಪತ್ರಿಕ : ಜುಲಾಯಿ ೧೮೭೪ ರಲ್ಲಿ ಡೆಪ್ಯೂಟಿಯವರು ಗಣಿತದ ಸರಳ ಹಾಗೂ ಅಡ್ನಾಡಿ ರೀತಿ ಎಂದು ಕರೆದು ಒಂದೇ ಉದಾಹರಣೆಯನ್ನು ಬಿಡಿಸಿ ತೋರಿಸಿದ್ದಾರೆ. ಪುಟ. ೮೪-೮೫.

೧೦. ಜೀವನ ಶಿಕ್ಷಣ: ಪುಟ. ೧೨.

ಇವರ ಗಣಿತಪುಸ್ತಕಗಳು ಅತ್ಯಂತ ಸರಳಸೂತ್ರಬದ್ಧವಾಗಿದ್ದು, ಅವು ಲೋಕಪ್ರಿಯವಾಗಿದ್ದ ಅಂಶವನ್ನು ನೋಡಿದ್ದೇವೆ. ಇದನ್ನು ಪುಷ್ಟೀಕರಿಸುವ ಮತ್ತೊಂದು ಸಂಗತಿ ಎಂದರೆ, ಮುಂಬಯಿ ಸರಕಾರದ ವಿದ್ಯಾ ಇಲಾಖೆಯ ಡೈರೆಕ್ಟರರಾಗಿ ಕರ್ನಾಟಕದ ವಿಶ್ವವಿದ್ಯಾಲಯದ ಉಪಕುಲಪತಿಯಾಗಿ, ಪಂಜಾಬದ ರಾಜ್ಯಪಾಲರಾಗಿ ಸೇವೆ ಸಲ್ಲಿಸಿ ನಿವೃತ್ತಗೊಂಡ ಪದ್ಮಶ್ರೀ ಡಾ. ಡಿ. ಸಿ. ಪಾವಟೆ ಅವರು ೧೯೦೭ ರಲ್ಲಿ ಪ್ರಾಥಮಿಕ ಶಾಲಾ ವಿದ್ಯಾರ್ಥಿಯಾಗಿದ್ದರು.(ಇವರೂ ಗೋಕಾಕ ತಾಲೂಕಿನ ಮಮದಾಪೂರದವರು). ಇವರ 'ಗಣಿತ' ಆಸಕ್ತಿಯನ್ನು ಕಂಡು ಆಗ ಚೆನ್ನಬಸಪ್ಪನವರ ಗಣಿತ ಪುಸ್ತಕವನ್ನು ಇವರಿಗೆ ಪಾರಿತೋಷಕವಾಗಿ ಕೊಡಲಾಯಿತು. ಮುಂದೆ ಖ್ಯಾತಗಣಿತಜ್ಞರೆಂದು ಹೆಸರಾದ ಡಾ.ಪಾವಟೆಯವರು ಈ ಸಂದರ್ಭವನ್ನು ಕುರಿತು "Since I had joined the school on the eve of the examination, I was the last boy in a class of about twenty children. Shri V.B.Joshi seemed, however, impressed by my answers and he asked the teacher why I was placed last in the class register. The teacher explained that I had been only recently admitted and that I had done all my schooling at home. As I was topping the list of successful pupils, Shri Joshi gave me a book as a prize. Curiously enough, the book happened to be a book in Arithmetic, written by the late Deputy Educational Inspector, Channabasappa, who had played such an important part, in the last quarter of the last century, in the development of education in the four kannada districts of the old Bombay Presidency"[೧೧] ಎಂದು ತಮ್ಮ ಆತ್ಮ ಚರಿತ್ರೆಯಲ್ಲಿ ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ.

## ಸಮೀಕರಣ ಸಂಗ್ರಹ (ಮರಾಠಿ)

ಈಗ ನಮಗೆ ದೊರಕಿರುವ (ಮರಾಠಿ ಭಾಷೆಯಲ್ಲಿರುವ ಬೀಜಗಣಿತ) ಸಮೀಕರಣ ಸಂಗ್ರಹವೂ ಬಹಳಷ್ಟು ಮಾಹಿತಿ ನೀಡಲು ಸಮರ್ಥವಾಗಿದೆ. ೧೪೦ ಪುಟಗಳನ್ನೊಳಗೊಂಡ ಈ ಕೃತಿ ಶಕ ೧೭೭೯ ಅಂದರೆ ಕ್ರಿ.ಶ. ೧೮೫೭ ರಲ್ಲಿ ಪುಣೆಯ ವಿಠ್ಠಲ ಸಖಾರಾಮ ಅಗ್ನಿಹೋತ್ರಿ ಇವರ ಕಲ್ಲಚ್ಚಿನ ಛಾಪಖಾನೆಯಲ್ಲಿ ಮುದ್ರಣಗೊಂಡಿದೆ. ಈ ಪುಸ್ತಕದ ಶೀರ್ಷಿಕೆಯ ಪುಟದಲ್ಲಿ(Title page)ಯ ವಿವರ ಹೀಗಿದೆ : "ಸಮೀಕರಣ ಸಂಗ್ರಹವೆಂಬ ಈ ಗ್ರಂಥವು ಶಾಲೆಗಳಲ್ಲಿ ಮತ್ತು ಮನೆಯಲ್ಲಿ ಸ್ವತಃ ಅಭ್ಯಾಸಮಾಡುವವರ ಉಪಯೋಗಕ್ಕಾಗಿ ಆಂಗ್ಲಭಾಷೆಯಲ್ಲಿರುವ (ಗಣಿತ) ಗ್ರಂಥಗಳ ಸಹಾಯದಿಂದ ಚೆನ್ನಬಸಪ್ಪ ಧಾರವಾಡಕರ ಇವರು ಸಿದ್ಧಪಡಿಸಿದ್ದಾರೆ" ಎಂದು ಹೇಳಿ ಶಕೆ ಮತ್ತು ಪ್ರಸ್ತುತ ಛಾಪಖಾನೆಯ ಹೆಸರನ್ನು ಸೂಚಿಸಲಾಗಿದೆ.[೧೨] ತರುವಾಯ ಪ್ರಸ್ತಾವನೆ ಅಡಕವಾಗಿದೆ. ಅದರಲ್ಲಿ ಕಂಡುಬರುವ ನಿವೇದನಾ ದಾಟಿಯ ವಿಚಾರಗಳು ಇಷ್ಟು: "ಇತ್ತೀಚೆಗೆ ಗಣಿತದ ಅಭ್ಯಾಸವು ಸಾಕಷ್ಟು ಬೆಳೆಯುತ್ತ ಸಾಗಿದೆ.

೧೧. Pavate. D.C.: Memories of an educational administrator, page.5.

೧೨. ಸಮೀಕರಣ ಸಂಗ್ರಹ ಹಾ ಗ್ರಂಥ ಇಂಗ್ರೇಜಿ ಭಾಷೆಂತೀಲ ಗ್ರಂಥಾಂಚಾ ಸಾಹಾಯ್ಯಾನೆ ಶಾಳಾಂತೀಲ ವ ಘರಗುತೀ ಶಿಕ್ಷಣಾರಂಚ್ಯಾ ಉಪಯೋಗಾ ಸಾಠೀ ಚೆನ್ನಬಸಅಪ್ಪ ಧಾರವಾಡಕರ ಯಾನೀ ತಯಾರ ಕೇಲಾ - ಮುಕ್ಕಾಂ ಪುಣೆ. ವಿಠ್ಠಲ ಸಖಾರಾಮ ಅಗ್ನಿಹೋತ್ರಿ ಯಾಂಚೆ ಛಾಪಖಾನ್ಯಾಂತ ಛಾಪಿಲಾ ಶಕೆ ೧೭೭೯.

ಇದರಿಂದಾಗಿ ಭಾಷಾಂತರಗೊಂಡ ಅನೇಕ ಹೊಸಗ್ರಂಥಗಳು ಸಿದ್ಧವಾಗುತ್ತಿರುವುದು ಅತಿಶಯ ಆನಂದದ ಸಂಗತಿಯಾಗಿದೆ. ಈ ವಿದ್ಯೆಯ ಜ್ಞಾನವು ಹಿಂದೂಸ್ಥಾನದಲ್ಲಿ ಈ ಮುಂಚೆ ಸಾಕಷ್ಟು ಇದ್ದಿತು. ಆದರೆ ಈ ವಿಷಯದ ಬಗೆಗಿನ ಗ್ರಂಥಗಳು ಸಂಸ್ಕೃತಭಾಷೆಯಲ್ಲಿದ್ದುದರಿಂದ ಎಲ್ಲರಿಗೂ ಉಪಯೋಗವಾಗುತ್ತಿರಲಿಲ್ಲ. ಇತ್ತೀಚೆಗೆ ದೇಶಭಾಷೆಯಲ್ಲಿ ಸಾಕಷ್ಟು ಗ್ರಂಥಗಳು ಸಿದ್ಧವಾಗುತ್ತಿರುವುದರಿಂದ ಅವುಗಳ ಉಪಯೋಗವು ಎಲ್ಲರಿಗೂ ಆಗುತ್ತಿದೆ. ಇಂಥ ಸಂದರ್ಭದಲ್ಲಿ ಬೀಜಗಣಿತದ ಸಮೀಕರಣಗಳನ್ನು ಒಂದೆಡೆ ಸಂಗ್ರಹಿಸಿ ಬಿಡಿಸಿದಲ್ಲಿ ಅದು ಉಪಯೋಗವಾದೀತೆಂಬ ಉದ್ದೇಶದಿಂದ ಈ ಚಿಕ್ಕ ಪುಸ್ತಕವನ್ನು ಸಿದ್ಧಪಡಿಸಲಾಗಿದೆ.

ಆರಂಭದಲ್ಲಿ ಈ ಗ್ರಂಥವನ್ನು ೨೫, ೩೦ ಪುಟಗಳಷ್ಟು ತಯಾರಿಸಿ ಮುದ್ರಿಸಬೇಕೆಂಬ ಅಭಿಪ್ರಾಯವಿದ್ದಿತು. ಆದರೆ ಅದು ಬೆಳೆಯುತ್ತಾ ಸಾಗಿ ಕೊನೆಯಲ್ಲಿ ೧೪೦ ಪುಟಗಳಷ್ಟಾಯಿತು. ಇಷ್ಟಾದರೂ ಸಹ ಬೀಜಗಣಿತದ ಇತರ ಅನೇಕ ವಿಷಯಗಳನ್ನು ಇಲ್ಲಿ ಸೇರಿಸುವುದು ಉಳಿಯಿತು. ಇದಕ್ಕಾಗಿ ಕೆಲವೇ ದಿನಗಳಲ್ಲಿ ಎರಡು ಅಕ್ಷರದ, ಮೂರು ಅಕ್ಷರದ ಸಮೀಕರಣ, ಘನಸಮೀಕರಣ, ಚತುರ್ಘಾತ ಸಮೀಕರಣಗಳನ್ನು ಬಿಡಿಸುವ ರೀತಿ ಮೊದಲಾದ ವಿಷಯಗಳ ಒಂದು ಪುಸ್ತಕವನ್ನು ಮುದ್ರಿಸುವ ಉದ್ದೇಶವಿದೆ. ಈ ಪುಸ್ತಕದಲ್ಲಿ ವರ್ಗಸಮೀಕರಣಗಳ ಬಿಡಿಸುವ ರೀತಿಯನ್ನು ಹೇಳಿದ್ದು, ಅದನ್ನು ಸಂಸ್ಕೃತ ಬೀಜಗಣಿತದಿಂದ ತಕ್ಕೊಳ್ಳಲಾಗಿದೆ. ಇಂಗ್ಲೀಷ ಭಾಷೆಯ ಪ್ರಸಿದ್ಧ ಗಣಿತಶಾಸ್ತ್ರಜ್ಞರಾದ ವ್ಲಾಂಡ್, ವುಡ್, ರೀಗಲ್, ಕೋಲೇಜೋ ಮತ್ತು ಹಾಡನ್ ಇವರ ಗ್ರಂಥಗಳಿಂದ ಬಹಳಷ್ಟು ಕಠಿಣ ಸಮೀಕರಣಗಳನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ. ಮತ್ತು ಅನೇಕ ಹೊಸ ಸಮೀಕರಣಗಳನ್ನು ರೂಪಿಸಲಾಗಿದೆ. ಗ್ರಂಥದ ಕೊನೆಯಲ್ಲಿ ಬಿಡಿಸಲು ಕೊಟ್ಟ ಉದಾಹರಣೆಗಳು ಪ್ರಾಯಶಃ ಹೊಸದಾಗಿವೆ. (ಮೂಲ) ಲೇಖಕರ ಅಥವಾ ಗ್ರಂಥಕರ್ತೃವಿನ ಕಣ್ತಪ್ಪಿನಿಂದಾಗಿ ಈ ಗ್ರಂಥದಲ್ಲಿ ದೋಷಗಳೇನಾದರೂ ಉಳಿದಿದ್ದರೇ ಅವುಗಳನ್ನು ಲಕ್ಷಕ್ಕೆ ತಂದುಕೊಳ್ಳದೆ ಕೇವಲ ಗುಣಗಳನ್ನು ಗ್ರಹಿಸಬೇಕಾಗಿ ವಿದ್ವಜ್ಜನರಲ್ಲಿ ನಮ್ರತಾಪೂರ್ವಕ ಪ್ರಾರ್ಥಿಸಿಕೊಳ್ಳುತ್ತೇನೆ"[೧೩] ಎಂದು ಅರಿಕೆ ಮಾಡಿಕೊಳ್ಳಲಾಗಿದೆ. ಪ್ರಸ್ತುತ ಅರಿಕೆಯು ಉತ್ತಮ ಪುರುಷರಲ್ಲಿರುವುದು ಬಹಳ ಗಮನಾರ್ಹವಾದ ಅಂಶವಾಗಿದೆ.

ಈ ಪುಸ್ತಕ ಮರಾಠಿಯಲ್ಲಿರುವುದರಿಂದ ಡೆಪ್ಯೂಟಿಯವರ ಅದ್ವಿತೀಯ ಕನ್ನಡ ಭಾಷಾನಿಷ್ಠೆಯ ಬಗ್ಗೆ ಮೂಲಭೂತವಾದ ಒಂದು ಸಮಸ್ಯೆಯನ್ನು ಹುಟ್ಟುಹಾಕುತ್ತದೆ. ಈ ಬಗ್ಗೆ ನಮಗೆ ಮೊಟ್ಟಮೊದಲು ಎದುರಾಗುವ ಪ್ರಶ್ನೆ ಈ ಕೃತಿಯನ್ನು ಚೆನ್ನಬಸಪ್ಪನವರು ಸ್ವತಃ ಮರಾಠಿಯಲ್ಲಿ ಬರೆದರೇ? ಅಥವಾ ಅವರು ಕನ್ನಡದಲ್ಲಿ ಬರೆದುದನ್ನು ಮರಾಠಿ ಭಾಷೆಗೆ ಮಾರ್ಪಡಿಸಿಕೊಂಡು ಮುದ್ರಣಮಾಡಲಾಯಿತೇ? ಎಂಬುದು. ಈ ವರೆಗೆ ಪ್ರಶ್ನಾತೀತವೆಂದು ನಂಬಲಾಗಿರುವ ಡೆಪ್ಯೂಟಿಯವರ ಮಾತೃಭಾಷಾ ಪ್ರಜ್ಞೆಯನ್ನು ಆಧರಿಸಿ ಅವರು (ಚೆನ್ನಬಸಪ್ಪನವರು) ಮರಾಠಿ ಭಾಷೆಯಲ್ಲಿ ಕೃತಿರಚನೆ ಮಾಡುವುದು ಸರ್ವಥಾ ಸಾಧ್ಯವಿಲ್ಲ. ಕನ್ನಡದಲ್ಲಿ ಬರೆದುದನ್ನು ಮರಾಠಿಗರು ತಮ್ಮ ಭಾಷೆಯಲ್ಲಿ ಮಾರ್ಪಡಿಸಿಕೊಂಡು ಅಚ್ಚುಹಾಕಿಸಿರಬೇಕೆಂದು ಹಲವರು ವಾದಿಸುತ್ತಾರೆ. ಮತ್ತೆ ಕೆಲವರು ಈ ವಾದವನ್ನು ಅಲ್ಲಗಳೆದು, ಡೆಪ್ಯೂಟಿಯವರು ಮೊದಲಿನಿಂದಲೂ ಮರಾಠಿ ಪರಿಸರದಲ್ಲಿ ಬೆಳೆದವರು, ಮರಾಠಿಯನ್ನು ಅಭ್ಯಸಿಸಿದವರು. ಹೀಗಾಗಿ ಮರಾಠಿ ಅವರಿಗೆ ಚೆನ್ನಾಗಿ ಬರುತ್ತಿತ್ತು. ಪುಣೆಯ

೧೩. ಪ್ರಸ್ತಾವನೆಯ ಮರಾಠಿ ಮೂಲ ರೂಪವನ್ನು ಅದೇ ಧಾಟಿಯಲ್ಲಿ ಕನ್ನಡಕ್ಕೆ ಅನುವಾದಿಸಿ ಇಲ್ಲಿ ಕೊಡಲಾಗಿದೆ. ಮೂಲಕ್ಕಾಗಿ ಅನುಬಂಧವನ್ನು ನೋಡಿರಿ.

ವಿದ್ಯಾರ್ಥಿ ಜೀವನ, ಆಗ ಅಲ್ಲಿಯ ಪ್ರಸಿದ್ಧ ಗಣಿತಜ್ಞರ ಸಂಪರ್ಕ, ಪ್ರಭಾವ ಇವೆಲ್ಲವುಗಳಿಂದಾಗಿ ಚೆನ್ನಬಸಪ್ಪನವರು ಮರಾಠಿಯಲ್ಲಿ "ಸಮೀಕರಣ ಸಂಗ್ರಹ"ವನ್ನು ಬರೆದಿರುವ ಬಗ್ಗೆ ನಾವು ಸಂದೇಹ ತಾಳುವುದು ಸರಿಯಲ್ಲ ಎಂದು ತಮ್ಮ ಅಭಿಪ್ರಾಯವನ್ನು ಸಮರ್ಥಿಸಿಕೊಳ್ಳುತ್ತಾರೆ.

ಈ ಗ್ರಂಥದ 'ಪ್ರಸ್ತಾವನೆ' ಉತ್ತಮ ಪುರುಷದಲ್ಲಿ ನಿರೂಪಿತವಾಗಿದೆ. ಈ ಕೃತಿ ಕನ್ನಡದಿಂದ ಮರಾಠಿಗೆ ಭಾಷಾಂತರವಾಗಲೀ, ರೂಪಾಂತರವಾಗಲೀ ಆಗಿದ್ದರೆ ಆ ಬಗ್ಗೆ ಎಲ್ಲಿಯೂ ಉಲ್ಲೇಖಗಳಿಲ್ಲ. ಒಂದು ವೇಳೆ ಕನ್ನಡದಿಂದ ಮರಾಠಿ ಭಾಷೆಗೆ ಇದು ಸ್ವೀಕೃತವಾಗಿದ್ದರೆ, ಹಾಗೆಂದು ಎಲ್ಲಿಯಾದರೂ ಸೂಚಿಸಿ ಚೆನ್ನಬಸಪ್ಪನವರಿಗೆ (ಮೂಲ ಕೃತಿಕಾರನಿಗೆ) ಸೌಜನ್ಯ ತೋರಿಸುವುದು ಅನಿವಾರ್ಯವಾಗುತ್ತಿತ್ತು. ಅಂಥ ಯಾವ ಸೂಚನೆಗಳೂ ಇಲ್ಲಿ ದೊರಕುವುದಿಲ್ಲ. ಈ ಕಾರಣಗಳಿಂದಾಗಿ ಇದು ಮೂಲತಃ ಮರಾಠಿಯಲ್ಲಿಯೇ ಬರೆದ ಕೃತಿಯೆಂದು ಶ್ರೀ ಶಿವಶಂಕರ ಹಿರೇಮಠ ವಾದಿಸುತ್ತಾರೆ. ಈ ವಾದವನ್ನು ಎತ್ತಿಹಿಡಿಯುವ ಇನ್ನೂ ಒಂದು ಅಂಶವನ್ನು ಮಠಪತ್ರಿಕೆಯಲ್ಲಿ ನೋಡುತ್ತೇವೆ. "ಚೆನ್ನಬಸಪ್ಪನವರ ಸಹಿ ಇದೆ" ಎಂದು ಸೂಚಿಸಿ ಕೆಲವು "ಸರ್ಕ್ಯುಲರ್‌ಗಳನ್ನು ಮರಾಠಿ ಭಾಷೆಯಲ್ಲಿ ಹೊರಡಿಸಿದ ಉದಾಹರಣೆಗಳಿವೆ. ಕೆಲವು ನೇಮಣೂಕುಗಳು ಸಹ ಇದೇ ಭಾಷೆಯಲ್ಲಿ ಪ್ರಸಿದ್ಧವಾಗಿವೆ".[೧೪] ಈ ಬಗ್ಗೆ ಕೂಡ ಚೆನ್ನಬಸಪ್ಪನವರು ಕನ್ನಡದಲ್ಲಿ ಹೊರಡಿಸಿದ ಕೆಲವು ಪರಿಪತ್ರಗಳನ್ನು ಮಠಪತ್ರಿಕೆಯ ಸಂಪಾದಕರು ಮರಾಠಿಗೆ ಭಾಷಾಂತರಿಸಿ ಪ್ರಕಟಿಸುತ್ತಿದ್ದರು ಎಂದು ವಾದಿಸುವರಿದ್ದಾರೆ. ಆದರೆ ಈ ವಾದಕ್ಕೂ ಕೂಡ ಚೆನ್ನಬಸಪ್ಪನವರ ಬಗ್ಗೆ ಅನೂಚಾನವಾಗಿ ಬೆಳೆದುಬಂದ 'ಮಾತೃಭಾಷಾಪ್ರಜ್ಞೆ'ಯ ಗ್ರಹಿಕೆಯೆ ಕಾರಣವೆಂದು ತೋರುತ್ತದೆ.

ಈ ಚರ್ಚೆಯ ಕಕ್ಷೆಯಲ್ಲಿ ನಿಂತು ನೋಡುವಾಗ ಈ ಕೃತಿರಚನೆಯ ಕಾಲ ಕೂಡ ಮುಖ್ಯವಾಗುತ್ತದೆ. ಡೆಪ್ಯೂಟಿಯವರು ಪುಣೆ ಬಿಟ್ಟು ಧಾರವಾಡಕ್ಕೆ ಬಂದ (೧೮೫೫) ಎರಡು ವರ್ಷಗಳ ತರುವಾಯ (೧೮೫೭) ಈ ಕೃತಿ ಅಚ್ಚಾಗಿದೆ. ಚೆನ್ನಬಸಪ್ಪನವರು ನಾರ್ಮಲ್ ಸ್ಕೂಲಿನ ಪ್ರಿನ್ಸಿಪಾಲ ಆದದ್ದು ೧೮೫೬ ರಲ್ಲಿ. ಅದು ಟ್ರೇನಿಂಗ್ ಕಾಲೇಜಾಗಿ ಊರ್ಜಿತಗೊಂಡು, ಅದರ ಪ್ರಥಮ ಪ್ರಿನ್ಸಿಪಾಲರೆಂದು ಅವರು ಕಾರ್ಯಾರಂಭ ಮಾಡಿದ್ದು ೧೮೬೪ ಜನೇವರಿ ೨೧. ಮಠಪತ್ರಿಕೆ ಆರಂಭಗೊಂಡು ಅದರ ಪ್ರಥಮ ಸಂಪಾಕದರೆಂದು ಚೆನ್ನಬಸಪ್ಪನವರು ಕೆಲಸ ಪ್ರಾರಂಭಿಸಿದ್ದು ೧೮೬೫ ಜನೇವರಿ ೫. ಈ ಎಲ್ಲ ಬೆಳವಣಿಗೆಯನ್ನು ಹಿನ್ನೆಲೆಯಲ್ಲಿಟ್ಟುಕೊಂಡು ನೋಡಿದರೆ ಡೆಪ್ಯೂಟಿಯವರು ತಿರುಗಿ ಧಾರವಾಡಕ್ಕೆ ಬರುವ ಮೊದಲೇ ಅಂದರೆ ಪುಣೆಯಲ್ಲಿದ್ದಾಗಲೇ ಈ ಪುಸ್ತಕವನ್ನು ಬರೆದರೇ? ಅಥವಾ ಧಾರವಾಡಕ್ಕೆ ಬಂದ ಮೇಲೆ ನಾರ್ಮಲ್ ಸ್ಕೂಲ ಪ್ರಿನ್ಸಿಪಾಲರಾದ ಬಳಿಕ ಇದನ್ನು ಸಿದ್ಧಪಡಿಸಿದರೇ? ಎಂಬ ಪ್ರಶ್ನೆಗಳು ಏಳುತ್ತವೆ.

ಧಾರವಾಡಕ್ಕೆ ಬಂದ ಮೇಲೆ ಇದನ್ನು ಬರೆದಿರಬೇಕೆಂದು ನಂಬುವುದಾದರೆ ಡೆಪ್ಯೂಟಿಯವರಿಗೆ ತಾಯ್ನುಡಿಯ ಬಗೆಗಿನ ಕಟ್ಟಾಭಿಮಾನ ಕ್ರಮೇಣ ಬೆಳೆದಿರಬೇಕೆಂದು ಹೇಳಬೇಕಾಗುತ್ತದೆ. ಯಾಕೆಂದರೆ ಇವರು ಪುಣೆ ಬಿಟ್ಟು ಧಾರವಾಡಕ್ಕೆ ಬಂದು ಅಂಚೆ ಇಲಾಖೆಯಲ್ಲಿ ಸೇವೆ ಸಲ್ಲಿಸಿ, ಮುಂದೆ ನಾರ್ಮಲ್ ಸ್ಕೂಲ್; ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರಾಗಿ, ಮಠಪತ್ರಿಕೆಯನ್ನು ಆರಂಭಿಸಿ, ಆ ಮೂಲಕ ತಮ್ಮ ಕನ್ನಡದ

---

೧೪. ನೋಡಿ: ಶಾಲಾಪತ್ರಿಕೆ : ೧೮೬೭, ಪುಟ.೪೯.

ಕಟ್ಟಾಭಿಮಾನವನ್ನು ಪ್ರಕಟಿಸುವ ಪೂರ್ವದ ಅವರ ಬದುಕಿನ ಖಚಿತವಾದ ವಿವರಗಳು ನಮಗೆ ದೊರಕದಿರುವುದರಿಂದ ಹಲವಾರು ಊಹಾಪೋಹಗಳಿಗೆ ಎಡೆದೊರಕುವಂತಾಗಿದೆ. ವ್ಯಕ್ತಿಯಲ್ಲಿ ಯಾವುದೇ ಸಾಂಸ್ಕೃತಿಕ ಬದಲಾವಣೆ ರಾತ್ರೋರಾತ್ರಿ ತಲೆದೋರುವುದಿಲ್ಲ. ಅದಕ್ಕೆ ಸಾಕಷ್ಟು ಪೂರ್ವಸಿದ್ಧತೆ ಬೇಕಾಗುತ್ತದೆ. ಈ ದೃಷ್ಟಿಯಲ್ಲಿ ಚೆನ್ನಬಸಪ್ಪನವರು "ಸಮೀಕರಣ ಸಂಗ್ರಹ" ಮತ್ತು "ಸಮಮೀಕರಣ ಅಥವಾ ಸಿದ್ಧಾಂತಸಂಗ್ರಹ ಭಾಗ-೨"ನ್ನಾಗಲೀ ಮರಾಠಿಯಲ್ಲಿ ಬರೆದದ್ದು ತಪ್ಪಾಗಿ ಕಾಣುವುದಿಲ್ಲ. ಈ ರೀತಿ ಗ್ರಹಿಸಿದ ಮಾತ್ರಕ್ಕೆ ಅದು ಚೆನ್ನಬಸಪ್ಪನವರ ವ್ಯಕ್ತಿತ್ವಕ್ಕೆ ಊನವೂ ಅಲ್ಲ.

ಇನ್ನು "ಸಮೀಕರಣ ಸಂಗ್ರಹ"ದ ಪಠ್ಯದ (Text) ಬಗ್ಗೆ ಹೇಳಬೇಕೆಂದರೆ, ಇದು ಗಣಿತ ವಿಷಯದ ಆಸಕ್ತಿ ಮೂಡಿಸುವುದಕ್ಕಾಗಿ ಬರೆದಿರುವ ಗ್ರಂಥವಾಗಿದೆ. ಮರಾಠಿ ಪ್ರಭಾವ ಗ್ರಂಥಕರ್ತೃವಿನ ಹೆಸರಿನಲ್ಲೂ ಇಣಿಕಿ ಹಾಕಿದೆ. 'ಚೆನ್ನಬಸಪ್ಪ, ಧಾರವಾಡ' ಎಂದಿರಬೇಕಾದದ್ದು 'ಚೆನಬಸಅಪ್ಪಾ ಧಾರವಾಡಕರ' ಎಂದಾಗಿದೆ. ಅಚ್ಚಗನ್ನಡ ಪ್ರದೇಶದ ಕನ್ನಡಿಗನೊಬ್ಬನ ಅಡ್ಡಹೆಸರು ಮರಾಠಿಗರ ಇಷ್ಟಾನುಸಾರ ಅವರ ಸಂಸ್ಕೃತಿಯಲ್ಲಿ ಹೇಗೆ ರೂಪಾಂತರಗೊಂಡಿದೆ ಎಂಬುದರ ಪ್ರತ್ಯಕ್ಷ ನಿದರ್ಶನವೂ ಇದಾಗಿದೆ. ಹೀಗೆ ಅಡ್ಡ ಹೆಸರು 'ಕರ್' ಎಂದು ವಿಸ್ತೃತಗೊಂಡ ಅನೇಕ ಉದಾಹರಣೆಗಳು ಲಭಿಸುತ್ತವೆ.

"ಸಮೀಕರಣ ಸಂಗ್ರಹ"ವು ಹೆಸರಿಗೆ ತಕ್ಕಂತೆ ಸಮೀಕರಣಗಳ ಸಂಗ್ರಹರೂಪವಾಗಿದೆ. ಇದು ಪಾಂಡಿತ್ಯ ಪ್ರದರ್ಶನಕ್ಕಾಗಿ ರಚಿತವಾದದ್ದಲ್ಲ. ಸಮಕಾಲೀನ ಸಂದರ್ಭದಲ್ಲಿಟ್ಟು ನೋಡಿದಾಗ ಮಾತ್ರ ಈ ಕೃತಿಯ ನ್ಯಾಯಸಮ್ಮತವಾದ ಮೌಲ್ಯಮಾಪನ ಮಾಡಲು ಸಾಧ್ಯವಾಗುತ್ತದೆ. ಕೃತಿರಚನೆಯ ಉದ್ದೇಶದಲ್ಲಿಯೇ ಇದು ಧ್ವನಿತವಾಗಿದೆ. ಯಾವುದೇ ಕ್ಷೇತ್ರದಲ್ಲಿ ಪ್ರವೇಶ ಮಾಡುವಾಗ ಮೊದಲ ಸುತ್ತಿನಲ್ಲಿಯೇ ಹತಾಸೆಗೊಳ್ಳುವಂತಿರಬಾರದು. ಇದನ್ನು ತಿಳಿದಿದ್ದ ಚೆನ್ನಬಸಪ್ಪನವರು ಆರಂಭದಲ್ಲಿ ಸರಳವಾದ ಸಮೀಕರಣಗಳನ್ನೇ ಆರಿಸಿಕೊಂಡು, ಉದಾಹರಣೆಗಳನ್ನು ಬಿಡಿಸಿ, ಆಸಕ್ತಿ ಮೂಡುವಂತೆ ನೋಡಿಕೊಂಡಿದ್ದಾರೆ. ಮುಖ್ಯವಾಗಿ ಬೀಜಗಣಿತದೊಳಗಿನ ಸಮೀಕರಣಗಳನ್ನು ಸಂಗ್ರಹಿಸಲು ಮತ್ತು ಅವುಗಳ ಪ್ರಯೋಜನವನ್ನು ತಿಳಿಯಲು ಈ ಪುಸ್ತಕ ರಚನೆಗೊಂಡಿದೆ. ಇದರ ೧ನೇ ಪುಟದಲ್ಲಿ ಕೆಲವು ನಿಯಮಬದ್ಧವಾದ ಚಿಹ್ನೆಗಳನ್ನು ಪರಿಚಯಿಸಲಾಗಿದೆ.

ಉದಾಹರಣೆಗೆ: i) $(a + x)\ (a - x) = a^2 - x^2$

ii) $(a + x)^3 = a^3 + 3ax\ (a + x) + a^3$

iii) $(a + x)^3 = a^3 + 3ax\ (a + x) + x^3$

ಹೀಗೆ ಇನ್ನೂ ಕೆಲವು ಮೂಲಭೂತವಾದ ಚಿಹ್ನೆಗಳನ್ನು ತಿಳಿಸಿಕೊಟ್ಟಮೇಲೆ ೧೨ನೇ ಪುಟದ ವರೆಗೆ ಅತ್ಯಂತ ಸರಳರೂಪದ ಕೆಲವು ಸಮೀಕರಣಗಳನ್ನು ಉದಾಹರಿಸಲಾಗಿದೆ. ಇವು ಈ ವಿಷಯವನ್ನು ಕಲಿಯಲು ಆರಂಭಿಸಬೇಕೆನ್ನುವವರಿಗೂ ಅಭಿರುಚಿ ಹುಟ್ಟಿಸುವಂತಿದೆ. ಮುಂದೆ ೧ ರಿಂದ ೧೩ನೇ ಉದಾಹರಣೆಗಳ ವರೆಗೆ ಮೊತ್ತಗಳ ವಿಚಾರವನ್ನು ಸೂಚಿಸದೇ ಅದನ್ನು ೧೪ನೇ ಉದಾಹರಣೆಯಿಂದ ಪರಿಚಯಿಸಲಾಗಿದೆ. ೧೬ನೇ ಉದಾಹರಣೆಯಲ್ಲಿ ಇಬ್ಬದಿಯ ಸಮಾನ ಪದಗಳನ್ನು ರದ್ದುಪಡಿಸುವ ವಿಧಾನವನ್ನು ವಿವರಿಸಲಾಗಿದೆ.

ಉದಾಹರಣೆಗೆ: $3x^2 + 45 - 9x + 7x^3 = 2x^2 - 99 + 4x^3 + x^2 + 3x^3$

$\therefore \quad 3x^2 + 45 - 9x + 7x = 3x - 99 + 7x^3$ (cancell terms)

$\therefore \quad 45 - 9x = -99$

$9x = 99 + 45$ (Dividing each term by 9)

$x = 11 + 5 = 16$

ತರುವಾಯ ೨೩ನೇ ಉದಾಹರಣೆಯಿಂದ ಸಮೀಕರಣಗಳಲ್ಲಿ ಭಿನ್ನರಾಶಿಯನ್ನು ಪರಿಚಯಿಸಲಾಗಿದೆ. ಕ್ರಮೇಣ ಪರಿಮಾಣಗಳ (ratios) ವಿಚಾರವನ್ನೂ, ಮುಂದೆ ೪೬ನೇ ಉದಾಹರಣೆಯಿಂದ ವರ್ಗಮೂಲಸಂಜ್ಞೆ (square root notation)ಗಳ ವಿಚಾರವನ್ನೂ, ೫೦ನೇ ಉದಾಹರಣೆಯಿಂದ ಘನಮೂಲ (cube root)ಗಳ ವಿಚಾರವನ್ನೂ, ೫೧ ರಿಂದ ಚತುರ್ಥಮೂಲ (fourth root)ಗಳ ವಿಚಾರವನ್ನೂ ವಿವರಿಸಲಾಗಿದೆ.

ಈ ಪುಸ್ತಕದ ಇನ್ನೊಂದು ವೈಶಿಷ್ಟ್ಯವೆಂದರೆ, ಇಲ್ಲಿ ಸುಮಾರು ೪೭ ಉದಾಹರಣೆಗಳನ್ನು ಅಭ್ಯಾಸಕ್ಕಾಗಿ ಕೊಟ್ಟು, ನಂತರ ಅವುಗಳನ್ನು ಬಿಡಿಸಿ ತೋರಿಸಲಾಗಿದೆ. ಮತ್ತೆ ವರ್ಗ ಸಮೀಕರಣಗಳಲ್ಲಿ (Quadratic equations), ಶುದ್ಧವರ್ಗಸಮೀಕರಣ (pure quadratic equations)ಗಳನ್ನು ಪರಿಚಯಿಸಲಾಗಿದೆ.

ಉದಾಹರಣೆಗಾಗಿ : $x^2 = -2x^2\ 11$

$\frac{x^2}{36} = 1 \quad \therefore x^2 = 36 \quad \therefore x = 6$

ಇದಾದ ಮೇಲೆ ಮೂರು ವಿಧವಾದ ಆ್ಯಡ್‌ಫೆಕ್ಟಡ್ ವರ್ಗಸಮೀಕರಣಗಳನ್ನು (Adfected quadratic equations) ತಿಳಿಸಿಕೊಡಲಾಗಿದೆ. ಈ ಮೂರು ಪ್ರಕಾರಗಳಲ್ಲಿ ಎರಡನೇ ಹಾಗೂ ಮೊದಲನೇ ಸ್ಥಾನಗಳಲ್ಲಿ ಅಪರಿಚಿತವಾದ ಮೊತ್ತವು ಬರುತ್ತದೆ. (Unknown quantity occurs) ಎಂದು ಹೇಳಿ ಉದಾಹರಣೆಯನ್ನು ಕೊಡಲಾಗಿದೆ.

೧ನೇ ಮಾದರಿಯಲ್ಲಿ: ೧. ಎರಡೂ ಬೆಲೆಗಳ ಗುಣಲಬ್ಧವನ್ನು ತೆಗೆದುಕೊಂಡು ಚಿಹ್ನೆಯನ್ನು ಬದಲಾಯಿಸಲಾಗಿ ನಮಗೆ ೩ನೇ ಪದವು ಲಭಿಸುತ್ತದೆ.

೨. ಎರಡೂ ಬೆಲೆಗಳ ಸಂಕಲನವನ್ನು ತೆಗೆದುಕೊಂಡು ಚಿಹ್ನೆಯನ್ನು ಬದಲಾಯಿಸಲಾಗಿ ಎರಡನೇ ಪದದ ಸಹಗುಣಕ ದೊರೆಯುವುದು ಎಂದು ಉದಾಹರಣೆಗಳೊಂದಿಗೆ ಮಾರ್ಗಸೂಚಿ ನೀಡಲಾಗಿದೆ.

೨ನೇ ಮಾದರಿಯಲ್ಲಿ: ೧. ಈ ತರಹದ ಸಮೀಕರಣಗಳಲ್ಲಿ ಎರಡನೇ ಪದದ ಸಹಗುಣಕವು ೧ ಎಂದಾದರೆ ಎರಡನೇ ಪದದ ಸಹಗುಣಕವು ವಿಷಮ(ಬೆಸ)ಸಂಖ್ಯೆ ಇರುತ್ತದೆ ಎಂದು ತಿಳಿಸಿ, ಉದಾಹರಣೆಯನ್ನು ಕೊಡಲಾಗಿದೆ.

೩ನೇ ಮಾದರಿಯಲ್ಲಿ: ತಾವು ಉದಾಹರಿಸಿದ ಸಮೀಕರಣಗಳಲ್ಲಿ $x^2$ ಇದರ ಸಹಗುಣಕವು ೧ರ ಹೊರತಾಗಿ ಯಾವುದೇ ಸಂಖ್ಯೆ ಮತ್ತು xದ ಸಹಗುಣಕವು ಯಾವುದೇ ಸಮ ಅಥವಾ ವಿಷಮ ಸಂಖ್ಯೆ ಇರಬಹುದು ಎಂದು ತೋರಿಸಿಕೊಟ್ಟು, ಯಾರೇ ಆಗಲಿ ಈ ಮೂರು ಸೂತ್ರಗಳ (ಮಾದರಿಗಳ) ಸಹಾಯದಿಂದ ಯಾವುದೇ ತರಹದ ವರ್ಗಸಮೀಕರಣವನ್ನು ಬಿಡಿಸಬಹುದು, ಎಂದು ಉತ್ತೇಜನ ನೀಡಲಾಗಿದೆ.

ಈ ಪುಸ್ತಕ ರಚಿಸುವಾಗ ಈ ಸಮೀಕರಣಗಳು ಬಹಳ ರೂಢಿಯಲ್ಲಿದ್ದವು. ಈಗಲೂ ಈ ಸಮೀಕರಣಗಳನ್ನು ೧೦ನೇ ವರ್ಗದ ವಿದ್ಯಾರ್ಥಿಗಳಿಗೆ ಸುಲಭವಾಗಿ ಪರಿಚಯಿಸಬಹುದು. ಅಲ್ಲದೆ ಗ್ರಂಥಕರ್ತರು ಈ ಪುಸ್ತಕದ ಮೂಲಕ ವರ್ಗಸಮೀಕರಣವನ್ನು ಇನ್ನೂ ಹೆಚ್ಚು ರೂಢಿಗೊಳಿಸಲು ಹಾಗೂ ಹೆಚ್ಚು ಸರಳಗೊಳಿಸಲು ಸಾಕಷ್ಟು ಪರಿಶ್ರಮ ಪಟ್ಟಿದ್ದಾರೆ. ಇದರಿಂದಾಗಿ ಈ ಪುಸ್ತಕವು ಸಮಕಾಲೀನ ಸಂದರ್ಭದಲ್ಲಿ ಹೆಚ್ಚು ಜನಪ್ರಿಯವಾಗಿತ್ತೆಂದು ತೋರುತ್ತದೆ.

ಈ ಪುಸ್ತಕದಲ್ಲಿ ಮೊದಲನೇ ಮಾದರಿಯ ೨೨, ಎರಡನೇ ಮಾದರಿಯ ೧೭ ಮತ್ತು ಮೂರನೇ ಮಾದರಿಯ ೧೬ ಉದಾಹರಣೆಗಳು ಕೊಡಲ್ಪಟ್ಟಿವೆ. ಅದಲ್ಲದೆ ವಿದ್ಯಾರ್ಥಿಗಳ ಸ್ವಪ್ರಯತ್ನಕ್ಕಾಗಿ ಅನೇಕ ಸಮಸ್ಯೆಗಳನ್ನು ಕೊಟ್ಟಿದ್ದಾರೆ. ಹೀಗಾಗಿ ಈ ಪುಸ್ತಕವನ್ನು ಉಪಯೋಗಿಸುವವರು ಯಾವುದೇ ವರ್ಗಸಮೀಕರಣಗಳನ್ನು ಬಿಡಿಸಲು ಸಂಪೂರ್ಣಶಕ್ತರಾಗುವುದರಲ್ಲಿ ಸಂದೇಹವೇ ಇಲ್ಲ. ಹೀಗೆ ಡೆಪ್ಯೂಟಿಯವರ ವೈಯಕ್ತಿಕ ಜೀವನದ ಬಗ್ಗೆ ಬೆಳಕು ಚೆಲ್ಲುವ ಬರವಣಿಗೆಯ ಸಾಮರ್ಥ್ಯವನ್ನು ಇಲ್ಲಿ ಗುರುತಿಸಲು ಅವರು ಗಣಿತ ಮತ್ತು ಅನುವಾದ ಕೃತಿಗಳನ್ನಲ್ಲದೆ ಲೇಖನಗಳನ್ನು ಬರೆಯುತ್ತಿದ್ದರೆಂಬುದರ ನಿಚ್ಚಳ ನಿದರ್ಶನವೊಂದು ಇಲ್ಲಿದೆ. ಮಠಪತ್ರಿಕೆಯಂಥ ಶೈಕ್ಷಣಿಕ ಪತ್ರಿಕೆಯನ್ನು ಹುಟ್ಟುಹಾಕಿದ ಅವರಿಗೆ ಕೈತುಂಬ ಕೆಲಸಗಳಿರುವಾಗಲೂ, 'ಪತ್ರಿಕೆ'ಗೆ ಅವರೇ ಬರೆದು ಪೂರೈಸಿದ ಲೇಖನವೊಂದು ಗಮನಸೆಳೆಯುತ್ತದೆ. "ವಿದ್ಯಾಭ್ಯಾಸ ಮಾಡುವುದಂನೂ ಮತ್ತು ಮಾಡಿಸುವದಂನೂ ಕುರಿತು"[೧೫] ಶೀರ್ಷಿಕೆಯ ಲೇಖನ ಮೊದಲನೇ ವರ್ಷದ ಎರಡನೇ ಸಂಚಿಕೆಯಲ್ಲೇ ಪ್ರಕಟವಾಗಿದೆ. ಇದರ ಶೀರ್ಷಿಕೆ ನೋಡಿದರೆ ಸಾಕು, ಡೆಪ್ಯೂಟಿಯವರ ಮನಸ್ಸು ಶಿಕ್ಷಣದ ವಿಷಯವಾಗಿ ಏಕಕಾಲಕ್ಕೆ ಎರಡು ಗುರಿಗಳನ್ನು ಹೊಂದಿತ್ತೆಂದು ಸ್ಪಷ್ಟವಾಗುತ್ತದೆ. ಅದು: ಅಧ್ಯಯನ ಮಾಡುವುದು ಮತ್ತು ಅಧ್ಯಯನ ಮಾಡಿಸುವುದು. ಐದು ಪುಟಗಳ ೪ ಸುದೀರ್ಘ ಲೇಖನದಲ್ಲಿ ತಮ್ಮ ಮೂಲಭೂತ ವಿಚಾರಗಳನ್ನು ಎಲ್ಲ ಆಯಾಮಗಳಿಂದ ಇಲ್ಲಿ ಪ್ರತಿಪಾದಿಸಿದ್ದಾರೆ. "ಯಲ್ಲಿ ನಂಬಿಕೆವುಂಟೋ ಅಲ್ಲಿ ವಿಚಾರವು ಇಲ್ಲ. ಮತ್ತು ಯಲ್ಲಿ ವಿಚ್ಯಾರವುಂಟೋ ಅಲ್ಲಿ ನಂಬಿಕೆಯಿರುವುದಿಲ್ಲ, ಜ್ಞಾನವು ಇರುತ್ತದೆ." ಎಂಬ ನಿರ್ಣಯದೊಂದಿಗೆ ಕೊನೆಗೊಳ್ಳುವ ಈ ಲೇಖನ ಡೆಪ್ಯೂಟಿಯವರ ಚಿಂತನಪರತೆಯನ್ನು ಸೂಚಿಸುತ್ತದೆ. ಲೇಖನದ ಕೊನೆಯಲ್ಲಿ ಹೆಸರು ಹೇಳಿರದಿದ್ದರೂ "ಪ್ರಿನ್‌ಸಿಪಾಲ ನಾರ್ಮಲ ಸ್ಕೂಲ ಬೆಳಗಾವ" ಎಂಬ ಸೂಚನೆಯಿದ್ದು ೧೮೬೫ರ ಸುಮಾರಿಗೆ ಪ್ರಿನ್ಸಿಪಾಲರೆಂದು ಬೆಳಗಾವಿ ನಾರ್ಮಲ್ ಸ್ಕೂಲಿನಲ್ಲಿ ಕೆಲಸ ಮಾಡುತ್ತಿದ್ದವರು ಡೆಪ್ಯೂಟಿಯವರೇ ಎಂಬುದನ್ನು ಇಲ್ಲಿ ಸ್ಮರಿಸಬಹುದು.

ಇದರಿಂದ ಅವರು ಹೆಚ್ಚು ಬರೆಯುವುದಕ್ಕೆ ಅಸಹಾಯಕರಾಗಿದ್ದರೆಂಬುದಕ್ಕೆ ಅವರ ಕೆಲಸದ ಒತ್ತಡವೇ ಕಾರಣವೆಂಬುದು ಸ್ಪಷ್ಟವಿದೆ. ಅಂದರೆ ಅವರು ಬರೆದುದಕ್ಕಿಂತ ಬರೆಸಿದುದೇ ಹೆಚ್ಚು. ಸಾಹಿತಿಗಳೆಂದು ಇವರನ್ನು ಕರೆಯಲು ಧೈರ್ಯ ಸಾಲುವುದಿಲ್ಲವಾದರೂ ಇವರಲ್ಲಿ ಸಾಹಿತಿಗಳನ್ನು ನಿರ್ಮಾಣ ಮಾಡುವ ಚೈತನ್ಯವಿದ್ದುದನ್ನು; ಅಂಥ ಸಾಹಿತ್ಯಿಕ ವಾತಾವರಣ ನಿರ್ಮಾಣ ಮಾಡಿದುದನ್ನು ಯಾರೂ ನಿರಾಕರಿಸಲಾರರು.



---

೧೫. ಮಠಪತ್ರಿಕೆ : ಪುಸ್ತಕ ೧, ಸಂಚಿಕೆ ೨, ೧೮೬೫, ಪುಟ.೩೨.

## ಚೆನ್ನಬಸಪ್ಪನವರು ಕಟ್ಟಿದ ಕನ್ನಡ ಬಳಗ

ಒಬ್ಬ ವ್ಯಕ್ತಿ ತನ್ನ ಸಮಕಾಲೀನ ಪರಿಸರದಲ್ಲಿ ಯಶಸ್ಸು ಸಾಧಿಸಬೇಕಾದರೆ, ಆತ ತನ್ನ ವಿಚಾರಶಕ್ತಿ ಹಾಗೂ ಕ್ರತುಶಕ್ತಿಗಳೆರಡನ್ನೂ ನಿರಂತರ ಜಾಗ್ರತವಾಗಿಟ್ಟುಕೊಳ್ಳಬೇಕಾಗುತ್ತದೆ. ವಿಚಾರಕ್ಕಿಂತಲೂ ಕೃತಿ, ತತ್ವಬೋಧೆಗಿಂತ ತತ್ವಾಚರಣೆ ಮುಖ್ಯವಾದಾಗ ಮಾತ್ರ ಅಂಥ ವ್ಯಕ್ತಿ ಆತ್ಮಸ್ಥೈರ್ಯದಿಂದ ತಾನು ಬದುಕುತ್ತಿರುವ ಸಮಾಜದ ಮೇಲೆ ಪ್ರಭಾವ ಬೀರಬಲ್ಲ. ಆಗ ಮಾತ್ರ ಸಮಾಜ ಹಾಗೂ ಸಮಾಜದ ಭಾಗವಾದ ವ್ಯಕ್ತಿಯ ನಡುವೆ ಒಂದು ಗಟ್ಟಿಮುಟ್ಟಾದ ಸೇತುವೆ ನಿರ್ಮಾಣವಾಗಿ ವ್ಯಕ್ತಿ ಹಾಗೂ ಸಮಾಜದ ಮಧ್ಯೆ ಮೌಲಿಕವಾದ ಕೊಡುಕೊಳ್ಳುವಿಕೆ ಸಾಧ್ಯವಾಗುತ್ತದೆ. ಸಮಾಜದ ಬೆಂಬಲ, ಉತ್ತೇಜನಗಳನ್ನು ಪಡೆದು ವ್ಯಕ್ತಿ; ವ್ಯಕ್ತಿಯನ್ನು ಮುಂದಿಟ್ಟುಕೊಂಡು ಸಮಾಜ ಸಾಮುದಾಯಿಕವಾದ ಸಮಸ್ಯೆಗಳನ್ನು ಕೈಗೆತ್ತಿಕೊಂಡಾಗ ಅವುಗಳನ್ನು ವಿಶ್ಲೇಷಿಸುವ ಮಾರ್ಗ ಸುಲಭವಾಗಿ ತೆರೆದುಕೊಳ್ಳುತ್ತದೆ. ಈ ದೃಷ್ಟಿಯಿಂದ ಸಾಮಾಜಿಕ ಚಿಂತನೆಯ ಹರಿಕಾರನಾಗಬಲ್ಲ ವ್ಯಕ್ತಿ, ಇವನನ್ನು ಪೋಷಿಸಿ, ರಕ್ಷಿಸಬಲ್ಲ ಸಮಾಜ ಪರಸ್ಪರ ಪೂರಕಶಕ್ತಿಗಳೇ. ಈ ಎರಡೂ ಶಕ್ತಿಗಳಲ್ಲಿ ಯಾವುದು ಮುಖ್ಯ, ಯಾವುದು ಅಮುಖ್ಯ ಎಂದು ವಿಂಗಡಿಸಿ ಹೇಳುವುದು ಕೂಡಾ ಕಷ್ಟ. ಸಮಾಜದ ಶುದ್ಧಾಂತಃಕರಣದ ಬೆಂಬಲ ದೊರಕದೇ ಹೋದರೆ ವ್ಯಕ್ತಿ ಹೆಳವನಾಗುತ್ತಾನೆ. ಇದರಂತೆಯೇ ವ್ಯಕ್ತಿಯ 'ಚಿಂತನೆ'ಗಳಿಗೆ ಇಂಬು ಕೊಡದೇ ಹೋದರೆ ಸಮಾಜ ಕುರುಡಾಗುತ್ತದೆ. ಅಂದರೆ ಸಮುದಾಯದ ಕಲ್ಯಾಣವಿರುವುದೇ ಈ ಎರಡೂ ನೆಲೆಗಳಲ್ಲಿ. (ಒಂದು ವೈಯಕ್ತಿಕ ನೆಲೆ ಇನ್ನೊಂದು ಸಾಮಾಜಿಕ ನೆಲೆ.) ಬೀಜಬಿತ್ತುವ ಕೆಲಸವನ್ನು ವ್ಯಕ್ತಿಮಾಡಬೇಕು, ತದನಂತರ ಸಮಾಜ ಕೃಷಿಗೈದು ಸಾಧನೆಯ ಫಲಗಳನ್ನು ತಡೆಯಲು ಹಂಬಲಿಸಬೇಕು. ಇದಕ್ಕೆ ಒಂದು ಶ್ರೇಷ್ಠ ನಿದರ್ಶನ ಡೆಪ್ಯೂಟಿ ಚೆನ್ನಬಸಪ್ಪನವರು ಮತ್ತು ಅವರು ಕಟ್ಟಿದ ಕನ್ನಡ ಬಳಗ.

ಪುಣೆಯ ಪರಿಸರದಲ್ಲಿದ್ದು, ಭಾಷೆ-ಸಂಸ್ಕೃತಿ-ನೆಲ-ಜಲ, ಶಿಕ್ಷಣ-ಸಾಹಿತ್ಯ ಇಂಥವುಗಳ ಬಗ್ಗೆ ಅಲ್ಲಿಯ ಜನ ಬೆಳೆಸಿಕೊಂಡಿದ್ದ ಅನನ್ಯ ಪ್ರೀತಿ, ಅಭಿಮಾನಗಳನ್ನು ಕಣ್ಣಾರೆ ಕಂಡು ತಾಯ್ನಾಡಿಗೆ ಮರಳಿದ ಚೆನ್ನಬಸಪ್ಪನವರನ್ನು ಆ ಸಮಸ್ಯೆಗಳೆಲ್ಲ ಏಕ ಕಾಲಕ್ಕೆ ಒಟ್ಟುಗೂಡಿ ಕಾಡಿ, ಅಣಕಿಸಿರಬೇಕೆಂದು ಭಾವಿಸಿದರೆ ತಪ್ಪಾಗಲಿಕ್ಕಿಲ್ಲ. ಹೀಗಾಗಿ ಅವರು ತಮಗೆ ದೊರಕಿದ್ದ ಪ್ರಿನ್ಸಿಪಾಲ (ನಾರ್ಮಲ್‌ಸ್ಕೂಲ ಹಾಗೂ ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲ) ಹುದ್ದೆಗಳನ್ನು, ತಾವು ರೂಪಿಸಿದ ಮಠಪತ್ರಿಕೆಯನ್ನು, ತಮ್ಮ ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರ ಅಧಿಕಾರವನ್ನು ಇವುಗಳಿಗೆ ಸಂಬಂಧಿಸಿದ ಆಡಳಿತಯಂತ್ರವನ್ನು ಅವರು ಕನ್ನಡ ಮುಖಿಯಾಗಿಯೇ ದುಡಿಸಿಕೊಂಡರು. ಜೊತೆಜೊತೆಗೇ ಕನ್ನಡವನ್ನು ಕಟ್ಟುವಕೆಲಸಕ್ಕೆ ಹಲವಾರು

ಜನರನ್ನು ಅವರು ಸಜ್ಜುಗೊಳಿಸಿದರು. ಹೀಗೆ ಡೆಪ್ಯೂಟಿಯವರಿಂದ ಪ್ರತ್ಯಕ್ಷ ಇಲ್ಲವೆ ಪರೋಕ್ಷವಾದ ಪ್ರೇರಣೆ, ಸಹಾಯ ಪಡೆದ ಇವರನ್ನೆಲ್ಲ ಇಲ್ಲಿ ಡೆಪ್ಯೂಟಿಯವರು ಕಟ್ಟಿದ ಕನ್ನಡ ಬಳಗವೆಂದು ಕರೆಯಲಾಗಿದ್ದು, ಅವರು ಮಾಡಿದ ಕೆಲಸಗಳನ್ನು ನೆನಪಿಸಿಕೊಳ್ಳುವುದೇ ಒಂದು ಹೆಮ್ಮೆಯ ವಿಷಯವಾಗಿದೆ. ಇವರಲ್ಲಿ ಕೆಲವರಂತೂ ತಮ್ಮನ್ನು "ಕನ್ನಡ ಭಾಷಾಸೇವಕ"[೧]ರೆಂದೇ ಕರೆದುಕೊಂಡು ಕನ್ನಡಕ್ಕಾಗಿ ಜೀವತೇಯ್ದವರು.

ಒಂದು ರಾಷ್ಟ್ರದ, ಇನ್ನೂ ಹತ್ತಿರದಿಂದ ನೋಡಿ ಹೇಳುವುದಾದರೆ, ಒಂದು ನಾಡಿನ ಸಾಮಾಜಿಕ ಹಾಗೂ ಶೈಕ್ಷಣಿಕ ಪುರೋಭಿವೃದ್ಧಿಗಳಲ್ಲಿ 'ಭಾಷೆ' ಎಂಥ ಮಹತ್ತರವಾದ ಪಾತ್ರವಹಿಸುತ್ತದೆಂಬ ಅರಿವುಳ್ಳವರಿಗೆ ಮಾತ್ರ ತಾಯ್ನುಡಿ ಪ್ರಾಣಕ್ಕಿಂತಲೂ ಪ್ರಿಯವೆನಿಸುತ್ತದೆ. ಅದೇ ಅವರಿಗೆ 'ಆತ್ಮಜ್ಯೋತಿ'ಯೂ ಆಗುತ್ತದೆ. ಅಂಥವರ ಮಾತು ಪ್ರಭುದೇವ ಹೇಳುವಹಾಗೆ 'ಜ್ಯೋತಿರ್ಲಿಂಗ'ದಷ್ಟು ಪರಮಪವಿತ್ರವಾಗಿರುತ್ತದೆ. ಈ ಅರಿವಿನ ಕಿಡಿಗಳಂತೆ ಕನ್ನಡ ಕಟ್ಟುವ ಕೆಲಸಕ್ಕೆ ತಮ್ಮನ್ನು ಸೂತ್ರೀಕರಿಸಿಕೊಂಡ ಡೆಪ್ಯೂಟಿಯವರ ಕನ್ನಡ ಬಳಗ ಸಂಖ್ಯಾಬಲದಿಂದ ಸಣ್ಣದೆನಿಸಿದರೂ ಸತ್ವದ ಬಲದಿಂದ ಚರಿತಾರ್ಹವಾದುದು. ಇವರೆಲ್ಲ ಡೆಪ್ಯೂಟಿಯವರೊಂದಿಗೆ ಕನ್ನಡ ಕಟ್ಟುವ ಕೆಲಸದ ಮನೀಷೆ ಹೊತ್ತು ದೀಕ್ಷೆ ತೊಟ್ಟವರು.

ಇನ್ನೊಂದು ನಿಟ್ಟಿನಲ್ಲಿ ಅನ್ಯಭಾಷೆಯ ಆಕ್ರಮಣದಿಂದ ನಲುಗಿಹೋಗಿದ್ದ ಕನ್ನಡ ಸಾಹಿತ್ಯದ ಕೆಲವು ಮುಖ್ಯ ಪ್ರಕಾರಗಳಿಗೆ ಪುನಃ ಜೀವಸತ್ವ ತುಂಬಿದವರು. ಕನ್ನಡ ಭಕ್ತರಾಗಿದ್ದ ಡೆಪ್ಯೂಟಿಯವರು ಗಣಿತ ಪಠ್ಯಪುಸ್ತಕಗಳನ್ನು ರೂಪಿಸುವುದರ ಜೊತೆಗೆ 'ಮ್ಯಾಕಬೆಥ್', 'ಕಾಮೆಡಿ ಆಫ್ ಎರರ್ಸ' ಎಂಬ ಕೃತಿಗಳನ್ನು ಅನುವಾದಿಸಿರುವುದನ್ನು ನೋಡಿದರೆ ಇವರಿಗೆ ಪಠ್ಯಕೃತಿಗಳಂತೆ ಸೃಜನಕೃತಿಗಳ ಅಭಿವೃದ್ಧಿಯ ಕಡೆಗೂ ಆಸಕ್ತಿಯಿದ್ದಿತೆಂದು ಸ್ಪಷ್ಟವಾಗುತ್ತದೆ. ಹೀಗಾಗಿ ಇವರು ಈ ಎರಡೂ ಕ್ಷೇತ್ರಗಳ ಬರಹಗಾರರಿಗೆ ಪ್ರೋತ್ಸಾಹಿಸಿದುದು ಸಹಜವೆನಿಸುತ್ತದೆ. ಹೀಗೆ ಚೆನ್ನಬಸಪ್ಪನವರ ಕಳಕಳಿಯ ಪ್ರೋತ್ಸಾಹದಿಂದ ಪ್ರೇರಿತರಾದ ಪ್ರಮುಖರೆಂದರೆ, ಗಂಗಾಧರ ಮಡಿವಾಳೇಶ್ವರ ತುರಮರಿ, ಭುಜಂಗರಾವ ಹುಯಿಲಗೋಳ, ಶಾಂತವೀರ ರಾಚಿದೇವ ಕಿತ್ತೂರ, ವೆಂಕಟರಂಗೋ ಕಟ್ಟಿ, ಚುರಮರಿ ಶೇಷಗಿರಿ ರಾಯರು ಮತ್ತು ರೊದ್ದ ಶ್ರೀನಿವಾಸರಾಯ ಮೊದಲಾದವರು. ಚೆನ್ನಬಸಪ್ಪನವರಂತೆಯೇ ಇವರೆಲ್ಲರ ಹಿಂದೆ ಕನ್ನಡಪ್ರೇಮಿ ರಸೆಲ್‌ರೂ ಇದ್ದರೆಂಬುದನ್ನು ಮರೆಯಬಾರದು.

## ಗಂಗಾಧರ ಮಡಿವಾಳೇಶ್ವರ ತುರಮರಿ
## (೧೮೩೭-೧೮೭೭)

ತುರಮರಿಯು ಬೈಲಹೊಂಗಲ ತಾಲೂಕಿನ ಒಂದು ಚಿಕ್ಕಗ್ರಾಮ. ಇಲ್ಲಿಯ ಚೆನ್ನಬಸಪ್ಪ ಎಂಬವರು ಕಿತ್ತೂರಿನ ವೈಭವ, ವೀರಶ್ರೀ ಮತ್ತು ಪತನವನ್ನು ಕಣ್ಣಾರೆ ಕಂಡವರೆಂದು ಹೇಳುತ್ತಾರೆ. ಗಂಗಾಧರ ಇವರ ಹಿರಿಯ ಮಗ, ವೀರಪ್ಪ, ಸಿದ್ಧಲಿಂಗಪ್ಪ, ಚೆನ್ನಬಸವ್ವ ಇವರ ಇತರ ಮಕ್ಕಳು. ಚೆನ್ನಪ್ಪನವರು ಅಥಣಿಯ ಹಿರೇಮಠದ ಮಡಿವಾಳ ಸ್ವಾಮಿಗಳಿಗೆ ಈ ಹಿರಿಯ ಮಗನನ್ನು 'ಐತನ'ಕ್ಕೆ ಕೊಟ್ಟ ಕಾರಣ ಗಂಗಾಧರನು ಗಂಗಾಧರಯ್ಯನಾದನು. ಜನಕತಂದೆಯ

೧. ಮುದವೀಡು ಕೃಷ್ಣರಾಯರು: ಚುರಮರಿಕೃತ ಶಾಕುಂತಲ ನಾಟಕವು - ಸಂಪಾದಕರ ಸೊಲ್ಲು. (ನಾಲ್ಕನೆಯ ಆವೃತ್ತಿ)

ಹೆಸರನ್ನು ಹಿಂದೆ ತಳ್ಳಿ, ಆ ಸ್ಥಾನದಲ್ಲಿ ಗುರು ಮಡಿವಾಳಯ್ಯನವರ ಹೆಸರು ಸ್ಥಿರವಾಯಿತು. ಅಂದಿನಿಂದ ಅವರು ಗಂಗಾಧರ ಮಡಿವಾಳೇಶ್ವರ ತುರಮರಿಯಾದರು.

ಸಾಲಿಮಠದಲ್ಲಿ ಕನ್ನಡ, ಮೋಡಿ, ಗಣಿತ, ಸಂಸ್ಕೃಗಳನ್ನು ಓದಿದ ಗಂಗಾಧರಯ್ಯನವರು ಬಸವಪುರಾಣ, ರಾಜಶೇಖರ ವಿಳಾಸ, ಜೈಮಿನಿಭಾರತ ಮೊದಲಾದ ಕಾವ್ಯಗಳನ್ನೂ ಅಸ್ಖಲಿತವಾಗಿ ಹಾಡಬಲ್ಲವರಾಗಿದ್ದರು. ಸ್ವರಸಂಪತ್ತು, ಶುದ್ಧೋಚ್ಚಾರ, ಭಾವೋತ್ಕರ್ಷಗಳನ್ನು ಸಂಲಗ್ನಗೊಳಿಸಿ ವಿಷಯಗಳನ್ನು ಅಚ್ಚೊತ್ತುವಂತೆ ಹೇಳುವ ಇವರ ಪ್ರವಚನ ಶೈಲಿಗೆ ಹಿರಿಕಿರಿಯರೆಲ್ಲರೂ ಮಾರುಹೋಗಿದ್ದರು.

ಚಿಕ್ಕವರಿದ್ದಾಗಲೇ ಒಂದು 'ಸಾಲಿಮಠ'ವನ್ನು ಆರಂಭಿಸಿ ತಮ್ಮ ವಕ್ತೃತ್ವ ಶಕ್ತಿ ಮತ್ತು ವಿದ್ವತ್ತಿನಿಂದ ಎಲ್ಲ ವಯಸ್ಸಿನ ಜನರನ್ನೂ ಆಕರ್ಷಿಸಿದರು. ಆದರೆ ಬರಬರುತ್ತ ಈ ಸಾಲಿಮಠಕ್ಕೆ ಕಾಲಹರಣಕ್ಕಾಗಿ ಬರುವ ದೊಡ್ಡ ಹರಟೆಮಲ್ಲರ ಸಂಖ್ಯೆಯೇ ಹೆಚ್ಚಾಗಿ ಮಕ್ಕಳ ಸಂಖ್ಯೆ ಕ್ರಮೇಣ ಕರಗಿದ್ದರ ಪರಿಣಾಮವಾಗಿ, ಅದನ್ನು ಬಿಟ್ಟುಕೊಟ್ಟು ಬಂಕಾಪುರದ ಗಾವಠೀ ಶಾಲಾಶಿಕ್ಷಕರಾಗಿ, ಹುನಗುಂದದಲ್ಲಿ ಪ್ರಾಥಮಿಕ ಶಾಲಾ ಮುಖ್ಯಾಧ್ಯಾಪಕರಾಗಿ, ನಾರ್ಮಲ್ ಸ್ಕೂಲಿನಲ್ಲಿ ಅಧ್ಯಾಪಕರಾಗಿ, ಟ್ರೇನಿಂಗ್ ಕಾಲೇಜಿನಲ್ಲಿ ವಾಯಿಸ್ ಪ್ರಿನ್ಸಿಪಾಲರಾಗಿ, ಕನ್ನಡ ಭಾಷಾಂತರಕಾರರಾಗಿ ಇವರು ಮಾಡಿದ ಸೇವೆ ಚಿರಕಾಲ ಉಳಿಯುವಂತಹದು.

ಕರ್ತವ್ಯನಿಷ್ಠ, ಅಪ್ಪಟ ವಿದ್ಯಾಪ್ರೇಮಿಗಳನ್ನೇ ಹುಡುಕಿ 'ನುಡಿ' ಸೇವೆಗೆ ದುಡಿಸಿಕೊಳ್ಳುತ್ತಿದ್ದ ಗಂಗಾಧರಯ್ಯನವರು ಹುನಗುಂದ ಶಾಲೆಯಿಂದ ಬೆಳಗಾವಿ ನಾರ್ಮಲ್ ಸ್ಕೂಲಿಗೆ ಸಹಾಯಕ ಶಿಕ್ಷಕರೆಂದು ಬಂದರು. ಇವರು ಅಲ್ಲಿಗೆ ಶಿಕ್ಷಕರಾಗಿ ಬರುವ ಮೂಲಕ ಆ ಸಂಸ್ಥೆಗೆ ಹೊಸ ಜೀವ ತುಂಬಿದರು. ಇವರು ಮರಾಠಿ ಪ್ರಭಾವದಿಂದ ಕನ್ನಡ ಭಾಷೆಯನ್ನು ಕ್ರಮೇಣ ಮುಕ್ತಗೊಳಿಸುತ್ತ, ಭಾಷಾಶುದ್ಧಿಯ ಕಡೆಗೆ ಒತ್ತುಕೊಡುತ್ತ ತಮ್ಮ ಶಿಷ್ಯವೃಂದದಲ್ಲಿ ಕನ್ನಡದ ಅಭಿಮಾನವನ್ನು ಬೆಳೆಸಿದರು. ಇವರ ಗರಡಿಯಲ್ಲಿ ಬೆಳೆದ ಪ್ರಮುಖ ಕನ್ನಡ ಸೇನಾನಿಗಳೆಂದರೆ, ಶಾಂತವೀರ ರಾಚಿದೇವ ಕಿತ್ತೂರ ಮತ್ತು ಧೋಂಡೋ ನರಸಿಂಹ ಮುಳಬಾಗಲ.

ಗಂಗಾಧರ ಮಡಿವಾಳೇಶ್ವರರ ಕನ್ನಡ ನಿಷ್ಠೆಯನ್ನು ಅರಿತ ರಸೆಲ್ಲ ಸಾಹೇಬರೂ ಡೆಪ್ಯೂಟಿಯವರೂ ಅದನ್ನು ಅರ್ಥಪೂರ್ಣವಾಗಿ ದುಡಿಸಿಕೊಳ್ಳುವ ದೃಷ್ಟಿಯಿಂದ ಹಲವು ಜವಾಬ್ದಾರಿಯುತ ಕೆಲಸಗಳನ್ನು ಅವರ ಮೇಲೆ ಹೊರಿಸಿದರು. ಅವುಗಳಲ್ಲಿ ಕನ್ನಡ ಟ್ರಾನ್ಸಲೇಟರರೆಂದು ಕಾರ್ಯ ವಹಿಸಿಕೊಟ್ಟುದೂ ಒಂದು (೧೮೬೬). ಆ ಬಗ್ಗೆ ಹೊರಟ ಆದೇಶವೊಂದು ಹೀಗಿದೆ: "ರಾ. ರಾ. ಗೋವಿಂದರಾವ ಕಂಠಿ ಕನ್ನಡ ಟ್ರಾನ್ಸಲೇಟರ ಮತ್ತು ರಾ.ರಾ. ಗಂಗಾಧರ ಮಡಿವಾಳೇಶ್ವರ ಥರ್ಡ ಅಶಿಸ್ಟಾಂಟ ಟ್ರೇನಿಂಗ ಸ್ಕೂಲ ಈ ಉಭಯತರು ಮೆಹರಬಾನ ಇನ್‌ಸ್ಪೆಕ್ಟರರವರ ಹುಕುಮಿನಿಂದ ತಮ್ಮ ಸ್ಥಳಗಳನ್ನು ಹೋದ ತಿಂಗಳಲ್ಲಿ ಪರಸ್ಪರ ಬದಲುಮಾಡಿದರು".೨

ಪ್ರಸ್ತುತ ಬದಲಾವಣೆಯಾದ ಮೇಲೆಯೂ ಇವರು ಕನ್ನಡದ ಕೆಲಸವನ್ನು ಏಕೋಭಾವದಿಂದಲೇ ಮುಂದುವರಿಸಿದರು. ೧೮೬೬ ರಿಂದ ತಮ್ಮ ಜೀವಿತದ ವರೆಗೂ

೨. ಮಠಪತ್ರಿಕೆ : (ಆಗಸ್ಟ ೧೮೬೬) ಪುಟ. ೧೧೪.

ದಣಿವರಿಯದೆ ಆ ಕೆಲಸಕ್ಕೆ ತಮ್ಮನ್ನು ಮುಡುಪಾಗಿಟ್ಟುಕೊಂಡರು. ಅವರ ಆ ಕೆಲಸದ ನಿರಂತರತೆಯನ್ನು ಕಾಲಾನುಕ್ರಮಣಿಕೆಯಲ್ಲಿ ಹೀಗೆ ಸೂಚಿಸಬಹುದು:

೧೮೬೬ ರಿಂದ ಶಬ್ದಮಣಿದರ್ಪಣ ವ್ಯಾಖ್ಯಾನ - ಮಠಪತ್ರಿಕೆಯ ಮೂಲಕ

೧೮೬೭ - ಹಳಗನ್ನಡ ಕವಿತಾಸಂಗ್ರಹ

೧೮೬೯ - ಶಬ್ದಮಂಜರಿ ರಚನೆ

೧೮೭೧ - ರಾಜಶೇಖರ ವಿಲಾಸದ ಮೊದಲ ಆಶ್ವಾಸದ ಟೀಕೆ

೧೮೭೩ - ನಿಜಗುಣ ಶಿವಯೋಗಿಗಳ 'ಕೈವಲ್ಯಪದ್ಧತಿ' ಟೀಕೆ

೧೮೭೪ - ರಾಜಶೇಖರ ವಿಲಾಸದ ನಾಲ್ಕನೆ ಆಶ್ವಾಸದ ಟೀಕೆ ಮತ್ತು ಭಾಷಾದರ್ಪಣದ ಪ್ರಕಟಣೆ - ಮಠಪತ್ರಿಕೆ ಮೂಲಕ.

೧೮೭೪ - ಕವಿತಾಸಂಗ್ರಹವು

೧೮೭೫ - ಕನ್ನಡ ೧ ಮತ್ತು ೨ನೇ ಪುಸ್ತಕಗಳ ಪರಿಷ್ಕರಣ

೧೮೭೬ - ಬಾಣಕಾದಂಬರಿಯ ಅನುವಾದ

೧೮೭೭ - ಬಾಣಕಾದಂಬರಿಯ ಅನುವಾದ ಮುಂದುವರಿಕೆ

೫-೧೦-೧೮೭೭ ದೈವಾಧೀನರಾದರು.

ಸುಮಾರು ೧೧ ವರ್ಷಗಳ ಅವರ ಈ ಕಾರ್ಯವನ್ನು ಅವೊತ್ತಿನ ಪರಿಸ್ಥಿತಿಯ ಪರಿಕಕ್ಷೆಯಲ್ಲಿ ಇಟ್ಟುನೋಡಿದಾಗಲೇ ಅದರ ಬೆಲೆ ತಿಳಿದೀತು. ಬಾಣಭಟ್ಟನ ಸಂಸ್ಕೃತ ಕಾದಂಬರಿಯನ್ನು ಕನ್ನಡಕ್ಕೆ ಅನುವಾದಿಸಿದ ಕೀರ್ತಿ ಇವರದು. ಈ ಕೆಲಸದಿಂದ ಅವರು 'ಕಾದಂಬರಿ'ಯ ತುರಮರಿ ಎಂದೇ ಮನೆಮಾತಾದರು. ಇದರಲ್ಲಿ ಸೂರೆಗೊಂಡಿರುವ ಚಿತ್ತಾಕರ್ಷಕ ಶೈಲಿ, ಹಾಗೂ ಭಾಷಾ ಮಾಧುರ್ಯಗಳಿಂದಾಗಿ ಸಾಹಿತ್ಯಲೋಕದಲ್ಲಿ ಅವರ ಕೀರ್ತಿ ಅವಿಚ್ಛಿನ್ನವಾಗಿಯೇ ಉಳಿಯಿತು. ಮೂಲಕೃತಿಯಲ್ಲಿ ಕಥೆಗೆ ಭಾರವೆನಿಸುವ, ಸುದೀರ್ಘವಾದ ವರ್ಣನಾಭಾಗವನ್ನು ಸಂಕ್ಷಿಪ್ತಗೊಳಿಸಿ, ಅದರ ರಸಗಟ್ಟಿಗಳನ್ನು ಅಚ್ಚುಕಟ್ಟಾಗಿ ಜೋಡಿಸಿಕೊಟ್ಟ ಗಂಗಾಧರಯ್ಯನವರ ಕಲಾತ್ಮಕತೆ ಅನನ್ಯವಾದುದು. ಪ್ರೌಢವೂ, ಲಲಿತವೂ ಆದ ಗದ್ಯಶೈಲಿಗೆ ಇದೊಂದು ಅಂದಿನ ಮಾದರೀ ರೂಪಾವಾಗಿದೆ. ಇದು ಆಗಿನಮುಂಬೈ ಕರ್ನಾಟಕದಲ್ಲಿ ಹೊಸಗನ್ನಡ ಸಾಹಿತ್ಯಿಕ ಗದ್ಯ ನೆಲೆಗೊಳ್ಳುತ್ತಿದ್ದುದರ ಕುರುಹೂ ಆಗಿದೆ. ಇದರಂತೆಯೇ ಅವರ ಇನ್ನೊಂದು ಕೃತಿ ೫೮೬ ಪುಟದ 'ಶಬ್ದಮಂಜರಿ' ಹಳಗನ್ನಡ ಶಬ್ದಗಳ ಅರ್ಥಕ್ಕೆ ಒಂದು ಪ್ರಮಾಣಭೂತವಾದ ಬೃಹತ್‌ಕೋಶವಾಗಿದೆ. ಇದು ರಸೆಲ್ಲರಿಗೆ ಅರ್ಪಿತವಾದ ಕೃತಿ ಎಂಬುದು ಗಮನಾರ್ಹ. ಕವಿತಾಸಂಗ್ರಹದ ಮುನ್ನುಡಿಯಲ್ಲಿ "ಬಗೆ ಬಗೆಯ ಗ್ರಂಥಗಳನ್ನು ದೊರಕಿಸುವದಕ್ಕೂ, ಅವುಗಳನ್ನು ಓದಿನೋಡಿ ಮೇಲಾದ ವಿಷಯ ಪದ್ಯಗಳನ್ನು ಆರಿಸಿಕೊಳ್ಳುವದಕ್ಕೂ, ಅವುಗಳಿಗೆ ಟೀಪು ವ್ಯಾಖ್ಯಾನಗಳನ್ನು ಬರೆಯುವದಕ್ಕೂ, ಐದು, ಆರು ವರುಷಗಳು ಹತ್ತಿದವು; ಇಷ್ಟು ಕಷ್ಟಪಟ್ಟು ಸಂಗ್ರಹ ಮಾಡಿದ್ದನ್ನು ಕೆಲವು ತೊಂದರೆಯ

ಮೂಲಕವಾಗಿ ಅಚ್ಚುಹಾಕದೆ ಬಿಟ್ಟಿದ್ದೆವು, ಇದನ್ನರಿದು ರಾ.ಸಾ. ಚನ್ನಬಸಪ್ಪಾ ಅಣ್ಣಾ ಡಿ.ಎ.ಇ. ಜಿಲ್ಲಾ ಧಾರವಾಡ ಇವರು ಮತ್ತು ರಾ.ಸಾ. ವ್ಯಂಕಟ ರಂಗೋ ಕಟ್ಟೀ ಕಂನಡ ತ್ರಾನ್ಸಲೇಟರ ಇವರು ಇಂಥ ಪುಸ್ತಕವು ಅವಶ್ಯಕವಾಗಿ ಇರತಕ್ಕದ್ದೆಂತಲೂ, ಮಾಡಿದ ಕಷ್ಟವು ಕಡೆಗಾಣಬೇಕೆಂತಲೂ, ಇದನ್ನು ಅಚ್ಚುಹಾಕಲು ಪ್ರೇರಣೆ ಮಾಡಿ ತಮ್ಮ ಪಾಲಿಗೆ ಭೂಷಣವನ್ನು ತಕ್ಕೊಂಡರು; ಆ ಕಾರಣ ಈ ಉಭಯತರ ಉಪಕಾರವನ್ನು ನಾನು ಅಂತಃಕರಣ ಪೂರ್ವಕವಾಗಿ ನೆನಿಸುತ್ತೇನೆ"[೩] ಎಂಬ ವಿವರದಲ್ಲಿ ಡೆಪ್ಯೂಟಿಯವರು ಇವರಿಗೆ ನೀಡಿದ ಉತ್ತೇಜನ ಸ್ಪಷ್ಟ ಕಾಣಿಸುತ್ತದೆ. ಇದಲ್ಲದೆ ಡೆಪ್ಯೂಟಿಯವರು ತಾವು ಟ್ರೇನಿಂಗ್ ಕಾಲೇಜಿನಿಂದ ಪ್ರಕಟಿಸುತ್ತಿದ್ದ ಮಠಪತ್ರಿಕೆಯ ಸಹಸಂಪಾದಕರಾಗಿಯೂ ಇವರನ್ನು ದುಡಿಸಿಕೊಂಡರು. ಹೀಗೆ ಡೆಪ್ಯೂಟಿಯವರ ಆತ್ಮೀಯ ವಲಯಕ್ಕೆ ಸೇರಿದ ಇವರು ಬೆಳಗಾವಿಯಲ್ಲಿ ಪ್ರಾರಂಭವಾದ ಲಿಂಗಾಯತ ಬೋರ್ಡಿಂಗ್‌ದ ಮೇಲ್ವಿಚಾಕರಾಗಿಯೂ ಕೆಲಸಮಾಡಿದ್ದನ್ನು ತಿಳಿದರೆ ಚೆನ್ನಬಸಪ್ಪನವರ ಬಗೆಗೆ ಇವರಿಗಿದ್ದ ಗೌರವ ಇನ್ನೂ ಸ್ಪಷ್ಟವಾಗುತ್ತದೆ.

## ಹುಯಿಲಗೋಳ ಭುಜಂಗರಾಯರು
(೧೮೩೧-೧೮೮೫)

ಡೆಪ್ಯೂಟಿ ಚೆನ್ನಬಸಪ್ಪನವರ ನಂತರ ಟ್ರೇನಿಂಗ್ ಕಾಲೇಜಿನ ಕರ್ಣಧಾರತ್ವ ವಹಿಸಿ, ಅಖಂಡ ೧೮ ವರ್ಷಗಳ ಕಾಲ ಅದರ ಶ್ರೇಯೋಭಿವೃದ್ಧಿಗೆ ದುಡಿದವರು ಭುಜಂಗರಾಯರು.

ಭುಜಂಗರಾಯರು ಶಿಕ್ಷಣವನ್ನು ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಮುಗಿಸಿ, ಒಂದೆರಡು ಕಡೆ ಅಲ್ಪಾವಧಿ ನೌಕರಿ ಮಾಡಿ, ಅನಂತರ ೨೪.೧೧.೧೮೫೪ ರಿಂದ ೨೦ ತಿಂಗಳುಗಳ ಕಾಲ ೬೦ ರೂಪಾಯಿಗಳ ಸಂಬಳದ ಮೇಲೆ ಧಾರವಾಡದಲ್ಲಿ ಆಂಗ್ಲೋ ವರ್ನಾಕ್ಯುಲರ್ ಶಾಲೆಯ ಮುಖ್ಯೋಪಾಧ್ಯಾಯರೆಂದೂ, ಅದರ ಮುಂದಿನ ಆರುತಿಂಗಳು ೧೦೦ ರೂಪಾಯಿ ಪಗಾರದ ಮೇಲೆ ಉತ್ತರಕನ್ನಡ ಜಿಲ್ಲೆಯಲ್ಲಿ ಪೊಲೀಸ ಇನ್‌ಸ್ಪೆಕ್ಟರರೆಂದೂ, ತರುವಾಯದ ಸುಮಾರು ೫ ವರ್ಷ ಹತ್ತಿಯ ವ್ಯಾಪಾರಿಯಾಗಿಯೂ ಕೆಲಸಮಾಡಿ, ಇವೆಲ್ಲಕ್ಕೂ ಒಂದಾದ ಮೇಲೆ ಒಂದಕ್ಕೆ ವಿದಾಯ ಹೇಳುತ್ತ ಅನುಭವದ ಭಂಡಾರವಾಗಿ ರೂಪುಗೊಂಡ ಭುಜಂಗರಾಯರು ಕ್ರಿ.ಶ.೧೮೬೬ ಮಾರ್ಚ ೨೩ ರಂದು ಬೆಳಗಾವಿಯ ಟ್ರೇನಿಂಗ್ ಕಾಲೇಜಿನ ಪ್ರಥಮ ಆಸಿಸ್ಟಂಟ ಶಿಕ್ಷಕರೆಂದು ನೇಮಿಸಲ್ಪಟ್ಟರು. ಮುಂದೆ ಅಲ್ಪಾವಧಿಯಲ್ಲಿಯೇ ಡೆಪ್ಯೂಟಿ ಅವರ ಬಳಿಕ ಅಂದರೆ ೧.೭.೧೮೬೭ ಕ್ಕೆ ೧೫೦ ರೂಪಾಯಿ ಸಂಬಳದ ಮೇಲೆ ಅದೇ ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲ ಹುದ್ದೆಯನ್ನು ಪಡೆದರು.

ಶ್ರೀಯುತರು ಪ್ರಿನ್ಸಿಪಾಲರೆಂದು ನೇಮಕ ಹೊಂದಿ ಕನ್ನಡದ ವಾತಾವರಣ ನೆಲೆಗೊಳ್ಳುವಂತೆ ಡೆಪ್ಯೂಟಿಯವರಂತೆಯೆ ಸಾಕಷ್ಟು ಮುತುವರ್ಜಿವಹಿಸಿ ಕೆಲಸಮಾಡಿದರು. ಬೆಳಗಾವಿಯಿಂದ ಟ್ರೇನಿಂಗ್ ಕಾಲೇಜು ಧಾರವಾಡಕ್ಕೆ ವರ್ಗವಾಗಬೇಕೆಂಬ ರಸೆಲ್ ಸಾಹೇಬರ ಆಸಕ್ತಿಯನ್ನು ಬೆಂಬಲಿಸಿದವರು ಭುಜಂಗರಾಯರು. ಈ ವಿಷಯಕ್ಕೆ ಸಂಬಂಧಿಸಿ ಸನ್ ೧೮೬೮

೩. ತುರಮರಿ ಗಂಗಾಧರ ಮಡಿವಾಳೇಶ್ವರ : ಕವಿತಾಸಂಗ್ರಹವು - ಸೂಚನೆಯು (೧೮೭೪)

ರಲ್ಲಿ ಸರ್ಕಾರಕ್ಕೆ ಅರ್ಪಿಸಿದ ವರದಿಯಲ್ಲಿ ಅವರು "ಟ್ರೇನಿಂಗ್ ಕಾಲೇಜು ಕನ್ನಡ ವಾಙ್ಮಯದ ಮಾತೃಸ್ಥಾನವು .... ರಸೆಲ್ ಸಾಹೇಬರ ಅಭಿಪ್ರಾಯದಂತೆ ಬೆಳಗಾವಿ ಈ ವಿಷಯದಲ್ಲಿ ಯೋಗ್ಯ ಸ್ಥಳವಲ್ಲವೆಂದು ನಾನಾದರೂ ಅಭಿಪ್ರಾಯಪಡುತ್ತೇನೆ. ಟ್ರೇನಿಂಗ್ ಕಾಲೇಜಿನ ಅವಸ್ಥೆ ನೀರಹೊರಗಿನ ಮೀನದಂತೆ ಆಗಿದೆ. ಬೆಳಗಾವಿ ಮಹಾರಾಷ್ಟ್ರದೇಶಕ್ಕೆ ಸಮೀಪವಾಗಿದ್ದ ಕನ್ನಡ ಸೇವೆಯಲ್ಲಿರುವುದರಿಂದ ಈ ಕಾಲೇಜಿಗೆ ಬರುವ ವಿದ್ಯಾರ್ಥಿಗಳು ಹೆಚ್ಚಾಗಿ ಮರಾಠಿಯನ್ನಾಡುವವರೇ ಇರುತ್ತಾರೆ. ಆದುದರಿಂದ ಈ ಸಂಸ್ಥೆಯನ್ನು ಧಾರವಾಡಕ್ಕೆ ಒಯ್ದರೆ ಅದಕ್ಕೆ ಹೆಚ್ಚಿನ ಸೌಕರ್ಯಗಳುಂಟಾಗುವದಲ್ಲದೆ, ಅದರ ಕಾರ್ಯಕ್ಷೇತ್ರವೂ ಹೆಚ್ಚುವುದು"[೪] ಎಂದು ಅರಿಕೆ ಮಾಡಿಕೊಂಡರು.

ಭುಜಂಗರಾಯರ ಪ್ರಸ್ತುತ ಮಾತಿನಲ್ಲಿ ಅಡಕವಾಗಿರುವ 'ಟ್ರೇನಿಂಗ್ ಕಾಲೇಜು ಕನ್ನಡ ವಾಙ್ಮಯದ ಮಾತೃಸ್ಥಾನವು' ಎಂಬ ವಿಚಾರ ಅವರ ದೂರದೃಷ್ಟಿಯ ಸ್ಪಷ್ಟ ನಿದರ್ಶನವಾಗಿದೆ. ಅಷ್ಟೇ ಅಲ್ಲ, ಕನ್ನಡ ಭಾಷೆಯು ಸತ್ವಶಾಲಿಯಾಗಿ ಬೆಳೆಯಬೇಕೆಂಬ ತೀವ್ರ ಕಳಕಳಿಯ ಪರಿಣಾಮವೂ ಆಗಿದೆ. ಮುಂಬೈ ಕರ್ನಾಟಕದಲ್ಲಿ ಭುಜಂಗರಾಯರು ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದಾಗ ಚೆನ್ನಬಸಪ್ಪನವರು ಡೆಪ್ಯೂಟಿ ಇನ್‌ಸ್ಪೆಕ್ಟರರಾಗಿದ್ದರು. ರಸೆಲ್ಲರು ಇನ್‌ಸ್ಪೆಕ್ಟರರಾಗಿದ್ದರು. ಈ ಸಮಾನ ಮನಸ್ಸಿನ ಅಧಿಕಾರಿ ತ್ರಯರನ್ನು ಸಮಾನಧ್ಯೇಯದ ಏಕಸೂತ್ರವೊಂದರಲ್ಲಿ ಬಂಧಿಸಿದ್ದು, ಅವರ ಕನ್ನಡನಿಷ್ಠೆ ಎಂಬುದು ಒಡೆದು ತೋರುವ ಸಂಗತಿಯಾಗಿದೆ. ಕನ್ನಡ ಶಿಕ್ಷಣಕ್ಕೆ ಭದ್ರವಾದ ನೆಲೆಗಟ್ಟನ್ನು ರೂಪಿಸಲಿಕ್ಕೆ ಈ ಮೂವರ ಸಾಮೂಹಿಕ ಪ್ರಯತ್ನವೇ ಕಾರಣವೆಂಬುದು ಮರೆಯಲಾಗದ್ದು.

ಸನ್ ೧೮೭೪ ರ ಶಾಲಾಪತ್ರಕದ ಜಾಹಿರಾತು, ಭುಜಂಗರಾಯರ ದೂರದ ಸಂಬಂಧಿ 'ಉದಯವಾಗಲಿ' ಹಾಡಿನ ಹುಯಿಲಗೋಳ ನಾರಾಯಣರಾಯರ ಚರಿತ್ರೆ ಮತ್ತು ದಿವಂಗತ ಹನುಮಂತರಾವ ದೇಶಪಾಂಡೆ ಇವರ ಚರಿತ್ರೆಗಳಲ್ಲಿ - ಹೀಗೆ ಪ್ರತ್ಯೇಕವಾಗಿ ಮೂರುಕಡೆ, ಭುಜಂಗರಾಯರು 'ಪ್ರಾಕೃತಿಕ ಭೋಗೋಲ' ಎಂಬ ಕೃತಿಯನ್ನು ರಚಿಸಿದ್ದರ ಬಗ್ಗೆ ಪ್ರಸ್ತಾಪ ಬಂದಿದೆ. ಆದರೆ ಅದು ಲಭ್ಯವಿಲ್ಲ. ಇದರ ಹೊರತಾಗಿ ಅವರು ಬೇರೆ ಕೃತಿಗಳನ್ನು ರಚಿಸಿದಂತೆ ತೋರುವುದಿಲ್ಲ.

ಭುಜಂಗರಾಯರ ಯೋಗ್ಯತೆಗೆ ತಕ್ಕ ಪುರಸ್ಕಾರ ಸಿಕ್ಕದ್ದು ಚೆನ್ನಬಸಪ್ಪನವರಿಂದಲೇ. ಇವರಿಬ್ಬರ ನಡುವೆ ನಡೆದ ನೇರ ಪತ್ರವ್ಯವಹಾರದ ಒಂದೆರಡು ಮಾದರಿಗಳು ಹೀಗಿವೆ:

ಪ್ರಿಯ ಭುಜಂಗರಾವ್,

ಮರಾಠಿಯಲ್ಲಿ ಸಹಿ ಮಾಡುವುದು ಅವಶ್ಯವಿಲ್ಲವೆಂದು ನಿಮ್ಮ ವಿದ್ಯಾರ್ಥಿಗಳಿಗೆ ತಿಳಿಸಬೇಕು. ಅವರ ಅಂಕಿತವು ಕನ್ನಡದಲ್ಲಿಯೇ ಇರುವುದು ಸೂಕ್ತವೆನಿಸುತ್ತದೆ. (ಬೆಳಗಾವ ೨೨.೮.೭೮)

ಪ್ರಿಯ ಭುಜಂಗರಾವ್,

ಈಗ ನಮ್ಮ ಶಾಲೆಗಳಲ್ಲಿ ಮರಾಠಿಯನ್ನು ಕಲಿಸುವುದು ಅವಶ್ಯವಿಲ್ಲ. ಶಿಕ್ಷಕರ ಯಶಸ್ಸು ಕೇವಲ ಅವರು ಕನ್ನಡವನ್ನು ಹೇಗೆ ಕಲಿಸುವರೆಂಬುದರ ಮೇಲೆಯೇ ಅವಲಂಬಿಸಿರುತ್ತದೆ.

೪. ಧಾರವಾಡಕರ, ರಾ.ಯ. : ಜೀವನ ಶಿಕ್ಷಣ, ಪುಟ. ೩೩

ಇದನ್ನು ನಿಮ್ಮ ಎಲ್ಲ ವಿದ್ಯಾರ್ಥಿಗಳ ಗಮನಕ್ಕೆ ಸ್ಪಷ್ಟವಾಗಿ ತಂದುಕೊಡಬೇಕು. (ನರಗುಂದ ೨.೩.೧೮೭೦).

ಇವು ಡೆಪ್ಯೂಟಿಯವರ ಕನ್ನಡದ ಬಗೆಗಿನ ಶುದ್ಧಾಂತಃಕರಣದ ದ್ಯೋತಕವೂ ಹೌದು, ಬೇರೆಯವರಿಂದ ಕೆಲಸ ತೆಗೆದುಕೊಳ್ಳುವ ರೀತಿಗೆ ಪುರಾವೆಯೂ ಹೌದು.

## ಶಾಂತವೀರ ರಾಚಿದೇವ ಕಿತ್ತೂರ
## (೧೮೨೦-೧೮೮೫)

ಕಟ್ಟಿಮಠಧ ಸ್ವಾಮಿಗಳಾದ ಹುಚ್ಚರಾಚಿದೇವರ ತಮ್ಮನಾದ ರಾಚಿದೇವ ಹಾಗೂ ಅವರ ಧರ್ಮಪತ್ನಿ ಶಿವಗಂಗಾದೇವಿ ಇವರ ಹೊಟ್ಟೆಯಲ್ಲಿ (ಸ.೨೭, ೧೮೨೦) ಹುಟ್ಟಿದ ಶಾಂತವೀರ ಕಿತ್ತೂರರ ಜನ್ಮಸ್ಥಳ ಕಿತ್ತೂರೇ.[೫] ಇವರ ಪ್ರಾಥಮಿಕ ಶಿಕ್ಷಣ ಕೂಡಾ ಇದೇ ಊರಿನಲ್ಲಿಯೇ ಆಯಿತು. ಆಗ ಕಿತ್ತೂರಿನ ಸಂಸ್ಥಾನಿಕರು ನಡೆಸುತ್ತಿದ್ದ ಸಂಸ್ಕೃತ ಪಾಠಶಾಲೆಯಲ್ಲಿ ಇವರಿಗೆ ಸಂಸ್ಕೃತವನ್ನು ಅಭ್ಯಸಿಸಲು ಅನುವು ದೊರೆಯಿತು. ಬಹುಶಃ ಕಿತ್ತೂರಿನ ಮಲ್ಲಸರ್ಜದೊರೆಯ ಮಗ ಶಿವಲಿಂಗಸರ್ಜನೂ, ಗರಗದ ಮಡಿವಾಳಸ್ವಾಮಿಗಳೂ ಸಹಪಾಠಿಗಳಾಗಿದ್ದರೆಂಬ ಪ್ರತೀತಿ ಇದೆ. ಆದರೆ ಈ ವಿಷಯವನ್ನು ನಂಬುವುದಕ್ಕೆ ಖಚಿತವಾದ ಆಧಾರಗಳೇನೂ ಇಲ್ಲ. ತಮ್ಮ ಪ್ರಾಥಮಿಕ ಅಭ್ಯಾಸ ಮುಗಿದ ನಂತರ ಹೆಚ್ಚಿನ ವ್ಯಾಸಂಗಕ್ಕಾಗಿ ಶಾಂತವೀರರು ಹಾನಗಲ್ಲು, ಬೆಳ್ಳಿಕಟ್ಟಿ ಮತ್ತು ಮೈಸೂರುಗಳಿಗೆ ಹೋದಂತೆ ತಿಳಿದುಬರುತ್ತದೆ.

ಕ್ರಿ.ಶ. ೧೮೫೦ ರಲ್ಲಿ ಬೆಳಗಾವಿಯಲ್ಲಿ ಪ್ರಾರಂಭಗೊಂಡಿದ್ದ ಸರದಾರ ಹಾಯ್‌ಸ್ಕೂಲಿನಲ್ಲಿ ಕ್ರಿ.ಶ. ೧೮೬೧ ಸುಮಾರಿಗೆ ಇವರು ಕನ್ನಡ ಶಿಕ್ಷಕರೆಂದು ತಮ್ಮ ಸೇವೆಯನ್ನು ಆರಂಭಿಸಿದರು. ಮುಂದೆ ಇವರು ತಮ್ಮ ಜನ್ಮಸ್ಥಳವಾದ ಕಿತ್ತೂರಿನಲ್ಲಿಯೂ (೧.೯.೧೮೬೬ ರಿಂದ ೪.೪.೧೮೬೭ ರ ವರೆಗೆ) ಶಿಕ್ಷಕರಾಗಿ ಕೆಲಸ ಮಾಡಿದ ಬಗ್ಗೆ ಮಾಹಿತಿ ಸಿಕ್ಕುತ್ತದೆ. (ನೋಡಿ ವೀ.ರು.ಕೊಪ್ಪಳ: ಜೀವನ ಶಿಕ್ಷಣ ೧೯೫೭ ಪುಟ. ೬೦). ಆ ತರುವಾಯ (೧೧.೯.೧೮೬೭ ರ ಸುಮಾರಿಗೆ) ಅವರ ವಿದ್ವತ್ತಿನ ಲಾಭಪಡೆಯುವ ಉದ್ದೇಶದಿಂದ ಡೆಪ್ಯೂಟಿ ಚೆನ್ನಬಸಪ್ಪನವರೇ ೩೫ ರೂಪಾಯಿ ಸಂಬಳದ ಮೇಲೆ ಇವರನ್ನು ಬೆಳಗಾವಿಯ ಟ್ರೇನಿಂಗ್ ಕಾಲೇಜಿನಲ್ಲಿ ೨ನೇ ಅಸಿಸ್ಟಂಟ ಶಿಕ್ಷಕರೆಂದು ನೇಮಿಸಿದರು. (ಆಗ ಅಲ್ಲಿ ಭುಜಂಗರಾವ ಹುಯಿಲಗೋಳರು ಪ್ರಿನ್ಸಿಪಾಲರಾಗಿದ್ದರು).

ಶಾಂತವೀರ ಕಿತ್ತೂರರು ತಮ್ಮ ಪಾಂಡಿತ್ಯ, ಪರಿಶ್ರಮ, ಸಜ್ಜನಿಕೆಗಳಿಂದಾಗಿ ಗೌರವಾರ್ಹವ್ಯಕ್ತಿ ಎನಿಸಿದ್ದರು. ಧಾರವಾಡದಲ್ಲಿದ್ದಾಗ ಇವರು ಮತ್ತು ಡೆಪ್ಯೂಟಿ ಚೆನ್ನಬಸಪ್ಪನವರು ಮುಖಾಮುಖಿ ಕುಳಿತುಕೊಂಡು ಹಲವು ವಿಷಯಗಳನ್ನು ಮುಕ್ತವಾಗಿ ಚರ್ಚಿಸುತ್ತಿದ್ದರು. ಯಾಕೆಂದರೆ ಶಾಂತವೀರಯ್ಯನವರು ಆಗ ನಂದಿಕೋಲ ಬಸವಣ್ಣದೇವರ ಗುಡಿ ಓಣಿಯಲ್ಲಿಯ ಕೊಂಗಿಯವರ ಮನೆಯಲ್ಲಿ ವಾಸಿಸುತ್ತಿದ್ದುದರಿಂದ ಅಲ್ಲೇ ಸಮೀಪದ

---

೫. ರಾ.ಯ. ಧಾರವಾಡಕರು ಶಾಂತವೀರರು ಹುಟ್ಟಿದ್ದು ಸೆಪ್ಟೆಂಬರ ೨೭, ೧೮೨೭ ಎಂದು ತಮ್ಮ ಸಂಶೋಧನಾ ಪ್ರಬಂಧದಲ್ಲಿ ನಮೂದಿಸಿದ್ದಾರೆ. ಆದರೆ ಶ್ರೀನಿವಾಸ ಹಾವನೂರರ ಸಂಶೋಧನಾ ಪ್ರಬಂಧ (ಹೊಸಗನ್ನಡದ ಅರುಣೋದಯ) ಮತ್ತು ಡೆಪ್ಯೂಟಿಯವರನ್ನು ಕುರಿತು ಪ್ರಕಟವಾಗಿರುವ ಕನ್ನಡದ ದೀಪದಲ್ಲಿ ಶ್ರೀ ಎಸ್.ಪಿ. ಪಾಟೀಲರು ಅವರು ಹುಟ್ಟಿದ್ದು ೧೮೨೦ ಎಂದು ನಮೂದಿಸಿದ್ದಾರೆ.

ಅಡಕಿ ಓಣಿಯಲ್ಲಿ ವಾಸಿಸುತ್ತಿದ್ದ ಚೆನ್ನಬಸಪ್ಪನವರನ್ನು ಸುಲಭವಾಗಿ ಭೆಟ್ಟಿಯಾಗಲು ಸಾಕಷ್ಟು ಅನುಕೂಲವಾಗಿತ್ತು.

ಶ್ರೀಯುತರು 'ಶಾಂತವೀರ ಛಂದಸ್ಸು', 'ಶಾಂತವೀರ ನಿಘಂಟು', 'ರಾಜಶೇಖರ ವಿಲಾಸದ ಎರಡನೆಯ ಆಶ್ವಾಸಕ್ಕೆ ಟೀಕೆ', ಡಾ. ಫ್ಲೀಟರನ್ನು ಕುರಿತು 'ನವರತ್ನಹಾರ' ಎಂಬ ಕವಿತಾ ಸಂಗ್ರಹವನ್ನು ಹೊರತಂದಿದ್ದಾರೆ. 'ದೊರೆಮಲ್ಲಸರ್ಜನ ಕಾವ್ಯ' ಎಂಬ ದುಂದುಮಿ ಧಾಟಿಯ ಕಾವ್ಯದ ಪೀಠಿಕೆಯಲ್ಲಿ 'ಗುರುಶಾಂತವೀರನು ಹೇಳಿದನೀಗ' ಎಂಬ ಉಕ್ತಿ ಇರುವುದರಿಂದ ಈ ಕೃತಿಯನ್ನು ಶಾಂತವೀರನೇ ರಚಿಸಿರಬಹುದೇ? ಎಂಬ ಸಂದೇಹ ಮೂಡುವಂತಾಗಿದೆ. ಇಂಥ ಸಾಹಿತ್ಯರಚನೆಯ ಜೊತೆಗೆ ಡೆಪ್ಯೂಟಿ, ತುರಮರಿ, ಕಟ್ಟೀ ಮೊದಲಾದವರ ಪ್ರೋತ್ಸಾಹ ಸಹಕಾರಗಳನ್ನು ಪಡೆದು ಇತಿಹಾಸ, ಭೂಗೋಲ, ವ್ಯಾಕರಣಗಳಿಗೆ ಸಂಬಂಧಿಸಿದ ಶಾಲೋಪಯೋಗಿ ಕೆಲವು ಕ್ರಮಿಕ ಪುಸ್ತಕಗಳನ್ನೂ ರಚಿಸಿದ್ದಂತೆ ತಿಳಿದುಬರುತ್ತದೆ.

ಇವರು ಸರದಾರ ಹಾಯ್‌ಸ್ಕೂಲಿನಲ್ಲಿ ಶಿಕ್ಷಕರಾಗಿದ್ದಾಗ ಆರಟಾಳ ರುದ್ರಗೌಡರೂ, ೧೮೬೯ ರಲ್ಲಿ ಟ್ರೇನಿಂಗ್ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿದ್ದಾಗ ರೊದ್ದ ಶ್ರೀನಿವಾಸರಾಯರೂ ಇವರ ಶಿಷ್ಯರಾಗಿದ್ದರು. ಇವರ ಕನ್ನಡ ಕಲಿಸುವ ವಿಧಾನ ಎಷ್ಟು ಚಿತ್ತಾಕರ್ಷಕವಾಗಿತ್ತೆಂದರೆ ಕೆಲವು ಪಾದ್ರಿಗಳೂ ಕೂಡಾ ಇವರಲ್ಲಿ ಬಂದು ಕನ್ನಡ ಕಲಿಯುತ್ತಿದ್ದರು. ಅಷ್ಟೇ ಅಲ್ಲ, ರೀವ್ಹ, ಫ್ಲೀಟ ಹಾಗೂ ಕಿಟೆಲ್ ಸಾಹೇಬರು ತಾವು ಪ್ರಕಟಿಸಿದ ಶಬ್ದಕೋಶಗಳ ಪ್ರತಿಗಳನ್ನು ಗೌರವ ಕಾಣಿಕೆಯಾಗಿ ಇವರಿಗೆ ನೀಡಿದ್ದುಂಟು. ಇವರೊಂದಿಗೆ ಶಾಂತವೀರರಿಗೆ ನಿಕಟ ಸಂಪರ್ಕವಿದ್ದಿತಲ್ಲದೆ ಕಿಟೆಲ್‌ರಿಗೆ ಕನ್ನಡದ ರುಚಿ ಹಚ್ಚಿದವರೂ ಇವರೇ. ಎಲ್ಲ ಕೋಮಿನವರಿಗೂ ಬೆಲ್ಲದ ಹೇರಾಗಿದ್ದ ಇವರನ್ನು ರೊದ್ದರು, ಸಕ್ಕರಿ ಬಾಳಾಚಾರ್ಯ, ಎಚ್.ಜಿ. ದೇಶಪಾಂಡೆ, ಮುದವೀಡು ಕೃಷ್ಣರಾಯ, ಆಲೂರು ವೆಂಕಟರಾಯ ಮೊದಲಾದವರು ಬಾಯ್ತುಂಬ ಕೊಂಡಾಡಿದ್ದಾರೆ.

## ವೆಂಕಟರಂಗೋ ಕಟ್ಟಿ
### (೧೮೩೩-೧೯೦೮)

ಟ್ರೇನಿಂಗ್ ಕಾಲೇಜಿನ ಪರಿಸರದಲ್ಲಿ ಕನ್ನಡವನ್ನು ರಕ್ಷಿಸಿ ಪೋಷಿಸುವ ಒಂದು ಕನ್ನಡ ಪಡೆಯೇ ಡೆಪ್ಯೂಟಿಯವರ ನೇತೃತ್ವದಲ್ಲಿ ಸಿದ್ಧವಾಯಿತು. ಕಾವ್ಯ, ಶಾಸ್ತ್ರ, ವೈದ್ಯಕೀಯವನ್ನು ಮನೆಯಲ್ಲೇ ಸಾಂಪ್ರದಾಯಿಕವಾದ ಕಟ್ಟುನಿಟ್ಟಿನಲ್ಲಿ ಅಭ್ಯಸಿಸುವ ಅನುಕೂಲವೂ ಇವರಿಗೆ ಒದಗಿತ್ತು. ಧೊಂಡೋಪಂತ ಶಿರೋಳಕರ ಎಂಬವರಲ್ಲಿ ಮರಾಠಿ, ಗಣಿತ, ಸ್ವಲ್ಪಮಟ್ಟಿಗೆ ಕನ್ನಡ ಓದು ಬರಹವನ್ನೂ ಕಲಿತರು. ಆ ಕಾಲದಲ್ಲಿ ಇಂಗ್ಲೀಷ ಕಲಿಯುವುದು ಗೌರವಾರ್ಹತೆಯ ದ್ಯೋತಕವೆನಿಸಿದ್ದರಿಂದ ಚೆನ್ನಬಸಪ್ಪನವರಂತೆಯೇ ಕಟ್ಟೀಯವರಲ್ಲಿಯೂ ಇಂಗ್ಲೀಷ ಕಲಿಯುವ ಆಸೆ ಮೊಳೆತುಕೊಂಡಿತು. ಮನೆಯವರ ನಿಷ್ಠುರ ಕಟ್ಟಿಕೊಂಡು ಪುಣೆಗೆ ತೆರಳಿದರು.

ಆಗ ಮುಂಬೈ ವಿಶ್ವವಿದ್ಯಾಲಯವು ಇನ್ನೂ ಸ್ಥಾಪಿತವಾಗಿರಲಿಲ್ಲ. 'ಬೋರ್ಡ ಆಫ್ ಎಜ್ಯುಕೇಶನ್' ಎಂಬ ಸರಕಾರೀ ಮಂಡಳಿಯ ಇಂಗ್ಲೀಷ ಶಾಲೆಗಳಲ್ಲಿಯೇ ಶಿಕ್ಷಣ ಪಡೆಯಬೇಕಾಗಿತ್ತು. ಇಲ್ಲಿ ನಾಲ್ಕಾರು ವರ್ಷ ಓದಿದವರಿಗೆ ಸರಕಾರೀ ನೌಕರಿ ಸಿಗುತ್ತಿದ್ದವು. ಇದರ ಮೇರೆಗೆ ಕಟ್ಟಿಯವರು ತಮ್ಮ ೨೩ನೇ ವಯಸ್ಸಿನಲ್ಲಿ ಪುಣೆಯ ಟ್ರೇನಿಂಗ್ ಕಾಲೇಜಿನ

ಅಸಿಸ್ಟಂಟ ಟೀಚರ ಹುದ್ದೆಯಲ್ಲಿ ಸೇರಿಕೊಂಡರು (೧೮೫೫). ಅಲ್ಲಿ ಅವರು ಒಂದು ದಶಕದ ವರೆಗೆ ಕೆಲಸ ಮಾಡಿದ ಮೇಲೆ ಅವರನ್ನು ಉತ್ತರ ಕನ್ನಡದ ಹೊನ್ನಾವರಕ್ಕೆ ೨೦ ರೂಪಾಯಿ ಸಂಬಳದ ಮೇಲೆ ನೇಮಿಸಲಾಯಿತು.

ಅಲ್ಲಿ ಎರಡು ವರ್ಷ ಕಳೆಯುವಷ್ಟರಲ್ಲಿ ಅವರಿಗೆ ಬೆಳಗಾವಿ ನಾರ್ಮಲ್ ಸ್ಕೂಲಿಗೆ ವರ್ಗವಾಯಿತು. ಅಲ್ಲಿ ಕನ್ನಡದ ಕಟ್ಟಾಭಿಮಾನಿ ಚೆನ್ನಬಸಪ್ಪನವರು ಆಗ ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರರು. ಇವರು ಕಟ್ಟಿಯವರಲ್ಲಿದ್ದ ಕಾರ್ಯನಿಷ್ಠೆ, ದಕ್ಷತೆಗಳನ್ನು ತಮ್ಮ ಮೇಲಧಿಕಾರಿ ರಸೆಲ್ಲರಿಗೆ ಮನವರಿಕೆ ಮಾಡಿಕೊಟ್ಟು ಅವರ ೨೦ ರೂಪಾಯಿಯ ಸಂಬಳವನ್ನು ೮೦ ರೂಪಾಯಿಗಳಿಗೆ ಹೆಚ್ಚಿಸುವಂತೆ ನೋಡಿಕೊಂಡು ಇನ್ನೂ ಹೆಚ್ಚಿನ ಉತ್ತೇಜನ ನೀಡಿದರು. ಮುಂದೆ ಕೆಲವೇ ದಿನಗಳಲ್ಲಿ ಅವರು ದಕ್ಷಿಣ ಭಾಗದ ಭಾಷಾಂತರಕಾರರಾಗಿ ನೇಮಕಗೊಂಡರು. ಇಲಾಖೆಗೆ ಅಗತ್ಯವಾಗಿದ್ದ ಪಠ್ಯಪುಸ್ತಕಗಳನ್ನು ತಯಾರಿಸುವುದು ಅವರ ಕೆಲಸವಾಗಿತ್ತು. ಆ ಸಂದರ್ಭದಲ್ಲಿ ಪಠ್ಯಪುಸ್ತಕಗಳು ಭಾಷಾಂತರಗೊಂಡೇ ನಿರ್ಮಾಣವಾಗುತ್ತಿದ್ದುದರಿಂದ ಸಂಸ್ಕೃತ, ಮರಾಠಿ, ಇಂಗ್ಲೀಷು ಮುಂತಾದ ಭಾಷೆಗಳಲ್ಲಿ ಗತಿಯಿದ್ದ ಕಟ್ಟಿಯವರು ಒಬ್ಬ ಯಶಸ್ವಿ ಭಾಷಾಂತರಕಾರರೆಂದೇ ಪ್ರಸಿದ್ಧರಾಗಿದ್ದರು.

"ವಿದ್ಯಾಖಾತೆಯ ಟ್ರಾನ್ಸಲೇಟರರೂ ಟ್ರೇನಿಂಗ ಕಾಲೇಜದ ಪ್ರಿನ್ಸಿಪಾಲರೂ ಆಗಿದ್ದಾಗ ಇವರು ಉತ್ತರ ಕರ್ನಾಟಕದ ವಿದ್ಯಾಖಾತೆಯ ಅಪ್ಪಣೆಯ ಮೇರೆಗೆ ಬರೆದ ಕನ್ನಡ ಕ್ರಮಿಕ ಪುಸ್ತಕಗಳು ಆ ಕಾಲದ ಮೈಸೂರು, ಮಂಗಳೂರು ಪ್ರಾಂತಗಳ ಕ್ರಮಿಕ ಪುಸ್ತಕಗಳಿಗಿಂತ ಭಾಷೆಯ ದೃಷ್ಟಿಯಿಂದಲೂ ಎಷ್ಟೋ ಪಾಲು ಮಿಗಿಲಾಗಿರುವವು. 'ಕನ್ನಡ ಶಾಲಾ ಪತ್ರಕಕ್ಕೆ ಭಾಷೆಯ ದೃಷ್ಟಿಯಿಂದ ಮಹತ್ವವುಂಟಾದದ್ದು ಈ ಮಹನೀಯರಿಂದಲೇ ಸರಿ. ಇವರು ರಚಿಸಿದ ಜ್ಯೋತಿಷಶಾಸ್ತ್ರ, ಪದಾರ್ಥವಿಜ್ಞಾನ ಶಾಸ್ತ್ರ, ವನಸ್ಪತಿಶಾಸ್ತ್ರ, ಖನಿಜ ಶಾಸ್ತ್ರ, ಲಘುವ್ಯಾಕರಣ, ಕನ್ನಡ ಕ್ರಮಿಕ ಪುಸ್ತಕಗಳು, ಶಾಲೋಪಯೋಗಿ ಕವಿತೆಯ ಪುಸ್ತಕಗಳು, ಇವೇ ಮೊದಲಾದವು ಆ ಕಾಲದ ಕನ್ನಡ ಅಭ್ಯಾಸ, ಬರವಣಿಗೆಗಳಲ್ಲಿ ವಿಶೇಷ ಬದಲಾವಣೆಯನ್ನುಂಟು ಮಾಡಿದವು. ಉತ್ತರ ಕರ್ನಾಟಕದ ಅರ್ವಾಚೀನ ಲೇಖಕರ ವರ್ಗಕ್ಕೆ ಇವರೇ ಮಾರ್ಗದರ್ಶಿಗಳಾಗಿ ರಾರಾಜಿಸುತ್ತಿರುವರೆಂದರೆ ಅತಿಶಯೋಕ್ತಿಯಾಗಲಾರದು. ಇವರ 'ಕರ್ನಾಟಕದ ಇತಿಹಾಸವು' ಭಾಷೆಯಲ್ಲಿಯೂ ಆ ಕಾಲದಮಾನದಂತೆ ವಿಷಯದಲ್ಲಿಯೂ ಅತಿಮಹತ್ವದ್ದಾಗಿರುವುದು. ಅದಕ್ಕೂ ಮೊದಲು ಪ್ರಾಥಮಿಕ ಶಾಲೆಗಳಲ್ಲಿ ವಿದ್ಯಾರ್ಥಿಗಳು ತಮ್ಮ ಮಾತೃಭೂಮಿ ಕರ್ನಾಟಕದ ಇತಿಹಾಸವನ್ನು ಮರಾಠಿಯ ಪುಸ್ತಕದಲ್ಲಿ ಓದಬೇಕಾಗುತ್ತಿತ್ತು"[೬] ಎಂಬ ಮಾತುಗಳು ಅವರ (ಕಟ್ಟೀಯವರ) ಕಾರ್ಯಾಸಕ್ತಿಯ ಸ್ಪಷ್ಟ ದಾಖಲೆಗಳಾಗಿವೆ. ಭುಜಂಗರಾಯರ ತರುವಾಯ ಸನ್ ೧೮೭೬ ರಲ್ಲಿ ೩೦೦ ರೂಪಾಯಿ ವೇತನದ ಮೇಲೆ ಕಟ್ಟಿಯವರು ಧಾರವಾಡದ ಟ್ರೇನಿಂಗ ಕಾಲೇಜದ ಪ್ರಿನ್ಸಿಪಾಲರಾಗಿ ನೇಮಿಸಲ್ಪಟ್ಟರು. ಲೇಖನ ಕಾರ್ಯದಲ್ಲಿ ಮೊದಲಿನಿಂದಲೂ ಸಹಜ ಆಸಕ್ತಿಯನ್ನು ಹೊಂದಿದ್ದ ಕಟ್ಟೀಯವರು 'ಅರೇಬಿಯನ್ ನೈಟ್ಸ್'ನ್ನು ಕನ್ನಡದಲ್ಲಿ ಅನುವಾದಿಸಿದ್ದರೂ, ಅವರ ಮೊಟ್ಟಮೊದಲಿನ ಪುಸ್ತಕ (ಶರೀರಶಾಸ್ತ್ರಕ್ಕೆ ಸಂಬಂಧಿಸಿದ್ದು) 'ನರತನು' ಮರಾಠಿಯಲ್ಲಿದ್ದುದನ್ನು ನೋಡಿದರೆ ಅದಕ್ಕೆ ಪುಣೆಯ ಪ್ರಭಾವ ಕಾರಣವಿರಬೇಕೆನಿಸುತ್ತದೆ. ಆಮೇಲೆ ಅವರು ಹಲವಾರು ಕೃತಿಗಳನ್ನು ರಚಿಸಿದರು. ಅವುಗಳಲ್ಲಿ 'ನೆಪೋಲಿಯನ್ ಬೋನಾಪಾರ್ಟನ ಚರಿತ್ರೆ', 'ಸವಾಯಿ

---

೬. ವಾಗ್ಭೂಷಣ : (ಸಪ್ಟೆಂಬರ ೧೯೨೪) ಪುಟ. ೪.

ಮಾಧವರಾವ್', 'ಆರು ಬೆರಳಿನ ಕುರುಹು' ಎಂಬ ನಾಟಕ, ಕರ್ನಾಟಕ ಗ್ಯಾಝಿಟೀಯರ್ ಉದ್ಗ್ರಂಥ, 'ಕರ್ನಾಟಕದ ವರ್ಣನೆಯ ಇತಿಹಾಸವು' ಎಂಬ ಚಿಕ್ಕ ಇತಿಹಾಸಗ್ರಂಥ, 'ವಿಧವಾ ಮುಂಡನ ಅನಾಚಾರ' ಎಂಬ ಚಿಂತನಪರ ಗ್ರಂಥ,'ಉಪನ್ಯಾಸವಿದ್ಯಾ' ಎಂಬ ಪ್ರಬಂಧಗ್ರಂಥ, 'ಬರ್ಥೋಲ್ಡನ ಚರಿತ್ರೆ' ಎಂಬ ಚಾರಿತ್ರಿಕ ಕೃತಿ, 'ರಸೆಲ್ಲ ಸಾಹೇಬರ ಆಡಳಿತ' ಎಂಬ ಇಂಗ್ಲೀಷಿನಲ್ಲಿ ಬರೆದ ಪ್ರಶಸ್ತಿ ಪುಸ್ತಕ ಮುಂತಾದವು ಗಮನಾರ್ಹವಾದವುಗಳು. ಇವರು ಬರೆದ ಸುಮಾರು ಹದಿನೆಂಟು ಪುಸ್ತಕಗಳಲ್ಲಿ ಹೆಚ್ಚಿನವು ವಿದ್ಯಾ ಇಲಾಖೆಗಾಗಿಯೇ ಬರೆದವುಗಳು, ವಿದ್ಯಾರ್ಥಿಗಳ ಪಠ್ಯಪುಸ್ತಕಗಳು.

'ಮುಂಬಯಿ ಕರ್ನಾಟಕದ ಗೆಜೆಟ್ಟು' ಮಾತ್ರ ಅದರ ಪ್ರತಿಭೆಯ ಕುರುಹು. ಅದು ಭಾಷಾಂತರವಾಗಿದ್ದರೂ ದೇಶಿಯ ಸತ್ವ ಸುಭಗತೆಯನ್ನೊಳಗೊಂಡ ಆಕರ್ಷಕ ಶೈಲಿಯಿದೆ. ಇಂದಿಗೂ ಅದು ತನ್ನ ಮಹತ್ವವನ್ನು ಯಥಾಸ್ಥಿತಿಯಲ್ಲಿ ಕಾಪಾಡಿಕೊಂಡಿದೆ. ಡೆಮಿ ಆಕಾರದ ೬೩೫ ಪುಟಗಳ ಈ ಬೃಹದ್ಗ್ರಂಥ ಅಂದಿನ ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳ ಹಾಗೂ ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳ ಐತಿಹಾಸಿಕ ಮತ್ತು ಸಾಮಾಜಿಕ ವಸ್ತುನಿಷ್ಠ ದಾಖಲೆಯಾಗಿದೆ. ೧೮೮೩ ರಲ್ಲಿ ಮುಂಬಯಿ ಸರಕಾರದ ಸೆಂಟ್ರೆಲ್ ಬುಕ್ ಡಿಪೋ ಪ್ರೆ ಸ್ಸಿನಲ್ಲಿ ಮುದ್ರಣಗೊಂಡ ಈ ಕೃತಿ ಇವತ್ತಿಗೂ ಪ್ರಮಾಣಗ್ರಂಥವಾಗಿಯೇ ಉಳಿದಿದೆ.[೭]

ಇವರ ಇತರ ಚಟುವಟಿಕೆಗಳನ್ನು ಕುರಿತು ವಿವರಿಸುವುದಾದರೆ, ಸರಕಾರಿ ನೌಕರಿಯಲ್ಲಿದ್ದಾಗಲೂ ಬೇರೆಯವರ ಹೆಸರಿನಲ್ಲಿ ಪತ್ರಿಕೆ ನಡೆಸಿದ ಸಾಹಸಿ ಇವರು. ಶಿಕ್ಷಣ ರಂಗಕ್ಕೆ ಅವಶ್ಯವಿದ್ದ ಶಾಲಾಪತ್ರಕವನ್ನು ಹೊರಡಿಸಲು ವಿಶೇಷ ಆಸ್ಥೆವಹಿಸಿದವರೂ ಇವರೇ. 'ಶೋಧಕ' ಎಂಬ ಮಾಸಪತ್ರಿಕೆ ಅವರ ಮಾರ್ಗದರ್ಶನದಲ್ಲಿಯೇ ಪ್ರಕಟವಾಗುತ್ತಿತ್ತು. ಶಿವನಪ್ಪ ದೇಸಾಯಿ ಅವರ ನಂತರ 'ಕರ್ನಾಟಕ ಪತ್ರ', 'ಚಂದ್ರೋದಯ' ಪತ್ರಿಕೆಯನ್ನು ತಾವೇ ತಮ್ಮ ಶಕ್ತಿ ಇರುವ ವರೆಗೂ ನಡೆಸಿದರು. ಟ್ರಾನ್ಸಲೇಟರ ಅಧಿಕಾರಿಯಾಗಿದ್ದಾಗ ತಮ್ಮ ಕೈಕೆಳಗಿನ ಕೆಲಸಗಾರರ ಸಹಾಯದಿಂದ ಕಲ್ಲಚ್ಚಿನ ಮುದ್ರಣವನ್ನು ರೂಪಿಸಿದವರು. ಮುದ್ರಣಯಂತ್ರಕ್ಕೆ ಕನ್ನಡ ಅಚ್ಚಿನ ಮೊಳೆಗಳನ್ನು ಸಿದ್ಧಪಡಿಸಿದವರು. ಧಾರವಾಡದಲ್ಲಿ 'ಜ್ಞಾನವರ್ಧಕ'ವೆಂಬ ಮುದ್ರಣಾಲಯವನ್ನು ಆರಂಭಿಸಿ 'ಲೋಕಶಿಕ್ಷಣ'ವೆಂಬ ಪತ್ರಿಕೆಯನ್ನು ಜನಪ್ರಿಯ ಗೊಳಿಸಿದವರು.

ರಸೆಲ್ಲ ಹಾಗೂ ಡೆಪ್ಯೂಟಿಯವರ ಕನ್ನಡ ಕಟ್ಟುವ ಕೆಲಸದಲ್ಲಿ ಕಟ್ಟೀ ಹಾಗೂ ಅವರಂಥ ಇನ್ನುಳಿದವರ ಪಾಲೂ ಅಷ್ಟೇ ಮುಖ್ಯ. ಈ ಹಿನ್ನೆಲೆಯಲ್ಲಿ ಕಟ್ಟೀ ಅವರು "ರಸೆಲ್ಲರ ಸೇನಾನಿಗಳಾಗಿ ಕನ್ನಡ ಚಳುವಳಿಗೆ ಕಳೆತಂದವರು" ಎಂಬ ಬೇಂದ್ರೆಯವರ ಮಾತು ಸತ್ಯವೆನಿಸುತ್ತದೆ. ಒಟ್ಟಾರೆ ತಮ್ಮ ಬದುಕಿನ ಬಹುಭಾಗವನ್ನು ಡೆಪ್ಯೂಟಿಯವರ ಹಂಬಲ, ತುಡಿತಗಳಿಗೆ ಮೀಸಲಿಟ್ಟು ಸಹಸ್ಪಂದಿಯಾಗಿ ದುಡಿದ ಈ ಹಿರಿಯ ಜೀವ ೧೮೯೦ ಮೇ ೧೨ ರಂದು(ಬುಧವಾರ) ದೈವಾಧೀನವಾಯಿತು.

---

೭. ರಾ.ಯ.ಧಾರವಾಡಕರು 'ಪ್ರಸ್ತುತ ಸಂಪುಟವು ಮಂಗಳೂರಿನ ಕೊಡಿಯಾಲ ಬೈಲ ಛಾಪಖಾನೆಯಲ್ಲಿ ಮುದ್ರಿತವಾಯಿತು ಎಂದಿದ್ದಾರೆ : ಹೊಸಗನ್ನಡ ಸಾಹಿತ್ಯದ ಉದಯಕಾಲ, ಪುಟ.೨೩೭.

## ಚುರಮರಿ ಶೇಷಗಿರಿರಾಯರು
## (೧೮೨೭-೧೮೮೪)

ಶೇಷಗಿರಿರಾಯರು ಸಂಗೀತ ವಿದ್ವಾಂಸರಾಗಿದ್ದ ರಾಮಚಂದ್ರರಾಯರ ಮಗ. ಮುಂಬೈ ನಿವಾಸಿಗಳಾಗಿದ್ದ ಇವರು ಶಾಕುಂತಲವಲ್ಲದೆ 'ಮೃಚ್ಛಕಟಿಕ ನಾಟಕ', 'ಸುಂದರ ನಾಟಕ', 'ಜೈಮಿನಿಭಾರತದ ಮರಾಠಿ ಅನುವಾದ' ಎಂಬ ಕೃತಿಗಳನ್ನು ಹೊರತಂದ ಬಗ್ಗೆ ಉಲ್ಲೇಖಗಳಿವೆ. ಆದರೆ ಶಾಕುಂತಲವೊಂದನ್ನು ಬಿಟ್ಟು ಇನ್ನುಳಿದ ಕೃತಿಗಳು ಭಾಗಶಃ ಲಬ್ಧ ಎಂಬ ಸಂಗತಿ ವಿಷಾದನೀಯ.[೮]

ಶೇಷಗಿರಿರಾಯರ ನಾಡಿಮಿಡಿತಗಳನ್ನು ಗ್ರಹಿಸಿದ ಸೂಕ್ಷ್ಮಮತಿ ಚೆನ್ನಬಸಪ್ಪನವರು ಅವರ ಸಾಹಿತ್ಯಿಕ ಒಲವನ್ನು ಕನ್ನಡ ಸಾಹಿತ್ಯದ ಕಡೆ ತಿರುಗಿಸಿ ಅದನ್ನು ಪೂರ್ಣಪ್ರಮಾಣದಲ್ಲಿ ದುಡಿಸಿಕೊಂಡರು. ಇವರಿಬ್ಬರೂ ಇಂಜನೀಯರಿಂಗ ಪದವೀಧರರಾಗಿದ್ದು, ಆತ್ಮೀಯರೂ ಆಗಿದ್ದರು. ಹೀಗಾಗಿ ಚೆನ್ನಬಸಪ್ಪನವರು ಚುರಮರಿಯವರಿಗೆ ಹೀಗೆ ಬರೆದು ತಿಳಿಸಿದರಂತೆ :

"ನೀವು ಮರಾಠೀ ಭಾಷೆಯಲ್ಲಿ ಒಳ್ಳೇ ಲೇಖಕರಾಗಿದ್ದೀರಿ. ಸುವಿದ್ಯೆಯ ಜನರು ಯಾವ ಭಾಷೆಯಲ್ಲಿ ವ್ಯವಹರಿಸುತ್ತಾರೋ ಅದು ಬೇಗನೇ ಅಭಿವೃದ್ಧಿ ಹೊಂದುತ್ತದೆ. ನಮ್ಮತ್ತಕಡೆ ವಿದ್ಯೆಯಲ್ಲಿ ಮುಂದುವರಿದವರು ಕಡಿಮೆ. ಮುದ್ರಾಯಂತ್ರಗಳು, ಪತ್ರಿಕೆಗಳು ಇಲ್ಲ. ಕಾವ್ಯ, ನಾಟಕಗಳನ್ನು ಬರೆಯುವವರಿಗೆ ಉತ್ತೇಜನವೂ ಇಲ್ಲ, ನಿಜ. ಆದರೆ ನಿಮ್ಮಂಥವರು ಪರಭಾಷೆಯಲ್ಲಿ ಬರೆಯತೊಡಗಿದರೆ ಕನ್ನಡ ಭಾಷೆಯು ಹೇಗೆ ಸಮೃದ್ಧವಾದೀತು? ಅಡಚಣೆಗಳನ್ನು ಬದಿಗೊತ್ತಿ ನಾವು ಕನ್ನಡ ಭಾಷೆಯನ್ನು ಮುಂದೆ ತರಬೇಕಾಗಿದೆ. ನಿಮ್ಮ ಪಾಂಡಿತ್ಯವು ಇತರ ಜನರಿಗೆ ಪ್ರಯೋಜನವಾಗುವುದರ ಬದಲು ನಮ್ಮ ಕನ್ನಡಿಗರಿಗೆ ಪ್ರಯೋಜನವಾಗುವಂತೆ ಮನಸ್ಸು ಮಾಡಿರಿ. ಕನ್ನಡದಲ್ಲಿ ನಿಮ್ಮಂಥವರು ಪುಸ್ತಕ ಬರೆಯಬೇಕು. ನಾನು ಎಲ್ಲ ರೀತಿಯಿಂದಲೂ ನಿಮಗೆ ಸಹಾಯ ಮಾಡುತ್ತೇನೆ"[೯] ಎಂಬ ಹೃದಯಸ್ಪರ್ಶಿ ಮನವಿ ಶೇಷಗಿರಿರಾಯರ ಅಂತರಂಗವನ್ನು ತಟ್ಟದೇ ಇರಲಿಲ್ಲ. ಆದ್ದರಿಂದ ಅವರು ಜೈಮಿನಿ ಭಾರತದ ಪೀಠಿಕಾಸಂಧಿಯನ್ನು ವಿವಿಧ ವೃತ್ತಗಳಲ್ಲಿ ಮರಾಠಿಗೆ ಭಾವಾನುವಾದ ಮಾಡಿ ಮರಾಠೀ ಕಾವ್ಯಪ್ರೇಮಿಗಳು ಕನ್ನಡ ಸಾಹಿತ್ಯವನ್ನು ಗೌರವಾದರಗಳಿಂದ ನೋಡುವಂತೆ ಮಾಡಿದರು.

ಚೆನ್ನಬಸಪ್ಪನವರ ಸ್ನಿಗ್ಧಸ್ನೇಹ ಶಾಕುಂತಲವನ್ನೂ ಕನ್ನಡಿಸುವಂತೆ ಮಾಡಿತು. ಇದು ಅವರ ನಾಲ್ವತ್ತೊಂದನೆಯ ವಯಸ್ಸಿನಲ್ಲಿ (೧೮೬೯) ರಚಿತವಾಗಿ, ಮರುವರ್ಷ ಮುಂಬಯಿಯ ಎಜ್ಯುಕೇಶನಲ್ ಸೊಸಾಯಿಟಿಯ ಮುದ್ರಣಾಲಯದಲ್ಲಿ ಪ್ರಕಟವಾಯಿತು. ಇದರ ಎರಡನೇ ಆವೃತ್ತಿ ವೆಂಕಟರಂಗೋಕಟ್ಟೀಯವರ ಧಾರವಾಡದ'ಜ್ಞಾನವರ್ಧಕ ಮುದ್ರಣಾಲಯ'ದಲ್ಲಿ ಅಚ್ಚಾಯಿತು. ಮುಂದೆ ೧೮೯೩ ರಲ್ಲಿ ಅನಾಡ ಚೆನ್ನಬಸಪ್ಪನವರ ಕರ್ನಾಟಕ ಬುಕ್ ಡಿಪೋ ಪ್ರೆಸ್ಸಿನಲ್ಲಿ ಇದರ ಮೂರನೇ ಆವೃತ್ತಿ ಬೆಳಕುಕಂಡರೆ, ಮುದವೀಡು ಕೃಷ್ಣರಾಯರ ಆಸಕ್ತಿಯಿಂದ

೮. ಕೆಲವು ಮರಾಠಿ ಕವಿತೆಗಳನ್ನು ವಿವಿಧವಿಜ್ಞಾನ ಮಾಸಪತ್ರಿಕೆಗೆ ಕೆಲವು ಲೇಖನಗಳನ್ನು ಬರೆದ ಬಗ್ಗೆಯೂ ತಿಳಿಯುತ್ತದೆ: ಸಾಂಗಲಿ ವೆಂಕಟೇಶ - ಕನ್ನಡದ ಪುಣ್ಯಪುರುಷರು: ಚುರಮರಿ ಶೇಷಗಿರಿರಾಯರು, ಪುಟ. ೧೩.

೯. ಸಾಂಗಲಿ, ವೆಂಕಟೇಶ - ಹೊಸಗನ್ನಡದ ಪುಣ್ಯಪುರುಷರು : ಪುಟ. ೧೩-೧೪ ಉಲ್ಲೇಖ.

ಬೆಳಗಾವಿಯ ವಿದ್ಯಾರಣ್ಯ ಗ್ರಂಥಮಾಲೆಯಲ್ಲಿ ನಾಲ್ಕನೆ ಆವೃತ್ತಿ ಮುದ್ರಿತವಾಯಿತು. ಈ ಕೃತಿಯ ಪೀಠಿಕೆಯಲ್ಲಿ ಶೇಷಗಿರಿರಾಯರು ತಮ್ಮನ್ನು ಸಾಕಷ್ಟು ಅಂತಃಕರಣದಿಂದ ನೋಡಿಕೊಂಡು ಸಾಹಿತ್ಯಾಭಿರುಚಿಯನ್ನು ಉತ್ತೇಜಿಸಿದ ಚೆನ್ನಬಸಪ್ಪನವರನ್ನು ಕುರಿತು -

> "ಕಡುಗುರುಭಕ್ತಿಯಿಂ ತುರಮರೀತ್ಯುಪನಾಮಕ ರಾಮಚಂದ್ರಜಂ ।
> ಜಡಮತಿ ಕಬ್ಬಿ ಶೇಷಗಿರಿಯೆಂಬನೀ ಕೃತಿಗ್ಯೆದು ಮಾಡಿದಂ ॥
> ಬಡವರ ವಿದ್ಯೆಕಾಗಿ ತನುವಿಂ ಮನದಿಂ ಧನದಿಂದೆ ಸಾಹಸ ।
> ಬಡುತಿಹ ಧೀರ ಚನ್ನಬಸವೇಶ್ವರ ದಿವ್ಯರ ಪಾದಭೂಷಣಂ ॥೧೧॥"[೧೦]

ಎಂದು ಕೊಂಡಾಡಿರುವುದನ್ನು ನೋಡಿದರೆ ಚೆನ್ನಬಸಪ್ಪನವರ ಬಗೆಗೆ ಇವರಿಗಿದ್ದ ಗೌರವವನ್ನು ಯಾರೂ ಸುಲಭವಾಗಿ ಗುರುತಿಸಬಹುದಾಗಿದೆ.

## ರೊದ್ದ ಶ್ರೀನಿವಾಸರಾಯರು
(೧೮೫೦-೧೯೨೯)

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಪೆನುಗೊಂಡೆಯ ಸಮೀಪದ ರೊದ್ದಮ್ ಎಂಬ ಗ್ರಾಮದಲ್ಲಿ ರೊದ್ದರ ಪೂರ್ವಜರು ವಾಸವಾಗಿದ್ದರು. ದರೋಡೆ, ಕೊಲೆ ಪ್ರಕರಣಗಳಲ್ಲಿ ಸಿಕ್ಕುಹಾಕಿಕೊಂಡ ಈ ಕುಟುಂಬ ನಂತರ ಧಾರವಾಡಕ್ಕೆ ಬಂದು ನೆಲೆಯೂರಿತು. ಬಾಲ್ಯದಲ್ಲಿ ಬಡತನ ಇವರನ್ನು ಬೆಂಬಿಡದೇ ಕಾಡುತ್ತಿತ್ತು. ಶ್ರೀನಿವಾಸರಾಯರು ಪ್ರವರ್ಧಮಾನಕ್ಕೆ ಬರುವ ಹೊತ್ತಿಗೆ (೧೫-೧೬ ವರ್ಷದವರಿದ್ದಾಗ) ತಂದೆ ಕೊನೇರ ರಾಯರನ್ನು ಕಳೆದುಕೊಂಡರು. ಆಗಿನ್ನೂ ರಾಯರ ಮೆಟ್ರಿಕ್ಯೂಲೇಶನ್ ಕೂಡಾ ಮುಗಿದಿರಲಿಲ್ಲ. ಮನೆತನದ ಭಾರವನ್ನು ಹೊತ್ತು ನಿಭಾಯಿಸುವುದು ಅನಿವಾರ್ಯವಾಯಿತು. ಇದರಿಂದಾಗಿ ಅವರು ಮದಿಹಾಳದಲ್ಲಿಯೇ ಒಂದು ಸಣ್ಣ ಗಾವಠಿ ಶಾಲೆಯನ್ನು ಶುರು ಮಾಡಿ ೮ ಹುಡುಗರಿಗೆ ಪಾಠ ಹೇಳಲು ಆರಂಭಿಸಿದರು. ಬಳಿಕ ಹುಬ್ಬಳ್ಳಿಯಲ್ಲಿದ್ದ ಬಾಸೆಲ್‌ಮಿಷನ್ ಶಾಲೆಯಲ್ಲಿ ನೌಕರೀ ಹಿಡಿದರು. ಶಾಲೆಯ ಪಾದ್ರಿಯಾಗಿದ್ದ ಜೆ.ಮ್ಯಾಕ್ ಅವರು ರೊದ್ದರ ದಕ್ಷತೆಯನ್ನು ಮೆಚ್ಚಿಕೊಂಡು ಹೀಗೆ ಒಂದು ಪ್ರಶಸ್ತಿ ಪತ್ರವನ್ನು ನೀಡಿದ್ದುಂಟು. "ಧಾರವಾಡದ (ಮಿ) ಶ್ರೀ ಕೋ.ರೊದ್ದ ಇವರು ಹುಬ್ಬಳ್ಳಿಯ ಜರ್ಮನ್ ಮಿಶನ್ ಆಂಗ್ಲೋ ವ್ಹರ್ನಾಕ್ಯುಲರ್ ಶಾಲೆಯಲ್ಲಿ ಕೆಲಸ ಮಾಡಿದರು. ಅವರು ವಾಚನ, ಬರಹ, ಗ್ರಂಥದ ಮೇಲಿನ ವ್ಯಾಕರಣ, ಭಾಷಾಂತರ ಮೊದಲಾದ ವಿಷಯಗಳನ್ನು ಕಲಿಸುತ್ತಿದ್ದರು. ಈ ಕೆಲಸವನ್ನು ಅವರು ದಕ್ಷತೆಯಿಂದಲೂ ಬುದ್ಧಿವಂತಿಕೆಯಿಂದಲೂ ಮಾಡುತ್ತಿದ್ದರು. ತಾರೀಖು ೧೦.೧೧.೧೮೬೨."[೧೧]

ಬೋಧನಾಕಾರ್ಯದಲ್ಲಿ ಅಪಾರ ಆಸಕ್ತಿ ಹೊಂದಿದ್ದ ರೊದ್ದರು ತರುವಾಯ ಹೆಚ್ಚಿನ ವ್ಯಾಸಂಗಕ್ಕಾಗಿ ಆಗ ಬೆಳಗಾವಿಯಲ್ಲಿದ್ದ ಟ್ರೇನಿಂಗ್ ಕಾಲೇಜಿಗೆ ಹೋದರು. ಸುದೈವದಿಂದ ಅಲ್ಲಿ ಪ್ರಿನ್ಸಿಪಾಲರಾಗಿದ್ದ ಭುಜಂಗರಾಯರು ಇವರಿಗೆ ಸರಿಯಾದ ಮಾರ್ಗದರ್ಶನ ಮಾಡಿ ಪುಣೆಗೆ ಹೋಗಿ ಕಲಿಯುವಂತೆ ಸಹಾಯ, ಸಹಕಾರನ್ನಿತ್ತು ಬೆಂಬಲಿಸಿದರು. ಈ ಉಪಕಾರವನ್ನು ರೊದ್ದರ

---

೧೦. ಮುದವೀಡು ಕೃಷ್ಣರಾಯರು : ಚುರಮರೀ ಕೃತ ಶಾಕುಂತಲ ನಾಟಕವು - ಗ್ರಂಥಕರ್ತರ ಮುನ್ನುಡಿ - (ನಾಲ್ಕನೇ ಆವೃತ್ತಿ).

೧೧. ದೇಶಪಾಂಡೆ ಹನಮಂತರಾವ : ದಿವಾನ ಬಹದ್ದೂರ ಶ್ರೀನಿವಾಸರ ಚರಿತ್ರ. ಪುಟ.೨೧.

ತಾಯಿ ಕೃತಜ್ಞತೆಯಿಂದ "ನಾವು ಉಣ್ಣುವ ಅನ್ನ ರಸೆಲ್ಲ ಸಾಹೇಬರದು, ಹಚ್ಚುವ ದೀಪ ಭುಜಂಗರಾಯರದು" ಎಂದು ಯಾವಾಗಲೂ ನೆನೆಯುತ್ತಿದ್ದರು[೧೨] ಎಂಬ ಸಂಗತಿಯನ್ನು ಭುಜಂಗರಾಯರ ಚರಿತ್ರೆಯಲ್ಲಿ ನೋಡುತ್ತೇವೆ.

ಪುಣೆಯಲ್ಲಿ ಮೆಟ್ರಿಕ್ಯುಲೇಶನ್ ಮುಗಿಸಿದ ಆಮೇಲೆ ಸ್ವಲ್ಪದಿನ ಮುಲ್ಕಿಖಾತೆಯಲ್ಲಿ ಕೆಲಸಮಾಡಿ, ನಂತರ ಧಾರವಾಡದಲ್ಲಿ ಶ್ರೀ ವೆಂಕಟರಂಗೋ ಕಟ್ಟಿ, ಬಾಬಾಜಿ ಲಕ್ಷ್ಮಣ ಸಾವಂತ ಇವರೊಂದಿಗೆ ಮಿತ್ರಸಮಾಜ ವ್ಯಾಪಾರೋತ್ತೇಜಕ ಕಂಪನಿ, ಕ್ಷಾಮನಿವಾರಕ ಸಂಘ (೧೮೭೬-೭೭)ಗಳನ್ನು ಕಟ್ಟಿ ಸಾರ್ವಜನಿಕವಾಗಿಯೂ ತಮ್ಮನ್ನು ತೊಡಗಿಸಿಕೊಂಡರು. ೧೮೭೭ ರ ಡಿಸೆಂಬರದಲ್ಲಿ ಡೆಪ್ಯೂಟಿ ಚೆನ್ನಬಸಪ್ಪನವರು ಅನಾರೋಗ್ಯದಿಂದಾಗಿ ರಜೆಯ ಮೇಲೆ ಉಳಿದಾಗ ರೊದ್ದರು ಆಕ್ಟಿಂಗ್ ಡೆಪ್ಯೂಟಿ ಇನ್‌ಸ್ಪೆಕ್ಟರರಾಗಿ ಕಾರ್ಯನಿರ್ವಹಿಸಿದರು. ಆಮೇಲೆ ೧೮೮೮ ರಲ್ಲಿ ಟ್ರೇನಿಂಗ ಕಾಲೇಜ ಪ್ರಿನ್ಸಿಪಾಲರಾಗಿ ೧೮೯೮ ರ ವರೆಗೆ ೧೦ ವರ್ಷಕಾಲ ಸೇವೆ ಸಲ್ಲಿಸಿದರು. ಕೊನೆಯಲ್ಲಿ ದಕ್ಷಿಣ ಭಾಗದ ಆಕ್ಟಿಂಗ್ ಎಜ್ಯುಕೇಶನಲ್ ಇನ್‌ಸ್ಪೆಕ್ಟರರಾಗಿ ಕೆಲಸ ಮಾಡುತ್ತ, ೧೯೦೮ ರಲ್ಲಿ ನಿವೃತ್ತರಾದರು.

ಇವರು ಕೆಲವು ಇಂಗ್ಲೀಷ, ಕನ್ನಡ ಕವಿತೆಗಳನ್ನು ಬರೆದಿದ್ದರೆಂದೂ ಮಾರ್ಸಡನ್ ಇತಿಹಾಸ ಪುಸ್ತಕಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದರೆಂದೂ ತಿಳಿದುಬರುತ್ತದೆ.

## ರಸೆಲ್ಲರು

ಉತ್ತರ ಕರ್ನಾಟಕದ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಬದುಕನ್ನು ಪುನರುಜ್ಜೀವನಗೊಳಿಸುವ ಮಹೋನ್ನತ ಕೆಲಸ ಮಾಡಿದವರಲ್ಲಿ ವಿಲಿಯಂ ಅಲೆನ್ ರಸೆಲ್ಲರು ಮುಖ್ಯರು. ಕನ್ನಡದ ಅಪಾರ ಪ್ರೇಮಿಗಳೂ, ಅಧಿಕಾರಿಗಳೂ ಆಗಿದ್ದ ಇವರ ಪ್ರಭಾವ, ನೆರವು ಚೆನ್ನಬಸಪ್ಪನವರು ಮುನ್ನಡೆಯುವಂತೆ ಮಾಡಿದ್ದರೂ, ಸ್ಥಳೀಯ ಪ್ರಭಾವಶಾಲಿ ವ್ಯಕ್ತಿ, ಕನ್ನಡ ಪ್ರೇಮಿಯಾದ ಇವರ ನೆರವೂ ರಸೆಲ್ಲರಿಗೆ ಸಂದಿರುವುದು ಸಹಜ. ರಸೆಲ್ಲರು ಹುಟ್ಟಿದ್ದು ೧೮೩೦ ರಲ್ಲಿ, ಡೆಪ್ಯೂಟಿಯವರಿಗಿಂತ ಕೇವಲ ಮೂರು ವರ್ಷ ಮೊದಲು. ಆಕ್ಸಫರ್ಡ ವಿಶ್ವವಿದ್ಯಾಲಯದ ಸ್ನಾತಕೋತ್ತರ ಪದವಿ ಪಡೆದ ನಂತರ (೧೮೬೦) ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿ ನೇಮಕ ಹೊಂದಿದರು. ತರುವಾಯ ೧೮೬೨ ರಲ್ಲಿ ಮಧ್ಯಭಾಗದ ಎಜ್ಯುಕೇಶನಲ್ ಇನ್‌ಸ್ಪೆಕ್ಟರ ಎಂದು ಕೆಲವು ದಿನ ಕೆಲಸ ಮಾಡಿ, ಆಮೇಲೆ ಉತ್ತರ ಭಾಗಕ್ಕೆ ವರ್ಗಾವಣೆ ಹೊಂದಿದರು. ಸುಮಾರು ೧೮೬೫ ರಲ್ಲಿ ದಕ್ಷಿಣ ಭಾಗದ ಎಜ್ಯುಕೇಶನಲ್ ಇನ್‌ಸ್ಪೆಕ್ಟರ ಆಗಿ ನೇಮಕ ಹೊಂದಿದರು. ಇದು ಕರ್ನಾಟಕದ ಪಾಲಿಗೆ ಶುಕ್ರದೆಸೆಯಾಯಿತು. ಇಲ್ಲಿ ಅವರು ಪ್ರಾಯಶಃ ೨೦ ವರ್ಷ ಕೆಲಸ ಮಾಡಿ ಈ ನಾಡಿನ ಪೂರ್ವಗ್ರಹ ಬಿಡಿಸಿದರು. ಸಮಕಾಲೀನ ಸಂದರ್ಭದಲ್ಲಿ ಅವರ ಬಗ್ಗೆ ವ್ಯಕ್ತವಾದ ಅಭಿಪ್ರಾಯವೊಂದು ಹೀಗಿದೆ :

"ರಸೆಲ್ ದೊರೆಗಳವರು ಬಂದಂದಿನಿಂದ ಮಹಾರಾಷ್ಟ್ರ, ಗುಜರಾತ ಪ್ರಾಂತಗಳಲ್ಲಿಯೂ ದೇಶಭಾಷೆಗಳು ಹ್ಯಾಗೆ ಅಭಿವೃದ್ಧಿಯಾಗಿರುತ್ತವೆಯೋ, ಅದೇ ಮೇರೆಗೆ ಈ ಭಾಗದಲ್ಲಿ ಕರ್ನಾಟಕ ಭಾಷೆಯಾಗಬೇಕೆಂಬುದಾಗಿ ಅವರು ಬಹು ಯತ್ನಪಡುತ್ತಿದ್ದಾರೆ. ಈ ಉದ್ದೇಶವು

---

೧೨. ದೇಶಪಾಂಡೆ ಹನಮಂತರಾವ : ದಿವಾನ ಬಹದ್ದೂರ ಶ್ರೀನಿವಾಸರ ಚರಿತ್ರೆ. ಪುಟ.೨೧.

ಕೈಗೂಡಬೇಕಾಗಿ ಅವರು ಮಾಡಿದ ಉಪಾಯಗಳು ಏನೆಂದರೆ - ರಾ.ಸಾ. ಮಹಾದೇವ, ವಾಸುದೇವ ಬರ್ವೆ ಇವರು ಘನತೆಯುಳ್ಳವರಾಗಿ ಈ ಜಿಲ್ಲೆಯ ಡೆಪ್ಯೂಟಿ ಕಲೆಕ್ಟರರ ಕೆಲಸಕ್ಕೆ ನೇಮಿಸಲ್ಪಟ್ಟದ್ದರಿಂದ, ಅವರ ಸ್ಥಳದಲ್ಲಿ ಈ ಜಿಲ್ಲೆಯ ಡೆಪ್ಯೂಟಿ ಇನ್‌ಸ್ಪೆಕ್ಟರರ ಕೆಲಸಕ್ಕೆ ಚೆನ್ನಬಸಪ್ಪನವರ ಯೋಜನೆಯಾಯಿತು. ಇವರು ಮೂಲತಃ ಧಾರವಾಡದವರಾಗಿ ಜಾತಿಯಿಂದ ಲಿಂಗವಂತರಾದದ್ದರಿಂದ ಇವರು ಕನ್ನಡ ಭಾಷೆಯ ಪೂರ್ಣ ಅಭಿಮಾನಿಗಳಾಗಿರುತ್ತಾರೆಂದು ನಾವು ಹೇಳುವ ಪ್ರಯೋಜನವಿಲ್ಲ. ಇವರ ಕೈಕೆಳಗೆ ಕಾನಾಡಾ ಜಿಲ್ಲೆಯ ಕೆಲಸಕ್ಕೆ ನೇಮಿಸಿದ ಅಸಿಸ್ಟಂಟರಾದರೂ ಕನ್ನಡ ಭಾಷೆಯನ್ನು ಚೆನ್ನಾಗಿಬಲ್ಲವರು. ಧಾರವಾಡ, ಕಲಾದಗೀ ಜಿಲ್ಲೆಗಳ ಡೆಪ್ಯೂಟಿ ಇನ್‌ಸ್ಪೆಕ್ಟರರು ಮಹಾರಾಷ್ಟ್ರದೇಶದವರಾದಾಗ್ಯೂ ತಮ್ಮ ಶಾಲೆಗಳನ್ನು ಪರೀಕ್ಷಿಸತಕ್ಕಷ್ಟು ಕನ್ನಡ ಭಾಷೆಯನ್ನು ಕಲಿತುಕೊಳ್ಳುವ ಬಗ್ಗೆ ರಸೆಲ್ ದೊರೆಗಳು ಇವರಿಗೆ ಮಾಡಿದ ಹುಕುಮಿನ ಪ್ರಕಾರ ಅವರು ಕಲಿತುಕೊಂಡಿದ್ದಾರೆ. ಇದಲ್ಲದೆ ಕನ್ನಡ ಭಾಷೆಯ ಪರೀಕ್ಷೆ ಕೊಡಬೇಕೆಂಬುದಾಗಿ ಯೆಲ್ಲಾ ಶಾಲೆಗಳ ಮಾಸ್ತರರಿಗೆ ಹುಕುಂ ಫರ್ಮಾಯಿಸಿ ಯಷ್ಟೋ ಜನರನ್ನು ಪರೀಕ್ಷಿಸಿದರು. ಶಾಲೆಗಳ ವೇಳಾಪತ್ರಿಕೆಗಳನ್ನು ತಿದ್ದಿ ಕನ್ನಡ ಭಾಷೆಯ ಅಭ್ಯಾಸಕ್ಕೆ ತಕ್ಕಷ್ಟು ವೇಳೆ ಕೊಟ್ಟರು. ನಾರ್ಮಲ್ ಶಾಲೆಯ ಹೆಡ್‌ಮಾಸ್ತರ ಕೆಲಸಕ್ಕೂ, ಫಸ್ಟ ಅಸಿಸ್ಟಾಂಟ ಕೆಲಸಕ್ಕೂ ಇಂಗ್ಲೀಷ ಭಾಷೆಯನ್ನೂ, ಕನ್ನಡ ಭಾಷೆಯನ್ನೂ ಚೆನ್ನಾಗಿಬಲ್ಲವರನ್ನು ನೇಮಿಸಿದರು. ಕನ್ನಡ ಕಾವ್ಯ ಗ್ರಂಥಗಳನ್ನು ಚೆನ್ನಾಗಿ ಬಲ್ಲವರೂ, ಬಹುದಿವಸ ಶಿಕ್ಷಣದ ಕೆಲಸದಲ್ಲಿ ಪರಿಶ್ರಮ ಮಾಡಿದವರೂ ಆದ ಇನ್ನೊಬ್ಬ ಶಿಕ್ಷಕರನ್ನು ಅದೇ ಶಾಲೆಯಲ್ಲಿ ನೇಮಿಸಿದರು. ಈ ವರುಷ ಮಹಾರಾಷ್ಟ್ರ ೫ನೇ ಪುಸ್ತಕವು ಕನ್ನಡಿನಲ್ಲಿ ಭಾಷಾಂತರಿಸಲ್ಪಟ್ಟಿತು. ೬ನೇ ಪುಸ್ತಕವು ಪೂರ್ವದಲ್ಲಿಯೇ ಭಾಷಾಂತರವಾಗಿರುತ್ತದೆ. ಅದನ್ನು ಛಾಪಿಸುವ ತರ್ದೂದು ನಡೆದಿದೆ".[೧೩] ಹೀಗೆ ಕನ್ನಡಕ್ಕೆ ಅಂದು ಅಗತ್ಯವಿದ್ದ ಎಲ್ಲ ರೀತಿಯ ಶಕ್ತಿಯನ್ನೂ ತುಂಬಲು ಅವಿರತವಾಗಿ ಶ್ರಮಿಸಿದವರು, ರಸೆಲ್ಲರು.

ನಿಷ್ಠೆಯಿಂದ ಕನ್ನಡದ ಪುನರುತ್ಥಾನಕ್ಕಾಗಿ ದುಡಿಯುತ್ತಿದ್ದ ರಸೆಲ್ಲರಿಗೆ ಚೆನ್ನಬಸಪ್ಪನವರು ದೊರಕಿದ್ದು ಇನ್ನೂ ಹೆಚ್ಚಿನ ಸಾಧನೆಗೆ ರಾಜಮಾರ್ಗ ಕಲ್ಪಿಸಿದಂತಾಯಿತು. ಇವರಿಬ್ಬರ ಸಮಾನ ಅಭಿರುಚಿಯಿಂದಾಗಿ ಎಲ್ಲ ಕಡೆಗೂ ಕನ್ನಡ ಶಾಲೆಗಳು ಆರಂಭವಾದವು. ಕನ್ನಡದ ಬಗ್ಗೆ ಅವಜ್ಞೆ ತೋರುತ್ತ ಬಂದಿದ್ದ ಶಿಕ್ಷಣಾಧಿಕಾರಿಗಳು ಶಾಲಾ ತಪಾಸಣೆಯ ಕೆಲಸಕ್ಕೆ ಬರುವಷ್ಟಾದರೂ ಕನ್ನಡವನ್ನು ಕಲಿಯಬೇಕಾಯಿತು. ಪರಿಪತ್ರಗಳು ಸಹ ಕನ್ನಡದಲ್ಲಿ ಹೊರಡತೊಡಗಿದವು. ಪಠ್ಯಪುಸ್ತಕಗಳು ಕನ್ನಡದಲ್ಲಿ ನಿರ್ಮಾಣವಾಗತೊಡಗಿದವು.

ಈ ದೃಷ್ಟಿಯಿಂದ "ವೀರಶೈವರಷ್ಟೇ ಏಕೆ? ಸಮಸ್ತ ಕನ್ನಡಿಗರೂ ಆಗ ಕನ್ನಡವನ್ನುಳಿಸಿದ ಪುಣ್ಯ ಪುರುಷರಾದ ರಸೆಲ್ ಹಾಗೂ ಡೆಪ್ಯೂಟಿ ಚೆನ್ನಬಸಪ್ಪನವರಿಗೆ ವಿಶೇಷ ಋಣಿಯಾಗಿದ್ದಾರೆ. ಇಂದು ಬೆಳಗುತ್ತಿರುವುದು ಅಂದು ಹಚ್ಚಿದ ಕನ್ನಡದ ನಂದಾದೀಪ! ಆದುದರಿಂದ ಆ ಪುಣ್ಯ ಪುರುಷರನ್ನು ಸ್ಮರಿಸುವುದು ನಮ್ಮೆಲ್ಲರ (ಕನ್ನಡಿಗರ) ಪ್ರಥಮ ಕರ್ತವ್ಯವು" ಎಂಬ ಡಾ. ಆರ್.ಸಿ.ಹಿರೇಮಠ ಅವರ ಮಾತುಗಳು ಗಮನಾರ್ಹವಾಗಿವೆ.

ಅವರ ಆಡಳಿತ ಎಷ್ಟೊಂದು ಕಟ್ಟುನಿಟ್ಟಿನದಾಗಿತ್ತೆಂಬುದನ್ನು ತಿಳಿಯಲು ಒಂದೆರಡು ಪರಿಪತ್ರಗಳ ಮಾದರಿಗಳನ್ನೂ ನೋಡಬಹುದು:

---

೧೩. ಮಠಪತ್ರಿಕೆ : ೧೮೬೭.

"ಕಸಬಾ ನಿಡಗುಂದಿ ತಾಲೂಕ ಮನಗೋಳಿಯಲ್ಲಿಯ ಹೆಡ್‌ಮಾಸ್ತರನಾದ ಅನಂತ ಗಣೇಶ ಇವನು ಹಾಜರಿ ರಜಿಸ್ಟರ ಮುಂತಾದ್ದರ ಬರಿಯೋಣ ಯಷ್ಟೋ ತಿಂಗಳ ಮಟ್ಟಿಗೆ ಬಿಟ್ಟೇಬಿಟ್ಟು ಫೀ ಹಣಾ ಖಜಾನಿಗೆ ಭರಣಾ ಮಾಡದೆ ತನ್ನ ಸ್ವಕಾರ್ಯಕ್ಕೆ ಬಳಸಿಕೊಂಡನು. ಹಾಂಗು ಇತ್ತಕಡೆಗೆ ಬರತಕ್ಕಂಥಾ ಕಾಗದ ಪತ್ರಗಳು ಏನೇನೂ ಕಳುಹಿಸಲಿಲ್ಲ. ಆದಕಾರಣಾ ಮೇಹರಬಾನ್ ಇ. ಇನ್‌ಸ್ಪೆಕ್ಟರ ಸಾಹೇಬ ಬಾಹದ್ದೂರ ದಕ್ಷಿಣಭಾಗ ಇವರು ಸದರಿ ಇಸಮಿಗೆ ಶಾಲಾ ಖಾತೆಯೊಳಗಿಂದ ಬರತರ್ಫ ಮಾಡಿದರು. ಈ ವೃತ್ತಾಂತವನ್ನು ಸರ್ವರಿಗೆ ತಿಳಿಯೋದಕ್ಕೋಸ್ಕರ ಪ್ರಸಿದ್ಧ ಮಾಡಲ್ಪಟ್ಟಿದೆ". ಇದರಿಂದ ನೌಕರಿಯಲ್ಲಿ ಕೆಲಸದ ಬಗ್ಗೆ ಅಲಕ್ಷಮಾಡುವುದೂ, ಶಾಲಾ ಫೀ ಮುಂತಾದವುಗಳನ್ನು ದುರುಪಯೋಗ ಪಡಿಸಿಕೊಳ್ಳುವುದೂ ಎಂಥ ಶಿಕ್ಷಾರ್ಹವಾದ ಅಪರಾಧವಾಗಿತ್ತೆಂಬುದು ಸ್ಪಷ್ಟವಾಗುತ್ತದೆ.

ಇನ್ನೊಂದು ಸಂದರ್ಭದಲ್ಲಿ ಒಬ್ಬ ಶಿಕ್ಷಕ ಉತ್ತಮ ಕೆಲಸ ಮಾಡಿದನೆಂದು ಅವನಿಗೆ ಬಡತಿ ನೀಡಲಾಗಿತ್ತು. ಆದರೆ ಮುಂದೆ ಕೆಲವೇ ದಿನಗಳಲ್ಲಿ ಅವನು ಎಸಗಿದ ಅಪರಾಧವನ್ನನುಲಕ್ಷಿಸಿ ಅವನಿಗೆ ಹಿಂಬಡತಿ ಮಾಡಿದ ವಿಷಯವನ್ನು ದಿನಾಂಕ ೬.೨.೧೮೬೭ ರ ಶಾಲಾಪತ್ರಕದ ಪರಿಪತ್ರ ಹೀಗೆ ವಿವರಿಸುತ್ತದೆ : "ಅಜಂ ಹಣಮಂತ ಬಾಳಾಜಿ ತಾಲಿಕೋಟಕರಯಿವರು ನರೇಗಲ್ಲ ಸಾಲಿಯ ಕೆಲಸಾ ವಳ್ಳೆ ರೀತಿಯಿಂದಾ ನಡಸಿದ್ದರಿಂದಾ ಅವರನ್ನು ಕಳೆದ ಅಗಸ್ಟ ತಿಂಗಳಲ್ಲಿ ಧುಂಡಶಿಗೆ ಬಡತಿ ಸಂಬಳ ಮ್ಯಾಲೆ ನೇಮಿಸಿತ್ತು. ತಾ. ೮ನೇ ಫೆಬ್ರುವರಿ ದಿವಸ ಮೆಹರ್ಬಾನ ಯಿ||ಯಿ|| ದೊರೆಗಳು ಹಾಂಗು ನಾವು ಶಾಲೆ ಪರೀಕ್ಷೆ ಧುಂಡಶಿಗೆ ಹೊದಾಗ್ಯೆ ಸದರಿ ಮಾಸ್ತರರು ತಮ್ಮ ಕೆಲಸದ ಕಡೆ ಯೇನೇನೂ ಲಕ್ಷವನ್ನು ಕೊಟ್ಟಿಲ್ಲಾ ಹಿಂಗ ತೋರಿಬಂತು, ವಟ್ಟ ಸರಕ್ಯೂಲರದಂತೆ ಸಾಲಿಯೊಳಗೆ ವೇಳಾ ಪತ್ರಿಕೆ ಹಚ್ಚಿ ಅದರಂತೆ ಅಭ್ಯಾಸವನ್ನು ನಡ್ಸಲಿಲ್ಲ ಮತ್ತು ನಾಲ್ಕು ದಿವಸದ ಹಜರಿ ತುಂಬಿದ್ದಿಲ್ಲಾ ಯಿದರ ದಶಿಂದಾ ೮ ರೂಪಾಯಿ ದಂಡಾ ಮಾಡಿರತದೆ. ಇದರ ಕಡಿಗೆ ನಮ್ಮ ಶಾಲೆದೊಳಗಿನ ಯಾವತ್ತು ಮಾಸ್ತರರು ಚನ್ನಾಗಿ ಲಕ್ಷಕೊಟ್ಟರು ಹಿಂಗ ಅಪೇಕ್ಷಿಸುತ್ತೇನೆ".

ಹೀಗೆ ಮುಂಬಯಿ ಕರ್ನಾಟಕದಲ್ಲಿ ಗತಪ್ರಾಣವಾಗಿದ್ದ ಕನ್ನಡದ ಸಸಿಗೆ ಡೆಪ್ಯೂಟಿಯವರನ್ನು ಮೊದಲುಮಾಡಿ ಅವರ ಸಮಕಾಲೀನರನೇಕರು ತಮ್ಮ ಜೀವ ದ್ರವ್ಯವನ್ನೆಲ್ಲ ಧಾರೆಯೆರದು ಅದಕ್ಕೆ ತಗಲಿದ್ದ ಅನ್ಯಭಾಷಾ ಬಂದಳಿಕೆಗಳನ್ನು ಕತ್ತರಿಸಿ ಹೊಸ ಉಸಿರು, ಚೈತನ್ಯಗಳನ್ನು ತುಂಬಿ ಆರೈಕೆ ಮಾಡದೆ ಉಪೇಕ್ಷಿಸಿದ್ದರೆ ಇಂದು ಕನ್ನಡದ, ಕನ್ನಡಿಗರ ಸ್ಥಿತಿ ಹೇಳಹೆಸರಿಲ್ಲದಂತಾಗುತ್ತಿತ್ತು. ಚೆನ್ನಬಸಪ್ಪನವರ ರಕ್ಷಾ ಕವಚದಲ್ಲಿ ಮರಳಿ ರಸದುಂಬಿದ ಕನ್ನಡದ ಸಸಿ ಕ್ರಮೇಣ ತನ್ನ ಹೊಸಬೇರು ಚಿಗುರುಗಳನ್ನು ಮೂಡಿಸಿಕೊಂಡು ಪಲ್ಲವಿಸಿ ನಿಂತಾಗ ಅದರ ಅಂದಚೆಂದಕ್ಕೆ ಮಾರುಹೋದವರು ಇನ್ನೂ ಹಲವರು. ಒಂದು ನಂದಾದೀವಿಗೆಯಿಂದ ನೂರಾರು ಜ್ಯೋತಿಗಳು ಹೊತ್ತಿಕೊಂಡು ಬೆಳಕನ್ನೀಯುವಂತೆ ಟ್ರೇನಿಂಗ್ ಕಾಲೇಜಿನ ಶಿಕ್ಷಕರ ಬಳಗ ಚೆನ್ನಬಸಪ್ಪನವರ ಸ್ಫೂರ್ತಿಯ ಚಿಲುಮೆಗಳ ಹಾಗೆ ಅದೇ ತನ್ಮಯತೆಯಿಂದ ಕೆಲಸ ಮಾಡಿದರು. ಮುಂದೆ ಈ ಶಿಕ್ಷಕ ವರ್ಗದವರ ಪರಿಶ್ರಮ, ದಕ್ಷತೆ, ಪ್ರೇರಣೆಗಳ ಫಲವಾಗಿ ಅವರ ಸ್ನೇಹಿತರ ಶಿಷ್ಯರ, ಪ್ರಶಿಷ್ಯರ ಒಂದು ಅಭೂತಪೂರ್ವ 'ಕನ್ನಡ ಪಡೆ'ಯೊಂದು ಸಜ್ಜಾಗಿ ಅನ್ಯಭಾಷಾ ದಬ್ಬಾಳಿಕೆಯ ಹುಟ್ಟಡಗಿಸಲು ಸಮರೋತ್ಸಾಹದಿಂದ ಕಾರ್ಯಪ್ರವೃತ್ತರಾದರು. ಆ ನಿಟ್ಟಿನಲ್ಲಿ ಅವರು ಮಾಡಿದ ಕಾರ್ಯವನ್ನು ಇಂದಿನ ಕನ್ನಡಿಗರು ಕೃತಜ್ಞತೆಯಿಂದ ನೆನೆಯಬೇಕಾಗಿದೆ. ವೆಂಕಟ ರಂಗೋ ಕಟ್ಟಿ, ಗಂಗಾಧರ ಮಡಿವಾಳೇಶ್ವರ ತುರಮರಿಯವರಂಥ ಸಮರ್ಥ ಭಾಷಾಂತರಕಾರರನ್ನು ಕೂಡಿಕೊಂಡು ಸ್ವತಃ ಚೆನ್ನಬಸಪ್ಪನವರು

ಪಠ್ಯ ಹಾಗೂ ಪಠ್ಯೇತರ ಪುಸ್ತಕಗಳನ್ನು ಪ್ರಕಟಿಸಲು ನಡೆಸಿದ ಹೋರಾಟ ಶೈಕ್ಷಣಿಕ ಇತಿಹಾಸದಲ್ಲಿ ಮರೆಯಲಾರದಂತಹದು. ಇದರ ಪರಿಣಾಮವಾಗಿ ಶಾಲಾಪತ್ರಕ (೧೮೮೦)ದಲ್ಲಿ ಪ್ರಕಟಗೊಂಡ ಪುಸ್ತಕಗಳ ಯಾದಿಯನ್ನು ನೋಡುವಾಗ ಆಶ್ಚರ್ಯವೆನ್ನಿಸುವಷ್ಟು ಬೆಳವಣಿಗೆ ಕಾಣುತ್ತದೆ : ಆ ಯಾದಿಯ ಅನುಕ್ರಮ ಸಂಖ್ಯೆ ೨೧ ರ ಮುಂದೆ "ಅಂಕಗಣಿತ ಚೆನ್ನಬಸಪ್ಪನವರು ಮಾಡಿದ್ದು" ಎಂದು ನಮೂದಾಗಿರುವುದು ಹೆಚ್ಚಿನ ಸಂತೋಷಕ್ಕೆ ಕಾರಣವಾಗಿದೆ. ಆ ಯಾದಿಯ ಪ್ರತಿಯನ್ನೇ ಇಲ್ಲಿ ನೋಡಬಹುದು.[೧೪]

ಧಾರವಾಡ ಡಿಸ್ಟ್ರಿಕ್ಟ ಬುಕ್ಕಡೀಪೋದಲ್ಲಿ ದೊರಿಯುವ ಬುಕ್ಕಗಳ ತಪಸೀಲು ಕೆಳಗೆ ಬರದಪ್ರಕಾರ ಕನ್ನಡ ಪುಸ್ತಕಗಳ ಹೆಸರಗಳು.

| | | ದರ | | |
|---|---|---|---|---|
| | ಡಿಪಾರ್ಟಮೇಂಟಲ ಪುಸ್ತಕಗಳು | ರು. | ಆ. | ಪೈ. |
| | | | | |
| ೧ | ಕವಿತಾ ಮೊದಲನೇ ಪುಸ್ತಕವು, ಹೊಸದಾಗಿ ಸುಧಾರಿಸಿದ ಆವೃತ್ತಿ | . | ೨ | ೦ |
| ೨ | " ಯರಡನೇ ಪುಸ್ತಕವು | . | ೩ | ೬ |
| ೩ | ಓದುವ ಮೊದಲನೇ ಪುಸ್ತಕವು ಹೊಸದಾಗಿ ಸುಧಾರಿಸಿದ್ದು | . | ೧ | ೬ |
| ೪ | " ಯರಡನೇ ಪುಸ್ತಕವು ಹೊಸದಾಗಿ ಸುಧಾರಿಸಿದ್ದು | . | ೨ | ೦ |
| ೫ | " ಮೂರನೇ ಪುಸ್ತಕವು ಹೊ. ಸು. | . | ೫ | ೬ |
| ೬ | " ನಾಲ್ಕನೇ ಪುಸ್ತಕವು ಹೊ. ಸು. | . | ೮ | ೬ |
| ೭ | " ಐಯಿದನೇ ಪುಸ್ತಕವು | . | ೧೪ | ೦ |
| ೮ | " ಆರನೇ ಪುಸ್ತಕವು | ೧ | ೮ | ೦ |
| ೯ | " ಮೊದಲನೇ ಪುಸ್ತಕದ ೨ನೇ ಭಾಗವು | . | ೧ | ೩ |
| ೧೦ | ಸಂಸ್ಕೃತ ಮೊದಲನೇ ಪುಸ್ತಕ ಹೊಸದಾಗಿ ಸುಧಾರಿಸಿದ್ದು | . | ೧೨ | ೬ |
| ೧೧ | ಸಂಸ್ಕೃತ ಯರಡನೇ ಪುಸ್ತಕ | . | ೧೨ | ೦ |
| ೧೨ | ಶಬ್ದವ್ಯುತ್ಪತ್ತಿ ಹೊಸದಾಗಿ ಸುಧಾರಿಸಿದ್ದು | . | ೭ | ೬ |
| ೧೩ | ಲಘು ವ್ಯಾಕರಣವು | . | ೧ | ೯ |
| ೧೪ | ಶಾಲಾ ವ್ಯಾಕರಣವು | . | ೬ | ೦ |
| ೧೫ | ಭೂಗೋಲ ಭಾಗ ೧ ಮುಂಬಯಿ ಇಲಾಖೆ ವರ್ಣನೆ | . | ೨ | ೦ |
| ೧೬ | " ಭಾಗ ೨ನೇದ್ದು ಹಿಂದುಸ್ಥಾನದ ವರ್ಣನೆ | . | ೨ | ೬ |
| ೧೭ | " ಭಾಗ ಮೂರನೇದ್ದು ಸಮಗ್ರ ಭೂಮಿಯ ವರ್ಣನೆಯು | . | ೪ | ೦ |
| ೧೮ | " ಮಹಾರಾಷ್ಟ್ರ ದೇಶದವರ್ಣನೆಯು | . | ೪ | ೦ |
| ೧೯ | ಹಿಂದೂದೇಶದ ಚರಿತ್ರವು | ೧ | ೨ | ೦ |

೧೪. ಶಾಲಾಪತ್ರಕ: ಪುಸ್ತಕ ೧೫, ಸಂಚಿಕೆ ೧೧: ೧೮೮೦, ಪುಟ. ೨೬೧-೨೬೪.

| | | | | |
|---|---|---|---|---|
| ೨೦ | ಬಾಯಿ ಲೆಕ್ಕಗಳು | . | ೦ | ೯ |
| ೨೧ | ಅಂಕಗಣೀತ ಚೆನ್ನಬಸಪ್ಪನವರು ಮಾಡಿದ್ದು | . | ೧೪ | ೦ |
| ೨೨ | ಶಬ್ದ ಮಂಜರೀ ಕೋಶವು | ೪ | ೦ | ೦ |
| ೨೩ | ರಾಜಶೇಖರ ಭಾಗ ೧ನೇದ್ದು ಸಟೀಕ | ೧ | ೦ | ೦ |
| ೨೪ | ಭೂಗೋಲಶಾಸ್ತ್ರ ಸಾರವು | . | ೩ | ೦ |
| ೨೫ | ಧಾರವಾಡ ಜಿಲ್ಲೇದ ನಕಾಶವು | ೪ | ೦ | ೦ |
| ೨೬ | ಇಸಾಪ ನೀತೀ ಕಥೆ | . | ೭ | ೦ |
| ೨೭ | ಸ್ಕೂಲ ಪಂಚತಂತ್ರವು | . | ೬ | ೦ |
| ೨೮ | ಕಥಾಸಂಗ್ರಹ ೧ – ೩ | ೧ | ೮ | ೦ |
| ೨೯ | " ಭಾಗ ೪ – ೬ | ೧ | ೮ | ೦ |
| ೩೦ | ತಿದ್ದುವಿಕೆಯು, ಶಿಕ್ಷಣವು | . | ೧೦ | ೦ |
| ೩೧ | ಕನ್ನಡ ಇಂಗ್ಲೀಷ ಡಿಕ್ಸನರಿ | ೪ | ೦ | ೦ |
| ೩೨ | ಇಂಗ್ಲೀಷ ಕನ್ನಡ ಡಿಕ್ಸನರಿ ಗ್ಯಾರೇಟಕೃತ | ೪ | ೦ | ೦ |
| ೩೩ | ಹಡಸನ್ ಸಗ್ರಾಮರ | ೨ | ೧೦ | ೦ |
| | ಮರಾಠಿ ಪುಸ್ತಕಗಳು | | | |
| ೧ | ಬಾಲಬೋಧ ಮೊದಲನೇ ಪುಸ್ತಕವು | . | ೧ | ೬ |
| ೨ | " ಯರಡನೇ ಪುಸ್ತಕವು | . | ೨ | ೬ |
| ೩ | " ಮೂರನೇ ಪುಸ್ತಕವು | . | ೫ | ೬ |
| ೪ | " ನಾಲ್ಕನೇ ಪುಸ್ತಕವು | . | ೧೦ | ೦ |
| ೫ | " ಅಯಿದನೇ ಪುಸ್ತಕವು | . | ೧೪ | ೦ |
| ೬ | " ಆರನೇ ಪುಸ್ತಕವು | ೧ | ೦ | ೦ |
| ೭ | ಮೋಡೀ (ಆರೆ) ಮೊದಲನೇ ಪು. ಹೊ. ಸು. | . | ೨ | ೩ |
| ೮ | " ಯರಡನೇ ಪುಸ್ತಕ ಹೊ. ಸುಧಾರಿಸಿದ್ದು | . | ೩ | ೯ |
| ೯ | " ಸದರ | . | ೭ | ೦ |
| ೧೦ | " ಸದರ | . | ೨ | ೬ |
| ೧೧ | ಲಘು ವ್ಯಾಕರಣವು | . | ೧ | ೩ |
| ೧೨ | ಭೂಗೋಲ ಭಾಗ ೧ನೇದ್ದು | . | ೧ | ೬ |
| ೧೩ | " ಭಾಗ ೨ನೇದ್ದು | . | ೩ | ೬ |
| ೧೪ | " ಭಾಗ ೩ನೇದ್ದು | . | ೩ | ೬ |
| ೧೫ | ಉಜಳಣಿ ಪುಸ್ತಕವು | . | ೧ | ೬ |
| ೧೬ | ಅಂಕಗಣೀತವು | . | ೧೦ | ೦ |

| | | | | |
|---|---|---|---|---|
| ೧೭ | ಕರಕರೆಕೃತ ಯುಕ್ಲೀಡ ಸಿದ್ಧಾಂತವು | . | ೧೦ | ೦ |
| | ಇಂಗ್ಲೀಷ ಪುಸ್ತಕಗಳು | | | |
| ೧ | ಹಾವರ್ಡಸ ಪ್ರಾಯಮರ | . | ೦ | ೯ |
| ೨ | " ಸೇಕಂಡ ಬುಕ್ಕ | . | ೧ | ೬ |
| ೩ | " ಥರ್ಡ ಬುಕ್ಕ | . | ೮ | ೦ |
| ೪ | ರುಡಿಮೆಂಟರಿ ಗ್ರಾಮರ | . | ೩ | ೦ |
| ೫ | ಭಾಷಾಂತರ ಪಾಠಮಾಲಾ ಭಾಗ ೧ನೇದ್ದು | . | ೪ | ೦ |
| ೬ | " ಭಾಗ ೨ನೇದ್ದು | . | ೫ | ೦ |
| ೭ | " ಭಾಗ ೩ನೇದ್ದು | . | ೧೨ | ೦ |
| | ಉಡದು ಪುಸ್ತಕಗಳು | | | |
| ೧ | ಪಹಿಲಾ ಕಿತಾಬ | ೦ | ೩ | ೦ |
| ೨ | ದುಸರಾ ಕಿತಾಬ | ೦ | ೭ | ೦ |
| ೩ | ತಿಸರಾ ಕಿತಾಬ | ೦ | ೧೨ | ೦ |
| ೪ | ವ್ಯಾಕರಣ | ೦ | ೧ | ೯ |
| ೫ | ಅಂಕಗಣೀತ | ೧ | ೬ | ೦ |
| | ಸಂಸ್ಕೃತ ಪುಸ್ತಕಗಳು | | | |
| ೧ | ಅಮರಕೋಶ ತ್ರಿಕಾಂಡ ಸಟೀಕ | ೧ | ೧೨ | ೦ |
| ೨ | ರೂಪಾವಳಿ | ೦ | ೨ | ೦ |
| ೩ | ಧಾತೂರೂಪಾವಳಿ | ೦ | ೨ | ೦ |

ಇವುಗಳಲ್ಲಿ ಸುಧಾರಿಸಿದ ಆವೃತ್ತಿ ಯೆಂದು ಬರಿದು ಪುಸ್ತಕಗಳೆಲ್ಲ ವೊಳಗಡೆಯಲ್ಲಿ ಛಾಪಿಸಿಬಂದಿರುತ್ತವೆ. ಆದ್ದರಿಂದ ಸರಕಾರೀ ಶಾಲೆಯೊಳಗಿನ ವಿದ್ಯಾರ್ಥಿಗಳಲ್ಲಿ ಬೇಕಾಗಿರುವವರು ರೋಖ ಹಣಾ ಕಳುಹಿಸಿ ತೆಗಿದುಕೊಳ್ಳುವವರಿಗೆ ಪುಸ್ತಕಗಳು ದೊರಿಯುತ್ತವೆ. ಪುಸ್ತಕಗಳ ಶಿಲುಕು ಇಲ್ಲದರ ದಸಿಯಿಂದಾ ಧಾರವಾಡ ಜಿಲ್ಹೆಯಲ್ಲಿ ಭೊಬ್ಬಾಟ ಆಗಿತ್ತು. ಈಗ ಪುಸ್ತಕಗಳು ಬಂದದರಿಂದ ಯಲ್ಲರಿಗೂ ತಿಳಿಯೊದಶಿಯಿಂದಾ ಈ ಜಾಹೀರನಾಮೆ ಕೊಟ್ಟಿರುತ್ತದೆ ತಿಳಿಯೋದು. ತಾ. ೩೦ ನವಂಬರ ೧೮೮೦ ಇ.

ವಿಶ್ವನಾಥ ಮೋರೇಶ್ವರ ಬಾಪಟ ಡಿ. ಬುಕ್ಕ ಡಿಪೋಕೀಪರ

ಈ ದೃಷ್ಟಿಯಿಂದ ೧೯ನೇ ಶತಮಾನವು ಕನ್ನಡಿಗರ ಪಾಲಿಗೆ ಚಾರಿತ್ರಿಕ ಪುಣ್ಯವಿಶೇಷವೆಂದೇ ಹೇಳಬೇಕು. ಈ ಕಾಲಘಟ್ಟದಲ್ಲಿ ಕನ್ನಡದ ಹಿತಚಿಂತನೆಗೆ ಮನಮುಟ್ಟಿ ದುಡಿದವರ ಆಂತರ್ಯದ ನಿಬಿಡ ದಾಖಲೆಗಳೆಂದರೆ ಅವರ ಕಾರ್ಯಗಳು. ಆ ಬಗೆಗಿನ ಒಂದು ಸಂಕ್ಷಿಪ್ತ ಅವಲೋಕನ ಇಲ್ಲಿದೆ:

ಸ್ವಭಾಷಾ ಪ್ರಜ್ಞೆಯನ್ನಿಟ್ಟುಕೊಂಡು ಸುಮಾರು ೨೭ ವರ್ಷ ಧಾರವಾಡದ ಟ್ರೇನಿಂಗ್ ಕಾಲೇಜಿನ ಶಿಕ್ಷಕರಾಗಿ ಕೆಲಸ ಮಾಡುತ್ತಲೇ 'ವಾಗ್ಭೂಷಣ'ದಲ್ಲಿ ಲೇಖನಗಳನ್ನೂ ಪ್ರಕಟಿಸುತ್ತ 'ವಿದ್ಯಾಶಾಲಾಗುರುಮಿತ್ರ', 'ವಿನೋದ ತರಂಗಿಣಿ', 'ಮಕರ ಸಂಕ್ರಮಣ' ಮುಂತಾದ ಗ್ರಂಥಗಳನ್ನು ರಚಿಸಿದವರು, ಅಣ್ಣಾರಾಯ ಸವದಿಯವರು. ಇವರ 'ವಿದ್ಯಾಶಾಲಾಗುರುಮಿತ್ರ' ಎಂಬ ಕೃತಿಯನ್ನು ಗೋವಿಂದ ದಾಮೋದರ ದೀಕ್ಷಿತ ಎಂಬವರು ಮರಾಠಿ ಭಾಷೆಗೆ ಪರಿವರ್ತಿಸಿದ್ದಾರೆ. ಪ್ರಸ್ತುತ ಕೃತಿಯನ್ನು ನ್ಯಾಯಮೂರ್ತಿಗಳಾಗಿದ್ದ ಮಹಾದೇವ ಗೋವಿಂದ ರಾನಡೆಯವರು ತುಂಬಾ ಮೆಚ್ಚಿಕೊಂಡಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯದ ಪುನರುತ್ಥಾನ ಚರಿತ್ರೆಯಲ್ಲಿ ಶಾಶ್ವತವಾಗಿ ನಿಲ್ಲಬಲ್ಲ ಹೆಸರುಗಳಲ್ಲಿ ಧೋಂಡೋ ನರಸಿಂಹ ಮುಳಬಾಗಲ (೧೮೪೪-೧೯೦೮) ಅವರದೂ ಒಂದು. ಕನ್ನಡ ಸಂಸ್ಕೃತಗಳೆರಡರಲ್ಲಿಯೂ ಪಾಂಡಿತ್ಯ ಹೊಂದಿದ್ದ ಇವರು ಕನ್ನಡದ ಗದ್ಯಪದ್ಯಗಳೆರಡರಲ್ಲಿಯೂ ಚೆನ್ನಾಗಿ ಕೃಷಿಮಾಡಿದರು. ಸಂಸ್ಕೃತ ಸಾಹಿತ್ಯದಲ್ಲಿಯ ಉತ್ಕೃಷ್ಟ ಕೃತಿಗಳನ್ನು ಕನ್ನಡಕ್ಕೆ ತರುವ ಮೂಲಕ ಮತ್ತು ಕನ್ನಡನುಡಿಗಟ್ಟು, ಕನ್ನಡಕೈಪಿಡಿ, ಛಂದಸ್ಸಾರ, ಪದ್ಯಾರ್ಥಸಾರದಂತಹ ಸ್ವತಂತ್ರ ಕನ್ನಡ ಕೃತಿಗಳನ್ನು ರಚಿಸುವ ಮೂಲಕ ಕನ್ನಡ ಜನತೆಯ ಗಮನವನ್ನು ಸೆಳೆದರು. "ಈ ಭಾಗದ ಕನ್ನಡ ಅಭ್ಯಾಸಿಗಳಿಗೆ ಮುಳಬಾಗಲರ 'ನುಡಿಗಟ್ಟು' ಎಷ್ಟೋ ವರ್ಷ ಭಗವದ್ಗೀತೆಯಾಗಿದ್ದಿತು" ಎಂಬ ರಾ.ಯ.ಧಾರವಾಡಕರರ ಮಾತು ಸೂಕ್ತ ವಿಮರ್ಶೆಯಾಗಿದೆ. ಸರಿಸುಮಾರು ಇದೇ ಹೊತ್ತಿಗೆ ಗುರುರಾವ ವಿಠ್ಠಲರಾವ ಮೋಹರೆ (೧೮೫೦) ಮತ್ತು ಪಾಂಡುರಂಗ ವೆಂಕಟೇಶ, ಚಿಂತಾಮಣಿ ಪೇಟಕರ (೧೮೫೧-೧೯೦೯) ಇವರ ಕನ್ನಡ ಸೇವೆಯನ್ನೂ ಸ್ಮರಿಸಬೇಕಾಗಿದೆ. ಅಲ್ಲದೆ ಬೀಳಗಿ ರುದ್ರಪ್ಪನವರು ಮತ್ತು ವಿರೂಪಾಕ್ಷಪ್ಪ ಹೂಲಿ ಇವರೂ ಚನ್ನಬಸಪ್ಪನವರಿಗೆ ಕನ್ನಡ ಕಟ್ಟುವ ಕೆಲಸದಲ್ಲಿ ಬಲಗೈಯಂತಿದ್ದರು ಎಂದು ಹೇಳುತ್ತಾರೆ.

ಹೀಗೆಯೇ ತಮ್ಮ ಸೃಜನಾತ್ಮಕ ಚೈತನ್ಯವನ್ನು ಕನ್ನಡದ ಕೆಲಸಕ್ಕಾಗಿ ಧಾರೆಯೆರದ ಬಳಗದ ಬಳ್ಳಿ ಇನ್ನೂ ದಾಂಗುಡಿ ಇಡುತ್ತಲೇ ಸಾಗಿರುವುದನ್ನು ನೋಡಿದಾಗ ಅದು ಹಬ್ಬಿದ ವಿಸ್ತಾರವನ್ನೆಲ್ಲ ಪರಿಚಯಿಸುವುದು ಇಲ್ಲಿ ಸಾಧ್ಯವೇ ಇಲ್ಲ ಎಂಬ ಅರಿವು ಈಗಾಗಲೇ ಆಗಿರಲು ಸಾಕು. ಅದೇನೇ ಇದ್ದರೂ ಇದೆಲ್ಲದರ ಹಿಂದಿನ ಚೈತನ್ಯ ಶ್ರೀ ಡೆಪ್ಯೂಟಿ ಚೆನ್ನಬಸಪ್ಪನವರು ನೀಡಿದ ನೆರವು, ಹಾಗೂ ತೆರೆದುಕೊಟ್ಟ ಹಾದಿಯೆಂಬುದನ್ನು ಮತ್ತೆ ನೆನಪಿಸುವ ಅಗತ್ಯ ತೋರುವುದಿಲ್ಲ.



## ಚೆನ್ನಬಸಪ್ಪನವರನ್ನು ಕುರಿತ ಸಾಹಿತ್ಯ

ಒಂದು ಸಾಮಾನ್ಯ ಕುಟುಂಬದಲ್ಲಿ ಹುಟ್ಟಿಬೆಳೆದ ಚೆನ್ನಬಸಪ್ಪನವರು ತಮ್ಮ ಪರಿಶ್ರಮ, ಪ್ರತಿಭೆ, ಸಾಮರ್ಥ್ಯಗಳ ಬಲದಿಂದಲೇ ಮೇಲೆ ಬಂದವರು. ಮತ್ತು ಅಂದು ತುಂಬಾ ಅಸಹಾಯಕ ಸ್ಥಿತಿಯಲ್ಲಿದ್ದ ಕನ್ನಡನಾಡಿನ ಸಾಂಸ್ಕೃತಿಕ ಚರಿತ್ರೆಗೆ ಸೂಕ್ತಸಂದರ್ಭದಲ್ಲಿ ಹಾಗೂ ಅಷ್ಟೇ ಸಮರ್ಪಕವಾಗಿ ಸತ್ವ: ಉತ್ಸಾಹಗಳನ್ನು ತುಂಬಿ ಆ ಪರಂಪರೆಯ ಸಮರ್ಥ ಹರಿಕಾರರಾದವರು. ತಮ್ಮ ಪ್ರಬುದ್ಧ ಬದುಕಿನತುಂಬ ಸಾಂಸ್ಕೃತಿಕ ಹೋರಾಟವನ್ನೇ ತುಂಬಿಕೊಂಡಿದ್ದ ಇವರು ದೈವಾಧೀನರಾಗಿಯೇ ಶತಮಾನ ಉರುಳಿಹೋಯಿತು. ಇಂಥ ಚಾರಿತ್ರಿಕ ಪುರುಷನೊಬ್ಬನ ಬದುಕನ್ನು ಇನ್ನೂ ಹೆಚ್ಚು ಸಾದ್ಯಂತವಾಗಿ, ಸಮಗ್ರವಾಗಿ ಅರಿತುಕೊಳ್ಳಲು ಹಂಬಲಿಸುವುದು ಪ್ರತಿಯೊಬ್ಬ ಪ್ರಜ್ಞಾವಂತನ ಕರ್ತವ್ಯ ಅಷ್ಟೇ ಅಲ್ಲ, ಕನ್ನಡಿಗರ ಪಾಲಿಗಂತೂ ಅದೊಂದು ಸ್ಫೂರ್ತಿದಾಯಕ ಸ್ಮರಣೆ. ಇಂಥ ವ್ಯಕ್ತಿಗಳನ್ನು ಅಭ್ಯಸಿಸಲು ಅನುಕೂಲವಾಗುವ ಸಾಧನ ಸಂಪತ್ತಿಗಳಲ್ಲಿ ಅವರನ್ನು ಕುರಿತು ರಚಿತವಾದ ಸಾಹಿತ್ಯವೂ ಒಂದು. ಹಾಗಿದ್ದರೆ ಚೆನ್ನಬಸಪ್ಪನವರನ್ನು ಕುರಿತು ರಚಿತವಾದ ಸಾಹಿತ್ಯ ಎಷ್ಟು? ಎಂಬ ಕುತೂಹಲ ಆರಂಭದಲ್ಲಿಯೇ ನಮ್ಮನ್ನು ಕಾಡುತ್ತದೆ. ಆದರೆ ಈ ಕುತೂಹಲದ ಒಡಲಲ್ಲಿಯೇ ಒಂದು ದೊಡ್ಡ ನಿರಾಸೆಯೂ ಹುಟ್ಟಿಕೊಳ್ಳುತ್ತದೆ. ಯಾಕೆಂದರೆ, ಇವತ್ತಿನ ಪರಿಸರದಲ್ಲಿ ನಿಂತು, ನಿರೀಕ್ಷಿಸುವ ಪ್ರಮಾಣದಲ್ಲಿ ಡೆಪ್ಯೂಟಿಯವರನ್ನು ಕುರಿತ ಸಾಹಿತ್ಯ ಲಭ್ಯವಾಗುವುದಿಲ್ಲ. ಈ ಅಭಿಪ್ರಾಯಕ್ಕೆ ಬರುತ್ತಿದ್ದಂತೆಯೇ ಯಾಕೆ ಹೀಗೆ ? ಎಂಬ ಪ್ರಶ್ನೆ ನಮ್ಮೆದುರು ನಿಲ್ಲುತ್ತದೆ. ಇದಕ್ಕೆ ಕೆಲವು ಕಾರಣಗಳನ್ನು ತರ್ಕಿಸಬಹುದೇ ವಿನಃ ಆ ಕಾರಣಗಳ ಸತ್ಯಾಸತ್ಯತೆಯು ಮಾತ್ರ ಜಿಜ್ಞಾಸೆಯ ವಸ್ತುವಾಗುವುದರಲ್ಲಿ ಸಂದೇಹವೇ ಇಲ್ಲ.

ಮುಖ್ಯವಾಗಿ ಚೆನ್ನಬಸಪ್ಪನವರ ಪರಿಪತ್ರ ಸಾಹಿತ್ಯ, ಬೀಜಗಣಿತ-ಅಂಕಗಣಿತ ಮತ್ತು ಅನುಪಲಬ್ಧ ಅನುವಾದ ಕೃತಿಗಳನ್ನು ಬಿಟ್ಟರೆ ಸ್ವತಂತ್ರ ಕೃತಿಗಳನ್ನು ರಚಿಸಿ ಸಾಹಿತಿಗಳೆಂದು ಕೆಲಸ ಮಾಡಲಿಲ್ಲ. ಆಗ ಮುದ್ರಣ ಯಂತ್ರಗಳೂ ಸಾಕಷ್ಟಿರಲಿಲ್ಲ. ಇನ್ನೂ ಒಂದು ವಿಶೇಷವೆಂದರೆ, ಅವರ ಸಮಕಾಲೀನ ಸಂದರ್ಭದಲ್ಲಿ ಜೀವನಚರಿತ್ರೆ ಸಾಹಿತ್ಯವನ್ನು ಬರಯುವ, ಬರೆಯಿಸಿಕೊಳ್ಳುವ ಪರಿಪಾಠವೇ ಇದ್ದಿರಲಿಲ್ಲ. ಈ ಎಲ್ಲ ಕಾರಣಗಳಿಂದಾಗಿ ಚೆನ್ನಬಸಪ್ಪನವರನ್ನು ಕುರಿತು ನಮ್ಮ ಅಪೇಕ್ಷಿತ ಮಟ್ಟದಲ್ಲಿ ಸಾಹಿತ್ಯ ರಚನೆಯಾಗಲಿಲ್ಲವೆಂಬುದು ಪೂರ್ಣಸತ್ಯವಾಗದಿದ್ದರೂ ಅರ್ಧಸತ್ಯವಂತೂ ಹೌದು. ಹಾಗಿಲ್ಲದೇ ಇದ್ದಿದ್ದರೆ ಅಷ್ಟೊಂದು ಘನತೆ, ಗೌರವಗಳನ್ನು ಸಂಪಾದಿಸಿಕೊಂಡಿದ್ದ ಈ ವ್ಯಕ್ತಿಯ ಬಗ್ಗೆ

ಸಾಹಿತ್ಯರಚನೆಯಾಗದೇ ಇರುತ್ತಿರಲಿಲ್ಲ. ಒಟ್ಟಾರೆ ಆವೊತ್ತಿನ ಸಾಮಾಜಿಕ ಸಂದರ್ಭಕ್ಕೆ ಅನ್ವಯಿಸುವ ಮಾತುಗಳಿವು.

ಚೆನ್ನಬಸಪ್ಪನವರ ಬಗ್ಗೆ ಶಾಲಾಪತ್ರಿಕಗಳಲ್ಲಿ ಆಗೀಗ, ಅಲ್ಲಿಷ್ಟು, ಇಲ್ಲಿಷ್ಟು ವಿಷಯ ವರದಿಯಾದದ್ದು ಕಂಡುಬರುತ್ತದೆ. ಇದು ಕೇವಲ ಆಡಳಿತಾತ್ಮಕ ಆಶಯವುಳ್ಳದ್ದು. 'ಈಗ ಇವರು ಇಂಥಲ್ಲಿ ಸಂಚಾರದಲ್ಲಿ ಇದ್ದಾರೆ', 'ಇವರಿಗೆ ಈಗ ಧಾರವಾಡ ಜಿಲ್ಲೆಗೆ ವರ್ಗವಾಗುವದದೆ', 'ಇವರೀಗ ೨ ತಿಂಗಳು ದೀರ್ಘ ರಜೆಯ ಮೇಲಿದ್ದಾರೆ', 'ಇವರ ಆರೋಗ್ಯ ಈಗ ಸುಧಾರಿಸಿದೆ ಎಂದು ಕೇಳಿದ್ದೇವೆ'..... ಇಂಥ ಕೆಲವು ಸಾಂದರ್ಭಿಕ ಅಂಶಗಳು ಮಾತ್ರ ಕಣ್ಣಿಗೆ ಬೀಳುತ್ತವೆ. ಅಂದರೆ, ಡೆಪ್ಯೂಟಿಯವರನ್ನು ಕುರಿತ ಸಾಹಿತ್ಯವೆಂದರೆ ಅವರ ಮರಣಾನಂತರ ರಚಿತವಾದ ಸಾಹಿತ್ಯವೆಂಬುದು ಸ್ಪಷ್ಟ.

ಇವರನ್ನು ಕುರಿತು ಮೊಟ್ಟಮೊದಲು ಪ್ರಕಟಗೊಂಡ ಸಾಹಿತ್ಯಕೃತಿಯೆಂದರೆ, ಡೆಪ್ಯೂಟಿಯವರು ಮರಣವನ್ನಪ್ಪಿದ ಸಂದರ್ಭದಲ್ಲಿ ಟ್ರೇನಿಂಗ ಕಾಲೇಜಿನ ವಿದ್ಯಾರ್ಥಿಯಾಗಿದ್ದ ಶಿವಾನಂದ ಯಜ್ಞೇಶ್ವರ ವಾಜಪೇಯಿ ಎಂಬವರು ರಚಿಸಿದ್ದ 'ಶೋಕಾರ್ತ ಗೀತ' ಎಂಬ ಒಂದು ಸಣ್ಣ ಕವಿತಾಸಂಗ್ರಹವೇ. 'ಇದರಲ್ಲಿ ಸರಸವಾದ ೪೦ ಪದ್ಯಗಳಿದ್ದು 'ಅಂಣನವರ ಮರಣದ ಶೋಕವನ್ನು ಬಹು ಮನೋವೇಧಕವಾಗಿ' ಪ್ರಕಟಿಸಿದ ಬಗ್ಗೆ ಮತ್ತು ಇದರ ಕ್ರಯ ೨ ಆಣೆ ಎಂಬ ಬಗ್ಗೆ ೧೮೮೮ ರ ಶಾಲಾಪತ್ರಿಕದ ಜಾನೇವರಿ ಸಂಚಿಕೆಯಿಂದ ತಿಳಿದು ಬರುತ್ತದೆ. ಆದರೆ ಈ ಕೃತಿ ಈಗ ಉಪಲಬ್ಧವಿಲ್ಲದಿರುವುದು ವ್ಯಸನದ ಸಂಗತಿಯಾಗಿದೆ. ಅನಂತರ ಇಲ್ಲಿಯ ವರೆಗೆ ಚೆನ್ನಬಸಪ್ಪನವರನ್ನು ಕುರಿತು ಒಟ್ಟು ಆರು ಕೃತಿಗಳು ಪ್ರಕಟವಾಗಿದ್ದು, ಅವು ಕಾಲಾನುಕ್ರಮವಾಗಿ ಹೀಗಿವೆ :

೧. ಕೈ.ವಾ.ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು (ಫ.ಗು.ಹಳಕಟ್ಟಿ ೧೯೧೪), ೨. ಡೆಪ್ಯೂಟಿ ಚೆನ್ನಬಸಪ್ಪ (ಪ್ರೊ. ಸ.ಸ. ಮಾಳವಾಡ), ೩. ಡೆಪ್ಯೂಟಿ ಚೆನ್ನಬಸಪ್ಪ (ವೆಂಕಟೇಶ ಸಾಂಗಲಿ), ೪. ಡೆಪ್ಯೂಟಿ ಚೆನ್ನಬಸಪ್ಪನವರು (ಮ.ಗು.ಹಂದ್ರಾಳ), ೫. ಕನ್ನಡದ ದೀಪ (ಸಂ. ಮ.ಗು. ಹಂದ್ರಾಳ ಹಾಗೂ ಶಿವಶಂಕರ ಹಿರೇಮಠ), ೬. ಕನ್ನಡದ ಶಕಪುರುಷ ಡೆಪ್ಯೂಟಿ ಚೆನ್ನಬಸಪ್ಪನವರು (ಆರ್.ಎನ್.ಕರಡಿ). ಈ ಕೃತಿಗಳನ್ನು ಹೊರತುಪಡಿಸಿ ಕೆಲವು ಬಿಡಿಲೇಖನಗಳನ್ನು ಕವನಗಳೂ ಪ್ರಕಟವಾಗಿವೆ.

ಈ ಆರೂ ಪ್ರಕಟಿತ ಕೃತಿಗಳ ಸ್ವರೂಪವನ್ನು ಲಕ್ಷದಲ್ಲಿಟ್ಟುಕೊಂಡು ಅವುಗಳನ್ನು ಸ್ಥೂಲವಾಗಿ ಚರಿತ್ರೆ, ಮಕ್ಕಳ ಸಾಹಿತ್ಯ, ಸಂಪಾದನೆ ಮತ್ತು ಇತರ ಎಂದು ನಾಲ್ಕು ಪ್ರಭೇಧಗಳಲ್ಲಿ ವರ್ಗೀಕರಿಸಿಕೊಳ್ಳಬಹುದಾಗಿದೆ.

ಪ್ರಸ್ತುತ ಕೃತಿಗಳಲ್ಲೆಲ್ಲಾ ಫ.ಗು.ಹಳಕಟ್ಟಿಯವರ 'ಕೈ.ವಾ.ಚನ್ನಬಸಪ್ಪ, ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು' ಎಂಬ ಕೃತಿಯೇ ತುಂಬ ಹಳೆಯದು. ಚೆನ್ನಬಸಪ್ಪನವರ ಮಗ ಬಸವಲಿಂಗಪ್ಪ ಧಾರವಾಡ, ಶಿವಾನಂದ ಯಜ್ಞೇಶ್ವರ ವಾಜಪೇ[೧] (ಸ್ಕೂಲ ಮಾಸ್ತರ ರೋಣ), ಸಿದ್ಧರಾಮಯ್ಯ ಹನ್ನೆರಡುಮಠ (ಪೆನ್ಶೆನ್ದ ಮಾಸ್ತರ ಹುಬ್ಬಳ್ಳಿ). ಈ ಮೂವರು ಶಿಕ್ಷಕರಿಂದ ಮಾಹಿತಿ ಸಂಗ್ರಹಿಸಿ ಹಳಕಟ್ಟಿಯವರು ಈ ಕೃತಿ ರಚಿಸಿದರೆಂದು ಇದರ ಮೊದಲನೇ ಆವೃತ್ತಿಯ

೫೧ ಶಿವಾನಂದ ಯಜ್ಞೇಶ್ವರ ವಾಜಪೇ ಎಂಬ ಹೆಸರು ಬೇರೆಡೆ (ಶಾಲಾಪತ್ರಿಕ) ಶಿವಾಜಿ ಯಜ್ಞೇಶ್ವರ ವಾಜಪೇಯಿ ಎಂದು ಇರುವುದು ಗಮನಾರ್ಹ

ಪ್ರಸ್ತಾವನೆಯಿಂದ ತಿಳಿದುಬರುತ್ತದೆ. ಇಲ್ಲಿಯೇ ಕಂಡುಬರುವ ಇನ್ನೂ ಕೆಲವು ಮಹತ್ವದ ಅಂಶಗಳೆಂದರೆ, ೧೯೧೧ ರಲ್ಲಿಯೇ ವಿಜಾಪೂರದಲ್ಲಿ ಸೇರಿದ್ದ ವೀರಶೈವ ಮಹಾಸಭೆಯು, ಆಗಿಹೋದ ವೀರಶೈವ ಮಹಾಪುರುಷರ ಚರಿತ್ರೆಗಳನ್ನು ಬರೆಯಿಸಲು ಉದ್ದೇಶಿಸಿದಂತೆ ಅಲ್ಲಿಯ ಜಿಲ್ಲಾ ಸಭೆಯವರು ಚೆನ್ನಬಸಪ್ಪನವರ ಚರಿತ್ರೆಯನ್ನು ಬರೆಯಿಸಲು ನಿರ್ಣಯಿಸಿ ಆ ಕಾರ್ಯಕ್ಕಾಗಿ ಉತ್ತೇಜನ ನೀಡಲು ೨೦೦ ರೂಪಾಯಿಗಳ ವರೆಗೆ ಬಹುಮಾನವನ್ನು ಘೋಷಿಸಿದಾಗ ಆ ಅಪೇಕ್ಷೆಯನ್ನು ಈಡೇರಿಸಲು ರೂಪುಗೊಂಡ ಕೃತಿ ಇದು.[೨]

ಫ.ಗು.ಹಳಕಟ್ಟಿಯವರು ತಮ್ಮನ್ನು ಈ ಕೃತಿಯ ಸಂಪಾದಕರೆಂದು ಕರೆದು ಕೊಂಡಿದ್ದಾರೆ. ಅದು ಅವರ ಸೌಜನ್ಯದ ಪ್ರತೀಕ. ಆದರೆ ನಿಜವಾಗಿ ಹೇಳಬೇಕೆಂದರೆ, ಇದು ಸಂಪಾದನಾ ಕೃತಿ ಅಲ್ಲವೇ ಅಲ್ಲ. ಈ ಹಿಂದೆ ಹೆಸರಿಸಿದ ಮೂವರು ಶಿಕ್ಷಕರಿಂದ ವಿಷಯವನ್ನು ಸಂಗ್ರಹಿಸಿ, ಅದನ್ನು ಸಮರ್ಪಕವಾಗಿ ಪರಿಷ್ಕರಿಸಿ ಸ್ವತಃ ಅವರೇ ಬರೆದ ಈ ಕೃತಿಯನ್ನು ಯಾವ ನಿಟ್ಟಿನಿಂದ ನೋಡಿದಾಗಲೂ ಸಂಪಾದನಾ ಕೃತಿಯೆಂದು ಕರೆಯಲು ಮನಸ್ಸು ಒಪ್ಪುವುದಿಲ್ಲ. ಟಿಪ್ಪಣಿಗಳನ್ನು ಆಧರಿಸಿ ಬರೆದ ಸ್ವತಂತ್ರ ಕೃತಿ ಇದು. ಫ.ಗು. ಹಳಕಟ್ಟಿಯವರು ಕಟ್ಟಿಕೊಟ್ಟ ಒಂದು ಚಾರಿತ್ರಿಕ ದಾಖಲೆ ಇದಾಗಿರುವುದರಿಂದ ಇದನ್ನು 'ಚರಿತ್ರೆ' ಎಂದು ಕರೆದಿರುವುದು ತುಂಬ ಔಚಿತ್ಯಪೂರ್ಣವೆನಿಸುತ್ತದೆ. ಈ ಕೃತಿರಚನೆಗೆ ಪ್ರೋತ್ಸಾಹದಾಯಕವಾದ ಬಹುಮಾನ ನೀಡಿ, ಬಿಜಾಪೂರ ಜಿಲ್ಲಾ ವೀರಶೈವ ಸಭೆಯು ಈ ಕಾರ್ಯಕ್ಕೆ ಅಣಿಯಾಗದೆ ಹೋಗಿದ್ದರೆ ಕನ್ನಡನಾಡು ಒಂದು ಚಾರಿತ್ರಿಕ ಸತ್ಯದಿಂದ ವಂಚಿತವಾಗುತ್ತಿತ್ತು. ಇಂಥ ಅರ್ಥಪೂರ್ಣವಾದ ಕಾರ್ಯವೊಂದಕ್ಕೆ ಕಾರಣೀಭೂತವಾದ ಪ್ರಸ್ತುತ ವೀರಶೈವ ಮಹಾಸಭೆಯು ಅತ್ಯಂತ ಅಭಿನಂದನಾರ್ಹವಾದ ಕಾರ್ಯ ಮಾಡಿದಂತಾಗಿದೆ. ೧೯೧೪ ರಲ್ಲಿ ಮೊದಲನೆ ಆವೃತ್ತಿ ಕೃತಿರೂಪತಾಳಿ ಪ್ರಕಟಗೊಂಡ ಸಂಗತಿ ಎರಡನೇ ಆವೃತ್ತಿಯಿಂದ ಗೊತ್ತಾಗುತ್ತದೆ. ಅಂದರೆ ಮೊದಲ ಆವೃತ್ತಿ ಬೆಳಕುಕಂಡ ೧೬ ವರ್ಷಗಳ ತರುವಾಯ ೧೯೩೦ ರಲ್ಲಿ ಎರಡನೆಯ ಆವೃತ್ತಿ ಶಿವಾನುಭವ ಗ್ರಂಥಮಾಲೆಯ ೨೧ನೇ ಕುಸುಮವಾಗಿ ಪ್ರಕಾಶನ ಕಂಡಿದೆ. ಬೆಲೆ ೪ ಆಣೆ, ಒಟ್ಟು ಪುಟಗಳು ೪೨. ಈ ·ವರೆಗೆ ಪ್ರಕಟಗೊಂಡಿರುವ ಚೆನ್ನಬಸಪ್ಪನವರನ್ನು ಕುರಿತ ಸಾಹಿತ್ಯ ಕೃತಿಗಳಲ್ಲೆಲ್ಲಾ ಇದು ಪ್ರಾಚೀನ ಎಂಬುದು ಸ್ಪಷ್ಟ. ತನ್ನ ತರುವಾಯದ ಕೃತಿಗಳಿಗೆಲ್ಲ ಇದೇ ಆಧಾರಗ್ರಂಥ. ಒಂದು ವೇಳೆ ಅಂದು ವೀರಶೈವ ಮಹಾಸಭೆ ಹಾಗೂ ಫ.ಗು.ಹಳಕಟ್ಟಿಯವರು ಈ ಕಾರ್ಯವನ್ನು ಅನುಷ್ಠಾನಕ್ಕೆ ತಾರದೇ ಹೋಗಿದ್ದರೆ, ಚೆನ್ನಬಸಪ್ಪನವರು ಲಕ್ಷಾಂತರ ಜನಕ್ಕೆ ಇನ್ನೂ ಅಜ್ಞಾತರಾಗಿಯೇ ಇರುತ್ತಿದ್ದರೇನೋ !

ಚೆನ್ನಬಸಪ್ಪನವರು ವಿಧಿವಶರಾಗಿ ಮೂವತ್ಮೂರು ವರ್ಷಗಳ ತರುವಾಯ ಅವರ ಒಟ್ಟು ಬದುಕನ್ನು ಪುನರ್ರಚಿಸಲು ಲೇಖಕರು ಪ್ರಯತ್ನಿಸಿದ್ದಾರೆ. ತಮ್ಮ ಕೈಗೆ ಸಿಕ್ಕಷ್ಟು ವಿಷವನ್ನು ಸಮರ್ಪಕವಾಗಿ ವರ್ಗೀಕರಿಸಿಕೊಂಡು ಸರಳವಾದ, ಆಪ್ತವಾದ ಭಾಷೆಯಲ್ಲಿ ನಿರೂಪಿಸುವ ಹಳಕಟ್ಟಿಯವರ ಗದ್ಯಶೈಲಿ ಚರಿತ್ರೆಗೆ ಹೇಳಿ ಮಾಡಿಸಿದಂತಿದೆ. ಯಾವುದೇ ವಿಷಯವನ್ನೂ ಅವರು ಎಲ್ಲಿಯೂ 'ಸಿಕ್ಕು'ಗೊಳಿಸುವುದಿಲ್ಲ. ಸಣ್ಣ ಸಣ್ಣ ವಾಕ್ಯಗಳಲ್ಲಿ ರಭಸ, ರೊಚ್ಚುಗಳಿಲ್ಲದೆ ಚೆನ್ನಬಸಪ್ಪನವರ ಬದುಕನ್ನು ತುಂಬಾ ಸಾವಯವವಾಗಿಯೇ ಚಿತ್ರಿಸಿದ್ದಾರೆ. ಅವರ ಬಾಲ್ಯದಿಂದ ಮೊದಲು ಮಾಡಿ ಅವರ ಧಾರ್ಮಿಕ ಸಾಮಾಜಿಕ ವಿಚಾರಗಳನ್ನೊಳಗೊಂಡು ಒಟ್ಟು ಎಂಟು ಪ್ರಕರಣಗಳಲ್ಲಿ ಚೆನ್ನಬಸಪ್ಪನವರ ಬದುಕನ್ನು ಘಟ್ಟಗಳಾಗಿ ವಿಂಗಡಿಸಿಕೊಟ್ಟಿರುವುದರಿಂದ

---

೨. ಹಳಕಟ್ಟಿ ಫ.ಗು : ಕೈ. ವಾ. ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು
– ಪ್ರಸ್ತಾವನೆ, (೧೯೩೦ ೨ನೇ ಆವೃತ್ತಿ)

ವಿಷಯವನ್ನು ಸ್ಪಷ್ಟಪಡಿಸಲು ಹೆಚ್ಚು ಅನುಕೂಲವಾಗಿದೆ. ಈ ಪ್ರಕರಣದ ಕೊನೆಯ ಭಾಗವೇ ದೊಡ್ಡದು. ಚೆನ್ನಬಸಪ್ಪನವರ ವ್ಯಕ್ತಿತ್ವದ ಹಲವು ಒಳನೋಟಗಳು ಇಲ್ಲಿ ವಿಸ್ತರಿಸಿಕೊಂಡಿವೆ. ಅಷ್ಟೇ ಅಲ್ಲ, ಮುಂದಿನ ಎಲ್ಲ ಕೃತಿಗಳೂ ಫ.ಗು.ಹಳಕಟ್ಟಿಯವರ ಈ ಕೃತಿಗೆ ಕಲ್ಪನೆ ಮೀರಿ ಋಣಿಯಾಗಿವೆ. ಚೆನ್ನಬಸಪ್ಪನವರ ಸಾಧನೆಯ ಮೇಲೆ ಬೆಳಕು ಚೆಲ್ಲುವ ಅಂಕಿಸಂಖ್ಯೆಗಳನ್ನೊಳಗೊಂಡ ಎರಡು ರೇಖಾನಕ್ಷೆ (ಟೇಬಲ್)ಗಳು, ವಿಷಯವನ್ನು ಘನೀಕರಿಸುವ ಕಾರ್ಯ ಮಾಡಿವೆ. ಚೆನ್ನಬಸಪ್ಪನವರು ಕನ್ನಡದ ಕೆಲಸಕ್ಕೆ ತೊಡಗುವ ಮೊದಲಿನ ಸ್ಥಿತಿಗತಿ ಧಾರವಾಡ, ಬೆಳಗಾವ ಹಾಗೂ ಬಿಜಾಪೂರ ಜಿಲ್ಲೆಗಳಲ್ಲಿ ಏನಿತ್ತು, ಮತ್ತು ಅನಂತರದಲ್ಲಿ ಅದು ಎಷ್ಟೊಂದು ಮುನ್ನಡೆ ಸಾಧಿಸಿತು ಎಂಬುದನ್ನು ಬಹಳ ಖಚಿತವಾಗಿ ಇಲ್ಲಿ ಉಲ್ಲೇಖಿಸಲಾಗಿದೆ. ಸುಮಾರು ೭೦-೮೦ ವರ್ಷಗಳ ಹಿಂದಿನ ಈ ಕೃತಿಯ ಸಂವಿಧಾನ (ಶಿಲ್ಪ) ಆಕರ್ಷಕವಾಗಿದೆ.

ಹೀಗೆ ಸಾಕಷ್ಟು ಗುಣಾತ್ಮಕವಾದ ಅಂಶಗಳನ್ನೇ ಒಳಗೊಂಡಿರುವ ಈ ಕೃತಿಯ ಅಚಾತುರ್ಯದ ಬಗ್ಗೆಯೂ ಒಂದು ಮಾತನ್ನು ಹೇಳಲೇಬೇಕಾಗಿದೆ. ಅದೇನೆಂದರೆ, ಈ ಕೃತಿಯ ೧ನೇ ಆವೃತ್ತಿಯ ಪ್ರಸ್ತಾವನೆಯಿಂದ ತಿಳಿದು ಬರುವಂತೆ ಫ.ಗು.ಹಳಕಟ್ಟಿಯವರು ಮೂರು ಜನರಿಂದ ಮಾಹಿತಿ ಪಡೆದು ತಮ್ಮ ಕೃತಿಯನ್ನು ರಚಿಸಿದ್ದಾರೆ. ಅವರಲ್ಲಿ ಬಸವಲಿಂಗಪ್ಪ ಚೆನ್ನಬಸಪ್ಪ ಧಾರವಾಡ ಇವರು, ಚೆನ್ನಬಸಪ್ಪನವರ ಮಗನೆಂಬುದು ಬಹಳ ಮುಖ್ಯವಾದ ಸಂಗತಿ. ತಂದೆಯ ಬಗ್ಗೆ ಬಸವಲಿಂಗಪ್ಪನವರಿಂದ ಇನ್ನೂ ಸಾಕಷ್ಟು ವಿಷಯ ಸಂಗ್ರಹಿಸಲು ಹಳಕಟ್ಟಿಯವರು ಮುಖತಃ ಭೆಟ್ಟಿಯಾಗುವ ಮುತುವರ್ಜಿ ವಹಿಸಿದಂತೆ ತೋರುವುದಿಲ್ಲ. ಹಾಗೆ ಮಾಡದೇ ಹೋದುದರಿಂದ ಚೆನ್ನಬಸಪ್ಪನವರ ಬದುಕಿನ ಮೂಲಭೂತವಾದ ಕೆಲವು ವಿವರಗಳು (ಉದಾ: ಚೆನ್ನಬಸಪ್ಪನವರು ಕಲಿತ ಮಠಶಾಲೆ, ಅವರ ಮದುವೆಯಾದದ್ದು ಯಾವಾಗ? ಅಂಚೆಖಾತೆಯ ಯಾವ ಹುದ್ದೆಯಲ್ಲಿ ಅವರು ಕೆಲಸ ಮಾಡಿದರು? ಅವರ ಇಬ್ಬರು ಹೆಂಡತಿಯರ ತವರೂರುಗಳು? ಚೆನ್ನಬಸಪ್ಪನವರನ್ನು ಎಲ್ಲಿ ಸಮಾಧಿ ಮಾಡಲಾಯಿತು? ಇತ್ಯಾದಿ) ಹಾಗೆಯೇ ಉಳಿದು ಹೋದವು. ಈ ವಿವರಗಳಿಗೆ ಈ ವರೆಗೆ ಪರಿಹಾರ ಕಂಡುಕೊಳ್ಳಲು ಸಾಧ್ಯವಾಗುತ್ತಿಲ್ಲ ಎಂಬುದನ್ನು ತಿಳಿದು ಹಳಕಟ್ಟಿಯವರ ಕೃತಿಯ ಹಿನ್ನೆಲೆಯಲ್ಲಿ ವಿಷಾದಿಸಬೇಕಾಗಿದೆ. ಈ ವಿಷಾದಕ್ಕೆ ಇನ್ನೊಂದು ಪ್ರಮುಖ ಕಾರಣವೆಂದರೆ ಹಳಕಟ್ಟಿಯವರು ಚೆನ್ನಬಸಪ್ಪನವರ ಜೀವನದ ವಿವರಗಳನ್ನು ಸಂಗ್ರಹಿಸಿ, ಅವರ ಚರಿತ್ರೆ ಬರೆಯುವಾಗ "ಚೆನ್ನಬಸಪ್ಪನವರು ೧೮೬೭ರಲ್ಲೇ ಬೆಳಗಾವಿ ಜಿಲ್ಲೆಯ ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರರಾದರು" ಎಂದು ಹೇಳಿರುವುದರಿಂದ ತಪ್ಪು ದಾರಿಗೆ ಎಡೆಮಾಡಿ ಕೊಟ್ಟಂತಾಗಿದೆ. ನಿಜವಾಗಿ ಚೆನ್ನಬಸಪ್ಪನವರು ಬೆಳಗಾವಿ ಜಿಲ್ಲೆಯ ಡೆಪ್ಯೂಟಿಯಾಗಿ ಕೆಲಸ ಆರಂಭಿಸಿದ್ದು ೧೮೭೭ರಲ್ಲಿ. ಹಳಕಟ್ಟಿಯವರ ಪ್ರಸ್ತುತ ತಪ್ಪು ಗ್ರಹಿಕೆಯ ಪರಿಣಾಮವಾಗಿ ಮುಂದೆ ಚೆನ್ನಬಸಪ್ಪನವರನ್ನು ಕುರಿತು ಬರೆಯುವ ಕೆಲವರು ದಿಕ್ಕುತಪ್ಪುವಂತಾಯಿತೆಂಬುದು ಗಮನಾರ್ಹವಾಗಿದೆ. ಏನೇ ಆದರೂ ಅಂದಿನ ಸಂದರ್ಭದಲ್ಲಿ ತಿಳಿದು ಹಳಕಟ್ಟಿಯವರು ಮಾಡಿದ ಕೆಲಸ ಸಣ್ಣದೇನಲ್ಲ. ಅವರು ಅಷ್ಟನ್ನಾದರೂ ಮಾಡದೇ ಹೋಗಿದ್ದರೆ ನಾವು ಇಂದು ಬಹಳಷ್ಟರಿಂದ ವಂಚಿತರಾಗುತ್ತಿದ್ದೆವೆಂಬುದಂತೂ ಸತ್ಯಸಂಗತಿಯಾಗಿದೆ.

ಮುಂದೆ 'ಡೆಪ್ಯೂಟಿ ಚೆನ್ನಬಸಪ್ಪ' ಒಂದೇ ಹೆಸರಿನ ಎರಡು ಕೃತಿಗಳು ಕ್ರಮವಾಗಿ ಸ.ಸ.ಮಾಳವಾಡ (೧೯೭೪), ಹಾಗೂ ವೆಂಕಟೇಶ ಸಾಂಗಲಿ (೧೯೭೫) ಅವರಿಂದ ರಚಿತವಾಗಿವೆ. ಮಕ್ಕಳ ಪುಸ್ತಕಗಳೆಂಬುದನ್ನು ಲಕ್ಷದಲ್ಲಿಟ್ಟುಕೊಂಡು ಇವುಗಳನ್ನು ಸಮೀಕ್ಷಿಸಬೇಕಾಗಿದೆ.

ಇವುಗಳಲ್ಲೊಂದಾದ ಮಾಳವಾಡ ಅವರ ಪುಸ್ತಕವು ಇಂಡಿಯಾ ಬುಕ್ ಹೌಸ್ ಬೆಂಗಳೂರಿನಿಂದ ಪ್ರಕಟವಾಗಿದೆ. ಮುಖಪುಟವು ಚೆನ್ನಬಸಪ್ಪನವರಿಗೂ ಮತ್ತು ಟ್ರೇನಿಂಗ ಕಾಲೇಜಿಗೂ ಇರುವ ಅವಿನಾಭಾವ ಸಂಬಂಧವನ್ನು ಸಾಂಕೇತಿಸುವ ರೀತಿಯಲ್ಲಿ ಸಂಯುಕ್ತ ಭಾವಚಿತ್ರಗಳಿಂದ ಒಡಗೂಡಿದೆ. ಬೆನ್ನು ಪುಟವು ಕರ್ನಾಟಕದ (ಸಂಸ್ಕೃತಿಯನ್ನೂ ಪ್ರತಿನಿಧಿಸುವ ಚಿತ್ರಗಳುಳ್ಳ) ನಕಾಶೆ ಹೊಂದಿದೆ. ೪೨ ಪುಟಗಳ ಈ ಪುಟ್ಟ ಪುಸ್ತಕ ಮಕ್ಕಳಿಗಾಗಿಯೇ ರಚಿತವಾಗಿದೆ. ಇದರಿಂದಾಗಿ ಮಾಮೂಲಿಗಿಂತ ಅಕ್ಷರಗಳಗಾತ್ರ ದೊಡ್ಡವಿದ್ದು, ಪುಸ್ತಕದ ಕೊನೆಯಲ್ಲಿ ಪಠ್ಯಕ್ಕೆ ಸಂಬಂಧಿಸಿದ ಕೆಲವು ಮುಖ್ಯ ಪ್ರಶ್ನೆಗಳನ್ನು ಕೇಳಲಾಗಿದೆ. ಮಕ್ಕಳಿಗೆ ಅಕ್ಷರಸಾಹಿತ್ಯಕ್ಕಿಂತ ಚಿತ್ರಸಾಹಿತ್ಯ ಬಹುಬೇಗನೇ ಅಂತರಂಗಕ್ಕೆ ತಾಗುವುದರಿಂದ ಮಕ್ಕಳ ಮನೋಭೂಮಿಕೆಯನ್ನು ಬಲ್ಲ ಮಾಳವಾಡರು ಅಕ್ಷರ ಸಾಹಿತ್ಯಕ್ಕೆ ಪೂರಕವಾಗಿ ಚಿತ್ರಸಾಹಿತ್ಯವನ್ನೂ ಬೆರೆಸಿ ಪುಸ್ತಕದ ಪರಿಣಾಮವನ್ನು ಹೆಚ್ಚಿಸುವ ಕಡೆಗೆ ಗಮನಹರಿಸಿದ್ದಾರೆ. ಇಲ್ಲಿ ಕೂಡ ಒಟ್ಟು ವಸ್ತುವನ್ನು ೫ ವಿಭಾಗಮಾಡಿಕೊಂಡಿದ್ದು, ವ್ಯತ್ಯಾಸವೆಂದರೆ ಆ ವಿಭಾಗಗಳಿಗೆ ಉಪಶೀರ್ಷಿಕೆಯನ್ನು ಜೋಡಿಸದೆ, ಸಂಖ್ಯಾನುಗುಣವಾಗಿ ಹೊಂದಿಸಿಕೊಳ್ಳಲಾಗಿದೆ.

ಭಾಗ-೧ ರಲ್ಲಿ ಪ್ರಾಚೀನ ಕರ್ನಾಟಕದ ವೈಭವವನ್ನೂ, ಅದರ ಭವ್ಯಪರಂಪರೆಯನ್ನೂ ವಿವರಿಸುತ್ತ, ವಿಜಯನಗರ ಪತನಾನಂತರ ಇಲ್ಲಿ ಕಾಣಿಸಿಕೊಂಡ ಆದಿಲ್‌ಶಾಹಿ, ನಿಜಾಮಶಾಹಿ, ಮತ್ತು ಮರಾಠಾಶಾಹಿ ದಬ್ಬಾಳಿಕೆ ಹಾಗೂ ಅದರ ಪರಿಣಾಮಗಳನ್ನು ಚುಟುಕಾಗಿ ಚಿತ್ರಿಸಲಾಗಿದೆ.

ರಸೆಲ್‌ರು ಈ ಭಾಗಕ್ಕೆ ಎಜ್ಯುಕೇಶನಲ್ ಇನ್ಸಪೆಕ್ಟರರಾಗಿ ಬಂದನಂತರ ಡೆಪ್ಯೂಟಿ ಚೆನ್ನಬಸಪ್ಪನವರು ಅವರಿಗೆ ಉತ್ತರ ಕರ್ನಾಟಕದ ವಾಸ್ತವತೆಯನ್ನು ಮನವರಿಕೆ ಮಾಡಿಕೊಟ್ಟ ಸಂಗತಿಯನ್ನು, ಮತ್ತು ಸ್ವತಃ ಚೆನ್ನಬಸಪ್ಪನವರು ಡೆಪ್ಯೂಟಿಯಾಗಿ ಸಂಸ್ಕೃತಿ ಕಟ್ಟುವ ಕೆಲಸಕ್ಕೆ ಅಣಿಯಾದ ಸಂದರ್ಭವನ್ನು ಕ್ರೋಢೀಕರಿಸಿ ಕೊಡಲಾಗಿದೆ. ೨ನೇ ಭಾಗದಲ್ಲಿ ನಮ್ಮ ನಿರೀಕ್ಷೆಯಂತೆ ಚೆನ್ನಬಸಪ್ಪನವರ ಪೂರ್ವಜರ ಊರು, ಡೆಪ್ಯೂಟಿಯವರ ಹುಟ್ಟು, ಬಾಲ್ಯ, ವಿದ್ಯಾರ್ಜನೆ, ಪುಣೆಯ ವಾಸ್ತವ್ಯ ಇತ್ಯಾದಿಗಳನ್ನು ವಿವರಿಸಲಾಗಿದೆ. ಇದರ ಮುಂದಿನ ಭಾಗದಲ್ಲಿ ಚೆನ್ನಬಸಪ್ಪನವರು ಎಂಜಿನೀಯರಿಂಗ ಡಿಗ್ರಿ ಸಂಪಾದಿಸಿದ ಮತ್ತು ಅಲ್ಲಿಯ (ಪುಣೆಯ) ಪರಿಸರದ ಶಿಸ್ತು, ದಕ್ಷತೆ, ಪರಿಶ್ರಮಪಡುವ ಗುಣಸ್ವಭಾವಗಳನ್ನು ಮೈಗೂಡಿಸಿಕೊಂಡ ವಿಚಾರಗಳನ್ನು ಗಮನಕ್ಕೆ ತರಲಾಗಿದೆ. ೪ ಮತ್ತು ೫ನೇ ಭಾಗಗಳು ಮಾತ್ರ ಚೆನ್ನಬಸಪ್ಪನವರ ಸೇವಾ ಕ್ಷೇತ್ರಕ್ಕೆ ಮೀಸಲಾಗಿವೆ. ವಿಶೇಷವೆಂದರೆ, ಚೆನ್ನಬಸಪ್ಪನವರು ರಸೆಲ್‌ರನ್ನು ಮೊದಲು ಮಾಡಿ ಗಂಗಾಧರ ಮಡಿವಾಳೇಶ್ವರ ತೂರಮರಿ, ಶಾಂತವೀರ ರಾಚಿದೇವ ಕಿತ್ತೂರ, ವೆಂಕಟ ರಂಗೋ ಕಟ್ಟಿ, ವೀರಭದ್ರ ಮಡಿವಾಳೇಶ್ವರ ಪಂಡಿತ, ಚೂರಮರಿ ಶೇಷಗಿರಿರಾಯರು, ಭುಜಂಗರಾವ ಹುಯಿಲಗೋಳ, ಪಾಂಡುರಂಗ ಚಿಂತಾಮಣಿ ಪೇಟಕರ, ಝಿಗ್ಗ್ಲರ ಮೊದಲಾದವರ ಜೊತೆಗೂಡಿ ಸಮಕಾಲೀನ ಪ್ರಜ್ಞೆಯನ್ನು ಮೂಡಿಸಿ ಒಂದು ಸಾಮಾಜಿಕ ಕ್ರಾಂತಿಗೆ ಹೇಗೆ ಕಾರಣೀಭೂತರಾದರೆಂಬ ಸಂಗತಿಯನ್ನು ಇಲ್ಲಿ ಮನಮುಟ್ಟುವಂತೆ ಹೇಳಲಾಗಿದೆ. ಜೊತೆಗೆ ಡೆಪ್ಯೂಟಿಯವರಿಗೂ ಮತ್ತು ಅವರ ಸಮಕಾಲೀನರಿಗೂ ಪರಸ್ಪರ ಎಂಥ ಸಹಸ್ಪಂದನ ಕ್ರಿಯೆ, ಪ್ರತಿಕ್ರಿಯೆಗಳು ನಡೆದವೆಂಬುದನ್ನೂ ಇಲ್ಲಿ ಸಂಕ್ಷೇಪಿಸಿ ಕೊಡಲಾಗಿದೆ. ಶಾಲಾಪತ್ರಕದ ಕೆಲವು ವಿಚಾರಗಳನ್ನೂ ಇಲ್ಲಿ ಉಲ್ಲೇಖಿಸಲಾಗಿದೆ. ಹೀಗೆ ಫ.ಗು.ಹಳಕಟ್ಟಿಯವರು ಗಮನ ಹರಿಸದೇ ಇದ್ದ ಕೆಲವು ದಾಖಲೆಗಳ ಕಡೆಗೂ ದೃಷ್ಟಿಹಾಯಿಸಿದ್ದು ಮೆಚ್ಚುವ ಅಂಶಗಳಾಗಿವೆ. ಟ್ರೇನಿಂಗ್ ಕಾಲೇಜು, ಕರ್ನಾಟಕ ಕಾಲೇಜು, ಕರ್ನಾಟಕ ವಿಶ್ವವಿದ್ಯಾಲಯಗಳ ಸಂಬಂಧವನ್ನು ಮಕ್ಕಳಿಗೆ ಮನವರಿಕೆಯಾಗುವುದರ ಸಲುವಾಗಿ

ಅಜ್ಜಿ, ತಾಯಿ, ಮಗಳು ಎಂದು ಗುರುತಿಸಿ "ಡೆಪ್ಯೂಟಿ ಚೆನ್ನಬಸಪ್ಪನವರು ಕರ್ನಾಟಕ ವಿಶ್ವವಿದ್ಯಾಲಯದ ಪ್ರಪಿತಾಮಹ" ಎಂದು ಕರೆದಿದ್ದಾರೆ. ಹೀಗೆ ಮಕ್ಕಳನ್ನು ಮುಟ್ಟಲು ಎಷ್ಟೇ ಪ್ರಯತ್ನ ಮಾಡಿದ್ದರೂ ಅಲ್ಲಲ್ಲಿ ಇಣುಕಿದ ಪ್ರೌಢಭಾಷೆಯಿಂದಾಗಿ ಅವರು ಕೆಲವೊಮ್ಮೆ ಸೋಲುತ್ತ ಹೋಗುತ್ತಾರೆ. ಆದರೆ ಫ.ಗು.ಹಳಕಟ್ಟಿಯವರ ಪುಸ್ತಕದಲ್ಲಿ ವ್ಯಕ್ತವಾಗಿರುವ ಪ್ರೌಢವಿಚಾರಗಳನ್ನು (ಸಾಮಾಜಿಕ- ಧಾರ್ಮಿಕ) ಇದು ಮಕ್ಕಳ ಪುಸ್ತಕ ಎಂಬ ಪರಿಜ್ಞಾನದಿಂದ ಕೈಬಿಟ್ಟಿರುವುದು ಮಾತ್ರ ಮಾಳವಾಡರ ಔಚಿತ್ಯಪ್ರಜ್ಞೆಗೆ ಸಾಕ್ಷಿಯಾಗಿದೆ.

ಮಾಳವಾಡರ ಪುಸ್ತಕ ಬೆಳಕುಕಂಡ ಮರುವರ್ಷವೇ ಅಂದರೆ ೧೯೭೫ ರಲ್ಲಿ ವೆಂಕಟೇಶ ಸಾಂಗಲಿಯವರ 'ಡೆಪ್ಯೂಟಿ ಚೆನ್ನಬಸಪ್ಪ' ಪುಸ್ತಿಕೆ ರಾಷ್ಟ್ರೋತ್ಥಾನ ಸಾಹಿತ್ಯಮಾಲೆಯ ಭಾರತ-ಭಾರತಿ ಸಂಪದದ ಅಡಿಯಲ್ಲಿ ೨೧೧ ನೇ ಪುಷ್ಪವಾಗಿ ಪ್ರಕಟಗೊಂಡಿದೆ. ಮಕ್ಕಳ ಪುಸ್ತಕವಾಗಿರುವುದರಿಂದ ಮಾಳವಾಡರ ಪುಸ್ತಕದಲ್ಲಿದ್ದ ಎಲ್ಲ ಗುಣಾತ್ಮಕ ಅಂಶಗಳೂ ಇಲ್ಲಿವೆ. ಪುಟಸಂಖ್ಯೆ ಕೂಡ ಸ್ವಲ್ಪ ಹೆಚ್ಚೂ ಕಡಿಮೆ ಅಷ್ಟೇ. ಆದರೆ ಆಕಾರದಲ್ಲಿ ಇನ್ನೂ ಕಿರಿದು. ಬೆಲೆ ೯೦ ಪೈಸೆ. ಮಾಳವಾಡರಿಗಿಂತ ಇಲ್ಲಿಯ ಭಾಷೆ ಹೆಚ್ಚು ಲಲಿತ, ನಿರೂಪಣೆ ಇನ್ನೂ ಸರಳ. ಹಳಕಟ್ಟಿ ಹಾಗೂ ಮಾಳವಾಡರಿಗಿಂತ ವಿಷಯವನ್ನು ಇನ್ನೂ ಹೆಚ್ಚು ಕಂತುಗಳಲ್ಲಿ ವಿಭಾಗಿಸಿ ಇಟ್ಟಿರುವುದರಿಂದ ಸಾಂಗಲಿಯವರ ಈ ಪುಸ್ತಕ, ಮಕ್ಕಳ ಅಭಿರುಚಿಗೆ ಸರಿಯಾಗಿ ಸ್ಪಂದಿಸುತ್ತದೆ. ಉದಾಹರಣೆಗೆ ಬಾಲ್ಯ, ಅಚ್ಚುಮೆಚ್ಚಿನ ಶಿಷ್ಯ, ಇದೆಂತಹ ತುಂಟ, ಇಂಗ್ಲೀಷ ಕಲಿ, ಕಲಿಯುವುದು ಹೇಗೆ? ಪುಣೆಗೆ, ಆಶ್ರಯ ದೊರೆಯಿತು, ತಾಯಿಯೂ ಬಂದಳು, ಎಂಜಿನೀಯರಿಂಗ ಕಾಲೇಜು, ಮನಸ್ಸು ಬೆಳೆಯಿತು, ಉದ್ಯೋಗ, ಧಾರವಾಡದಲ್ಲಿ ಮರಾಠಿಯ ಪ್ರಭುತ್ವ, ಶಿಕ್ಷಕರ ಶಿಕ್ಷಕರು, ನಮ್ಮ ಭಾಷೆಯ ಮೂಲಕವೇ, ಕಾಲೇಜಿನ ಪ್ರಿನ್ಸಿಪಾಲರು, ಡೆಪ್ಯೂಟಿ ಇನ್‌ಸ್ಪೆಕ್ಟರ, ಪರಭಾಷೆಯ ವ್ಯಾಮೋಹಬೇಡ, ಜನತೆಯ ಹಿತಕ್ಕಾಗಿ, ಬದಲಾಗುವ ಸಮಾಜದಲ್ಲಿ ಒಮ್ಮೆ, ಸಮಾಜಸೇವೆ, ಆತ್ಮವಂಚನೆ ಬೇಡ, ಇಂದೂ ಮಾರ್ಗದರ್ಶಕರು - ಹೀಗೆ ಸುಮಾರು ಇಪ್ಪತ್ತೂರು ಉಪಶೀರ್ಷಿಕೆಗಳಲ್ಲಿ ಮುರಿದು ಕಟ್ಟುವುದರಿಂದ ಮಕ್ಕಳ ಗ್ರಹಣಶಕ್ತಿಗೆ ಹಾಗೂ ಜ್ಞಾಪಕ ಸಾಮರ್ಥ್ಯಕ್ಕೆ ಹೆಚ್ಚು ಅನುಕೂಲಮಾಡಿ ಕೊಟ್ಟಂತಾಗಿದೆ.

'ಡೆಪ್ಯೂಟಿ ಚೆನ್ನಬಸಪ್ಪ' ಎಂಬ ವಿಷಯ ಪ್ರವೇಶದ ಮೊದಲಭಾಗ ಕಥೆ ಹೇಳುವ ಶೈಲಿಯಲ್ಲಿ ಆರಂಭವಾಗಿದ್ದು, ಮಕ್ಕಳನ್ನು ಅದು ಗಕ್ಕನೆ ಹಿಡಿದುಬಿಡುತ್ತದೆ. ಫ.ಗು.ಹಳಕಟ್ಟಿಯವರ ಪುಸ್ತಕ ಹಾಗೂ ಮಾಳವಾಡ ಅವರ ಪುಸ್ತಕ ಮತ್ತು ಮಠಪತ್ರಿಕೆಗಳು ಆಗಲೇ ಇವರ ಸಮ್ಮುಖದಲ್ಲಿದ್ದುದರಿಂದ ಅಲ್ಲಿಯ ವಿಷಗಳನ್ನು ಇವರು ಚೆನ್ನಾಗಿ ಬಳಸಿಕೊಳ್ಳುತ್ತಾರೆ. ಚೆನ್ನಬಸಪ್ಪನವರ ಸಾಹಿತ್ಯಿಕ, ಧಾರ್ಮಿಕ, ಸಾಮಾಜಿಕ ನಿಲವುಗಳನ್ನು ಪರಿಚಯಿಸುವ ಸಂದರ್ಭ ಬಂದಾಗಲೆಲ್ಲ ತಮ್ಮ ಸ್ವಂತ ವ್ಯಾಖ್ಯಾನವನ್ನೂ ಸೇರಿಸಿ ಆದಷ್ಟೂ ಆ ಪ್ರಸಂಗಗಳನ್ನು ಸುಲಲಿತಗೊಳಿಸಿ, ಮಕ್ಕಳಿಗೆ ಮನವರಿಕೆ ಮಾಡಿಕೊಟ್ಟಿದ್ದಾರೆ. ಮಾಳವಾಡರ ಪುಸ್ತಕವಾಗಲೀ ಅಥವಾ ಸಾಂಗಲೀಯವರ ಪುಸ್ತಕವಾಗಲಿ ಮಕ್ಕಳ ಪುಸ್ತಕಗಳಾಗಿರುವುದರಿಂದ ಇವುಗಳನ್ನು ತೀರಾ ವಸ್ತುನಿಷ್ಠವಾಗಿ ನೋಡಲು ಸಾಧ್ಯವಾಗುವುದಿಲ್ಲ.

೧೯೮೦ ರಲ್ಲಿ ಪ್ರಕಟವಾಗಿರುವ 'ಡೆಪ್ಯೂಟಿ ಚೆನ್ನಬಸಪ್ಪನವರು' ಎಂಬ ಕೃತಿಯ ಲೇಖಕರು ಮ.ಗು.ಹಂದ್ರಾಳ ಅವರು,. ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯಮಠ ವೀರಶೈವ ಅಧ್ಯಯನ ಸಂಸ್ಥೆ ಇದನ್ನು ಪ್ರಕಟಿಸಿದೆ. 'ವೀರಶೈವ ಪುಣ್ಯಪುರುಷ' ಎಂಬ ಸಾಹಿತ್ಯ ರತ್ನಮಾಲೆಯ ಯೋಜನೆಯ ಅಡಿಯಲ್ಲಿ ಮೊದಲ ಹೂವಾಗಿ ಅರಳಿದ ಕೃತಿಯಿದು. ೭೬ ಪುಟಗಳ ಈ ಕಿರುಹೊತ್ತಿಗೆಯ ಬೆಲೆ ೧ ರೂಪಾಯಿ ೫೦ ಪೈಸೆ. ಈ ಕೃತಿರಚನೆಯ ಹಿಂದಿನ

ಒತ್ತಾಸೆ ಯಾವುದೆಂದರೆ ೧೯-೨೦ ನೇ ಶತಮಾನಗಳಲ್ಲಿ ಬಾಳಿದ ನೂರಾರು ಜನ ವೀರಶೈವ ಪುಣ್ಯಪುರುಷರಲ್ಲಿ ಒಬ್ಬೊಬ್ಬರನ್ನಾಗಿ ಬೆಳಕಿಗೆ ತರುವುದು. ಫ.ಗು.ಹಳಕಟ್ಟಿ, ಪ್ರೊ. ಸ.ಸ.ಮಾಳವಾಡರು ಚೆನ್ನಬಸಪ್ಪನವರನ್ನು ಕುರಿತು ಬರೆದ ಕೃತಿಗಳನ್ನೂ ಶಿವಾನುಭವ ಮಾಲೆ, ಮಠಪತ್ರಿಕೆ, (ಜೀವನಶಿಕ್ಷಣ) ಸಂಚಿಕೆಗಳು, ಕನ್ನಡಸಾಹಿತ್ಯ ಪರಿಷತ್ತಿನ ಕನ್ನಡನುಡಿ ಸಂಚಿಕೆಗಳಲ್ಲಿ ಪ್ರಕಟವಾಗಿರುವ ಲೇಖನಗಳನ್ನೂ ತಾವು ಕೃತಿರಚನೆಯ ಸಂದರ್ಭದಲ್ಲಿ ಬಳಸಿಕೊಂಡುದಾಗಿ, ದ್ವಿತೀಯ ಆವೃತ್ತಿಯನ್ನು ಹೊರತರುವ ಸಂದರ್ಭದಲ್ಲಿ ದಿ.ಅರಟಾಳ ರುದ್ರಗೌಡರು ಬರೆದಿಟ್ಟ ಟಿಪ್ಪಣಿಗಳಲ್ಲಿ ಲಭಿಸಿದ ವಿವರಗಳನ್ನೂ ಸೇರಿಸಿಕೊಂಡುದಾಗಿ ಶ್ರೀ ಹಂದ್ರಾಳ ಅವರು ತಿಳಿಸಿದ್ದಾರೆ.

ಈ ಕೃತಿಯ ಮೊದಲ ಎಂಟು ಪುಟಗಳು ಪ್ರಕಾಶನದ ವಿವರ, ಮೊದಲ ಮಾತು, ಮತ್ತು ಅರಿಕೆ ಇವುಗಳಿಗೆ ನಿಗದಿತವಾಗಿದ್ದು, ೯ನೇ ಪುಟದ ಮೇಲೆ ಚೆನ್ನಬಸಪ್ಪನವರ ಭಾವಚಿತ್ರವಿದೆ. ನಂತರದ ಪೀಠಿಕಾಭಾಗದ ೧ ರಿಂದ ೭ ಪುಟಗಳು ಯಥಾಪ್ರಕಾರ ಕರ್ನಾಟಕದ ಪ್ರಾಚೀನತೆ, ಅದರ ಸಾಂಸ್ಕೃತಿಕ ವೈಭವ, ವಿಜಯನಗರದ ಪತನಾನಂತರ ಆ ಸಾಂಸ್ಕೃತಿಕ ನೆಲಗಟ್ಟು ಅಲ್ಲಾಡತೊಡಗಿದ್ದು, ಅನಂತರದ ಪೇಶ್ವೆಯವರ ಪ್ರಭಾವ ಇತ್ಯಾದಿ ವಿವರಗಳಿಗೆ ಸಂಬಂಧಪಟ್ಟಿದ್ದು; ಒಂದು ವಿಶೇಷವೆಂದರೆ, ಶಿ.ಚ.ನಂದೀಮಠ, ಚೆನ್ನಪ್ಪ ಉತ್ತಂಗಿ, ಸ.ಸ.ಮಾಳವಾಡ ಇವರು ಟ್ರೇನಿಂಗ ಕಾಲೇಜು ಹಾಗೂ ಅದರ ಮೂಲಪುರುಷ ಚೆನ್ನಬಸಪ್ಪನವರನ್ನು ಕುರಿತು ತೆಗೆದ ಉದ್ಗಾರಗಳನ್ನು ಇಲ್ಲಿ ಸಂಗ್ರಹಿಸಿಕೊಡಲಾಗಿದೆ. ತರುವಾಯ ಬಾಲ್ಯ-ಶಿಕ್ಷಣ, ಸರಕಾರಿ ಸೇವೆಯ ಆರಂಭ, ಮಠಪತ್ರಿಕೆಯ ಆರಂಭ, ವಿದ್ಯಾಧಿಕಾರಿ ಮತ್ತು ಕನ್ನಡದ ಸೇವೆ, ಕನ್ನಡಭಾಷೆಯ ಪ್ರಚಾರ, ಧಾರ್ಮಿಕ ವಿಚಾರಗಳು, ಸಾಮಾಜಿಕ ವಿಚಾರಗಳು, ಚೆನ್ನಬಸಪ್ಪನವರ ಕಾರ್ಯದ ಘನತೆ, ಈ ಪ್ರಕಾರ ವಿಷಯವನ್ನು ವಿಂಗಡಿಸಿಕೊಂಡು ವಿಶ್ಲೇಷಿಸಲಾಗಿದೆ. ಇದಕ್ಕಿಂತ ಹಿಂದೆ ಪ್ರಕಟಗೊಂಡಿದ್ದ ಮೂರು (ಹಳಕಟ್ಟಿ, ಮಾಳವಾಡ, ಹಾಗೂ ಸಾಂಗಲಿ ಇವರುಗಳ) ಪುಸ್ತಕಗಳಿಗಿಂತಲೂ ಇದು ಸಾಕಷ್ಟು ಪ್ರೌಢವಾಗಿದೆ. ಇದಕ್ಕೆ ಕಾರಣ ಈ ಹಿಂದಿನ ಚೆನ್ನಬಸಪ್ಪನವರನ್ನು ಕುರಿತಾದ ಸಾಹಿತ್ಯವನ್ನು ಬಳಸಿಕೊಳ್ಳುವ ಸದವಕಾಶ ಒಂದು ನಿಟ್ಟಿನದಾದರೆ, ಇವರು ೧೯೫೪-೬೦ ಹಾಗೂ ೧೯೬೫-೬೭ ಹೀಗೆ ಎರಡು ಅವಧಿಗೆ ಮಠಪತ್ರಿಕೆ, ಪತ್ರಿಕೆಗಳ ಸಂಪಾದಕರಾಗಿದ್ದುದು ಇನ್ನೊಂದು ನಿಟ್ಟಿನದು. ಇದರಿಂದಾಗಿ ಹಂದ್ರಾಳ ಅವರಿಗೆ ಚೆನ್ನಬಸಪ್ಪನವರ ಕಾರ್ಯಸಾಧನೆಗಳನ್ನು ಗುರುತಿಸುತ್ತ ಹಲವು ವಿದ್ವಾಂಸರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನೂ, ದಾಖಲೆಗಳನ್ನೂ ಡೆಪ್ಯೂಟಿಯವರು ಹೊರಡಿಸಿದ ಪರಿಪತ್ರಗಳನ್ನೂ ಉಲ್ಲೇಖಿಸುತ್ತ, ಚೆನ್ನಬಸಪ್ಪನವರ ಜೀವನ ಚರಿತ್ರೆಗೆ ಹೆಚ್ಚು ಖಚಿತತೆಯನ್ನು ದೊರಕಿಸಿಕೊಡುವುದು ಸಾಧ್ಯವಾಯಿತು. ಈ ಕೃತಿ ಸಹಜವಾಗಿಯೇ ಫ.ಗು.ಹಳಕಟ್ಟಿಯವರ ಪುಸ್ತಕಕ್ಕೆ ಹೆಚ್ಚು ಋಣಿಯಾಗಿದೆ.

ಚೆನ್ನಬಸಪ್ಪನವರನ್ನು ಕುರಿತು ಈ ವರೆಗೆ ಬಂದಿರುವ ಎಲ್ಲ ಪುಸ್ತಕಗಳಿಗಿಂತಲೂ ಗಾತ್ರದಲ್ಲಿ ಹಿರಿದಾದ, ಸತ್ವದಲ್ಲಿ ವಿಶಿಷ್ಟವಾಗಿರುವ ಪುಸ್ತಕ 'ಕನ್ನಡದ ದೀಪ'. ಇದು ಪ್ರಕಟವಾದದ್ದು ೧೯೮೨ ರಲ್ಲಿ. ಡೆಪ್ಯೂಟಿ ಚೆನ್ನಬಸಪ್ಪನವರ ಶತಮಾನೋತ್ಸವ ಸಮಿತಿಯವರು ಹೊರತಂದಿರುವ ಡೆಪ್ಯೂಟಿ ಚೆನ್ನಬಸಪ್ಪನವರ ಸ್ಮರಣ ಗ್ರಂಥವಿದು. ಇದರ ಪ್ರಧಾನ ಸಂಪಾದಕರು, ಮ.ಗು.ಹಂದ್ರಾಳ, ಸಹಸಂಪಾದಕರು ಶಿವವಶಂಕರ ಹಿರೇಮಠ, ಬೆಲೆ ೨೦ ರೂಪಾಯಿ. ಒಟ್ಟು ಪುಟಗಳು ೩೭೦. ಮುಖಪುಟ ಚೆನ್ನಬಸಪ್ಪನವರ ಶತಮಾನೋತ್ಸವ ಸಂದರ್ಭದಲ್ಲಿ ಪ್ರತಿಷ್ಠಾಪಿಸಿದ ಚೆನ್ನಬಸಪ್ಪನವರ ಕಂಚಿನ ಪ್ರತಿಮೆ (ಶಿಲ್ಪಿ ನಾಗೇಶರಾವ

ಬೆಂಗಳೂರು)ಯಿಂದ ಆವೃತವಾಗಿದೆ. ಇದರ ಎದುರಿಗೆ ಕರ್ನಾಟಕದ ನಕ್ಷೆಯೇ ಜ್ಯೋತಿಯಾಗಿರುವ ಒಂದು ದೀವಿಗೆ ಇದೆ. ಬೆನ್ನು ಪುಟದ ಮೇಲೆ ೧೮೭೦ ರಲ್ಲಿ ಚೆನ್ನಬಸಪ್ಪನವರು ಶಾಲಾಪತ್ರಕಕ್ಕೆ ಬರೆದ ಒಂದು ಪತ್ರವನ್ನು ಮುದ್ರಿಸಲಾಗಿದೆ. ಇಡೀ ಕೃತಿಯನ್ನು ನಾಲ್ಕು ಭಾಗಗಳಾಗಿ ಒಡೆದಿದ್ದು, ಮೊದಲ ಭಾಗದಲ್ಲಿ ಚೆನ್ನಬಸಪ್ಪನವರ ಬಗೆಗೆ ಹಲವು ವಿದ್ವಾಂಸರುಗಳಿಂದ ಬರೆಯಿಸಿದ ಲೇಖನಗಳು ಮತ್ತು ಕವನಗಳನ್ನು ಸಂಪಾದಿಸಲಾಗಿದ್ದರೆ, ಭಾಗ ಎರಡರಲ್ಲಿ ೧೯ ನೇಯ ಶತಮಾನದ ಕರ್ನಾಟಕ ಶಿಕ್ಷಣರಂಗವನ್ನು ಕುರಿತು ಶಿಕ್ಷಣ ತಜ್ಞರಿಂದ ಬರೆಯಿಸಿದ ಉತ್ಕೃಷ್ಟ ಲೇಖನಗಳನ್ನು ಅಳವಡಿಸಿಕೊಳ್ಳಲಾಗಿದೆ. ಮೂರನೇ ಭಾಗದಲ್ಲಿ ಆಧುನಿಕ ಶಿಕ್ಷಣ ಕ್ರಮದಲ್ಲಿನ ಸಮಸ್ಯೆಗಳನ್ನು ವಿಶ್ಲೇಷಿಸಲು ಬೇರೆ ಬೇರೆ ಲೇಖಕರ ಮೂಲಕ ಲೇಖನಗಳನ್ನು ಬರೆಯಿಸಲಾಗಿದೆ. ಇದರಂತೆಯೇ ಭಾಗ ನಾಲ್ಕು ಕೂಡ ವಿವಿಧ ವಿದ್ವಾಂಸರು ಬರೆದ ಕರ್ನಾಟಕದ ಮೂಲಶಿಕ್ಷಣ ತರಬೇತಿಸಂಸ್ಥೆಗಳ ಪರಿಚಯಾತ್ಮಕ ಲೇಖನಗಳಿಗೆ ಮೀಸಲಾಗಿದೆ. ಕೊನೆಗೆ ಅನುಬಂಧವನ್ನೂ ಒದಗಿಸಲಾಗಿದೆ. ಇದೆಲ್ಲವನ್ನು ಗಮನಿಸಿದಾಗ ತಕ್ಕಮಟ್ಟಿಗಾದರೂ ಸಂಪಾದನಾ ಶಿಸ್ತನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಕಟವಾದ ಕೃತಿ ಇದೆಂದು ಹೇಳಬಹುದು.

ಮೊದಲನೇ ಭಾಗದಲ್ಲಿ ಒಡೆದು ತೋರುವ ಕೆಲವು ವೈಶಿಷ್ಟ್ಯಗಳೆಂದರೆ; ಇಲ್ಲಿ ಮೊಟ್ಟಮೊದಲ ಬಾರಿಗೆ ಚೆನ್ನಬಸಪ್ಪನವರ ವಂಶವಾಹಿನಿ, ಚೆನ್ನಬಸಪ್ಪನವರ ಹಸ್ತಾಕ್ಷರದ ಖಿಜು, ಚೆನ್ನಬಸಪ್ಪನವರ ವಂಶಜರ ಬಗ್ಗೆ ಮಾಹಿತಿ ಮತ್ತು ಅವರುಗಳ ಭಾವಚಿತ್ರ, ೧೮೭೭ ರಲ್ಲಿ ಚೆನ್ನಬಸಪ್ಪನವರು ಸಂಪಾದಿಸುತ್ತಿದ್ದ ಮಠಪತ್ರಿಕೆಯಲ್ಲಿನ ಪರಿಪತ್ರವೊಂದರ ಯಥಾಪ್ರತಿ ನಿಜಕ್ಕೂ ಈ ನಾಲ್ಕು ಸಂಗತಿಗಳು ಈ ಕೃತಿಯ ಸಂಶೋಧನಾ ಪರಿಶ್ರಮದ ಕುರುಹುಗಳಾಗಿವೆ. ಇದರಿಂದಾಗಿ ಚೆನ್ನಬಸಪ್ಪನವರ ಜೀವನಚರಿತ್ರೆಯಲ್ಲಿ ಹೊಸನೋಟಗಳಿಗೆ ಮತ್ತೊಂದು ಕ್ಷಿತಿಜವನ್ನು ನಿರ್ಮಿಸಿಕೊಟ್ಟಂತಾಯಿತು. ಸ.ವೀ.ಹಂಜಿ ಎಂಬವರು ಬರೆದಿರುವ 'ಲಿಂಗೈಕ್ಯ ಡೆಪ್ಯೂಟಿ ಚೆನ್ನಬಸಪ್ಪನವರ ವಂಶಜರು' ಎಂಬ ಲೇಖನ ಅಲ್ಲಿಯ ವರೆಗೆ ನಿಗೂಢವಾಗಿದ್ದ ಕೆಲವು ವಿಷಯಗಳ ಮೇಲೆ ಬೆಳಕು ಚೆಲ್ಲಿದೆ. ತರುವಾಯದ 'ಡೆಪ್ಯೂಟಿ ಚೆನ್ನಬಸಪ್ಪನವರ ಜೀವನ, ಸಾಧನೆ, ವ್ಯಕ್ತಿತ್ವ', ಎಂಬ ಹಂದ್ರಾಳ ಅವರ ಲೇಖನ, ಅವರೇ ಈ ಮುಂದೆ ವೀರಶೈವ ಅಧ್ಯಯನಸಂಸ್ಥೆ ಗದಗದಿಂದ ಪ್ರಕಟಿಸಿದ 'ಡೆಪ್ಯೂಟಿ ಚೆನ್ನಬಸಪ್ಪನವರು' ಎಂಬ ಪುಸ್ತಕದ ವಿಸ್ತೃತ ರೂಪವಾಗಿದೆ. ಮುಂದಿನ ೧೮ ಪುಟಗಳು ಚೆನ್ನವೀರ ಕಣವಿ, ಗುರುಲಿಂಗ ಕಾಪಸೆ, ರಾಮಚಂದ್ರ ಪಾಟೀಲ, ಕೊತ್ತಲ ಮಹಾದೇವಪ್ಪ, ಮೊದಲಾದವರ ಕವನಗಳಿಗೆ ಮೀಸಲಾಗಿವೆ. ಈ ಭಾಗದ ಕೊನೆಯ ಲೇಖನವು'ಚೆನ್ನಬಸಪ್ಪನವರ ಕಾಲ, ಕೆಲವು ದಾಖಲೆಗಳು' ಎಂಬ ತಲೆಬರಹ ಹೊಂದಿದ್ದು, ಶಿವಶಂಕರ ಹಿರೇಮಠರು ಈ ಮೂಲಕ ಚೆನ್ನಬಸಪ್ಪನವರಿಗೆ ಸಂಬಂಧಿಸಿದ ಕೆಲವು ಮಹತ್ವದ ದಾಖಲೆಗಳನ್ನು ವರ್ಗೀಕರಿಸಿಕೊಡಲು ಪ್ರಯತ್ನಿಸಿದ್ದಾರೆ. ಶಾಲಾಪತ್ರಕಗಳಲ್ಲಿ ಬಿಡಿಯಾಗಿ ಹರಡಿಕೊಂಡಿದ್ದ ಹಲವಾರು ಪರಿಪತ್ರಗಳನ್ನು ಹೀಗೆ ಒಂದು ಶಿಸ್ತಿಗೆ ಒಳಪಡಿಸುವ ಇವರ ಮೊದಲ ಪ್ರಯತ್ನ ಗಮನಾರ್ಹವಾದುದಾಗಿದೆ.

ಪ್ರಸ್ತುತ 'ಕನ್ನಡದ ದೀಪ'ಕ್ಕೆ ಹೆಚ್ಚಿನ ಮಹತ್ವ ಪ್ರಾಪ್ತವಾದದ್ದು, ಅದರ ಎರಡನೇ ಮೂರನೇ ಭಾಗದ ಪ್ರೌಢಲೇಖನಗಳಿಂದ. ಇವುಗಳಲ್ಲಿ ೧೯ನೇ ಶತಮಾನದ ಮುಂಬೈ ಕರ್ನಾಟಕದಲ್ಲಿ ಶೈಕ್ಷಣಿಕ ಸ್ಥಿತಿಗತಿಗಳೇನಿದ್ದವೆಂಬುದನ್ನು ಸಾಕಷ್ಟು ಅಭ್ಯಾಸಪೂರ್ಣವಾಗಿ

ನಿರೂಪಿಸಲಾಗಿದೆ. ಶೈಕ್ಷಣಿಕ ಇತಿಹಾಸವನ್ನು ಅಭ್ಯಸಿಸಬೇಕೆನ್ನುವವರಿಗೆ ಈ ಲೇಖನಗಳು ಅತ್ಯುತ್ತಮ ದಾಖಲೆಗಲಾಗಿವೆ. ಎಂಟು ಜನ ವಿದ್ವಾಂಸರ ಈ ಲೇಖನಗಳೊಂದಿಗೆ ಡಾ. ಆರ್.ಸಿ.ಹಿರೇಮಠ ಅವರ 'ವಿಲಿಯಂ ಅಲೆನ್ ರಸೆಲ್' ಎಂಬ ೯ನೆಯ ಲೇಖನ ಕೂಡ ಸೇರಿಕೊಂಡಿದೆ. ಈ ಎಲ್ಲ ಲೇಖನಗಳ ವಸ್ತುವೈವಿಧ್ಯ ಆಳ, ಹರವುಗಳು ಪ್ರಶಂಸನೀಯವಾಗಿವೆ. ಈ ಲೇಖನಗಳ ಶೀರ್ಷಿಕೆಗಳೇ ಪ್ರಸ್ತುತ ಅಭಿಪ್ರಾಯವನ್ನು ದೃಢೀಕರಿಸುತ್ತವೆ. ಉದಾಹರಣೆಗಾಗಿ:

೧. ಮುಂಬೈ ಕರ್ನಾಟಕದಲ್ಲಿ ಶೈಕ್ಷಣಿಕ ಸ್ಥಿತ್ಯಂತರಗಳು (೧೮೧೮-೧೮೩೫- ಡಾ. ವರದರಾಜ ಉಮರ್ಜಿ).

೨. ೧೯ನೆಯ ಶತಮಾನದಲ್ಲಿ ಮುಂಬೈ ಕರ್ನಾಟಕದಲ್ಲಿಯ ಪ್ರಾಥಮಿಕ ಶಿಕ್ಷಣದ ಸಮೀಕ್ಷೆ (ಡಾ. ಸದಾನಂದ ನಾಯಕ).

೩. ೧೯ನೇ ಶತಮಾನದಲ್ಲಿ ಮುಂಬೈ ಕರ್ನಾಟಕದ ಶಿಕ್ಷಣ ವಿಸ್ತರಣೆಯಲ್ಲಿ ಖಾಸಗೀ ಪ್ರಯತ್ನಗಳು (೧೮೫೪-೧೯೦೦, ಚ.ಸ.ಬೆನ್ನೂರ).

೪. ೧೯ನೇ ಶತಮಾನದಲ್ಲಿ ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ (ಡಾ. ಎ.ಸಿ.ದೇವೇಗೌಡ).

೫. ಬ್ರಿಟೀಶ ಭಾರತದ ಮದ್ರಾಸು ಕರ್ನಾಟಕದಲ್ಲಿಶಿಕ್ಷಣ, ಹತ್ತೊಂಬತ್ತನೇ ಶತಕದ ಹಿನ್ನೋಟ (ಡಾ. ಕೆ. ರಾಮಂದ್ರಾಚಾರ್ಯ).

೬. ೧೯ನೆಯ ಶತಮಾನದಲ್ಲಿ ಕೊಡಗು ಪ್ರದೇಶದಲ್ಲಿ ಶಿಕ್ಷಣ (ಅನು: ಆಯ್.ಎಸ್.ಬಿದರಿ).

೭. ಮುಂಬೈ ಕರ್ನಾಟಕದ ಸಂಸ್ಥಾನಿಕ ಪ್ರದೇಶಗಳಲ್ಲಿದ್ದ ಹತ್ತೊಂಬತ್ತನೆಯ ಶತಮಾನದ ಶಿಕ್ಷಣದ ಒಂದು ನೋಟ(ಗೋವಿಂದ ಮೂರ್ತಿ ದೇಸಾಯಿ).

೮. ೧೯ನೇ ಶತಮಾನದಲ್ಲಿ ಹೈದರಾಬಾದ ಕರ್ನಾಟಕದಲ್ಲಿ ಶಿಕ್ಷಣ (ಆಯ್.ಎಸ್.ಬಿದರಿ).

೯. ವಿಲಿಯಂ ಅಲೆನ್ ರಸೆಲ್ (ಡಾ.ಆರ್.ಸಿ. ಹಿರೇಮಠ).

ಹೀಗೆ ಕಳೆದ ಶತಮಾನದ ಕರ್ನಾಟಕದಲ್ಲಿ ಪ್ರಾಥಮಿಕ ಮಟ್ಟದ ಶೈಕ್ಷಣಿಕ ಚಟುವಟಿಕೆಗಳು ಸಾಗಿಬಂದ ಒಂದು ಐತಿಹಾಸಿಕವಾದ ಸಮಗ್ರ ನೋಟ, ಈ ಲೇಖನಗಳ ಮೂಲಕ ವಿಸ್ತರಿಸಿಕೊಂಡು ನಿಂತಿರುವುದನ್ನು ಕಾಣುತ್ತೇವೆ. ಇದರಿಂದಾದ ಬಹುದೊಡ್ಡ ಲಾಭವೆಂದರೆ, ಅದೇ ಶತಮಾನದ ಉತ್ತರಾರ್ಧದಲ್ಲಿ ಆ ಪ್ರಾಥಮಿಕ ಮಟ್ಟದ ಶೈಕ್ಷಣಿಕ ರಂಗದಲ್ಲಿಯೇ ಕ್ರಾಂತಿಕಾರಕ ಬದಲಾವಣೆ ತಂದ ಡೆಪ್ಯೂಟಿ ಚೆನ್ನಬಸಪ್ಪನವರ ಕಾರ್ಯಸಾಧನೆ, ಸಿದ್ಧಿಗಳನ್ನು ಹೆಚ್ಚು ನಿಖರವಾಗಿ ಅರ್ಥಮಾಡಿಕೊಳ್ಳಲು ಈ ಮೂಲಕ ಅನುವು ಮಾಡಿಕೊಟ್ಟಂತಾಗಿದೆ. ಒಂದು ಕಾಲಘಟ್ಟಕ್ಕೆ ಸೀಮಿತವಾದ ಕರ್ನಾಟಕದ ಶಿಕ್ಷಣ ರಂಗವನ್ನು ಚೆನ್ನಬಸಪ್ಪನವರ ಸಂಸ್ಮರಣೆಯ ನೆಪದಲ್ಲಿ ಪರಿಚಯಿಸುವ 'ಕನ್ನಡದ ದೀಪ'ದ ಪ್ರಯತ್ನ ಸ್ತುತ್ಯಾರ್ಹವಾದುದು. ಮೂರನೆಯ ಭಾಗದಲ್ಲಿ ಇದೇ ವಿಷಯಕ್ಕೆ ಸಂಬಂಧಪಟ್ಟ ಆಧುನಿಕ ಸಂಸ್ಥೆಗಳನ್ನು ಎತ್ತಿಕೊಂಡು ಚರ್ಚಿಸಿರುವುದರಿಂದ ಇದಕ್ಕೆ ಇನ್ನಷ್ಟು ಔಚಿತ್ಯ, ಅರ್ಥಪೂರ್ಣತೆಗಳು ಪ್ರಾಪ್ತವಾದಂತಾಗಿದೆ.

ನಾಲ್ಕನೆಯ ಭಾಗವು ಮುಂಬೈ ಕರ್ನಾಟಕದಲ್ಲಿ ಜೀವನ ಶಿಕ್ಷಣ ತರಬೇತಿ (ಎಸ್.ಬಿ.ಹಳಕಟ್ಟಿ), ಉಪಾಧ್ಯಾಯರ ಸರಕಾರಿ ತರಬೇತಿ ವಿದ್ಯಾಲಯವು ಆಚರಿಸಿದ ಐದು ಶತಮಾನೋತ್ಸವಗಳು (ಶಂಕರ ಹ.ಬಟ್ಟೂರ), ಉಜ್ವಲ ಪರಂಪರೆಯ ಶಿಕ್ಷಕಿಯರ ಸರಕಾರಿ ತರಬೇತಿ ಸಂಸ್ಥೆ, ಧಾರವಾಡ (ಶ್ರೀಮತಿ ಎಚ್.ಆರ್.ಮಾಲತಿ), ಧಾರವಾಡ ಜಿಲ್ಲೆಯಲ್ಲಿ ಶಾಲಾಶಿಕ್ಷಣ (೧೮೮೦-೧೯೮೦ ಎಸ್‌ಜಿ.ಪಾಟೀಲ) ಈ ಲೇಖನಗಳನ್ನು ಒಳಗೊಂಡಿದೆ. ಹೀಗೆ ಹೆಚ್ಚೂ ಕಡಿಮೆ ಕಳೆದ ಶತಮಾನದಲ್ಲಿ ಜರುಗಿದ ಶೈಕ್ಷಣಿಕ ವಿದ್ಯಮಾನಗಳನ್ನು ಪರಿಚಯಿಸಿಕೊಳ್ಳಬೇಕೆನ್ನುವವರಿಗೆ ಬಹಳ ಸುಲಭದಲ್ಲಿ ಈ ಕೃತಿ ಇಂಬು ನೀಡುತ್ತದೆ. ಆದರೆ ಡೆಪ್ಯೂಟಿಯವರನ್ನು ಕೇಂದ್ರವಾಗಿಟ್ಟುಕೊಂಡು ಸಾಕಷ್ಟು ಪರಿಶ್ರಮಪೂರ್ವಕವಾದ ಕಾರ್ಯವನ್ನು 'ಕನ್ನಡದ ದೀಪ' ಪೂರೈಸಿದ್ದರೂ, ಡೆಪ್ಯೂಟಿಯವರ ಕಾರ್ಯಸಾಧನೆಗಳನ್ನು ಕುರಿತಾದ ಇನ್ನೊಂದೆರಡು ಲೇಖನಗಳು ಇಲ್ಲಿ ಸೇರಿಕೊಳ್ಳಬೇಕಾಗಿತ್ತು ಎನಿಸುತ್ತದೆ. ಅಲ್ಲಿಗೆ ಸಂಪಾದನೆಯ ದೃಷ್ಟಿಯಿಂದ ಕಣ್ಣಿಗೆ ಬೀಳುವ ಒಂದು ಅಂಶವೆಂದರೆ, ಡಾ.ಆರ್.ಸಿ.ಹಿರೇಮಠರ 'ವಿಲಿಯಂ ಅಲೆನ್ ರಸೆಲ್' ಎಂಬ ಲೇಖನ ಮತ್ತು 'ಡೆಪ್ಯೂಟಿ ಚೆನ್ನಬಸಪ್ಪನವರ ಸಮಕಾಲೀನವರು' ಎಂಬ ಎಸ್.ಪಿ. ಪಾಟೀಲರ ಲೇಖನ ಇವೆರಡೂ ಆ ಭಾಗದ (೨ನೇ ಭಾಗದ) ತುದಿಗೆ ಸೇರಿಕೊಂಡಿದ್ದರೆ ಚೆನ್ನಾಗಿರುತ್ತಿತ್ತು. ಹೀಗೆ ಮಾಡಿದ್ದರೆ ಶೈಕ್ಷಣಿಕ ಇತಿಹಾಸಕ್ಕೆ ಸಂಬಂಧಪಟ್ಟ ಲೇಖನಗಳೆಲ್ಲ ಒತ್ತಟ್ಟಿಗೆ ಸಮಾವೇಶಗೊಂಡು ಆ ಭಾಗಕ್ಕೆ ಇನ್ನೂ ಹೆಚ್ಚಿನ ಕ್ರಮಬದ್ಧತೆ ಪ್ರಾಪ್ತವಾಗುತ್ತಿತ್ತು. ಇದರಂತೆಯೇ 'ಕವಿಗಳು ಕಂಡ ಡೆಪ್ಯೂಟಿ ಚೆನ್ನಬಸಪ್ಪನವರು' ಎಂಬ ಕವನ ಗುಚ್ಛವನ್ನು ಮೊದಲನೆಯ ಭಾಗದ ತುದಿಗೆ ಸೇರಿಸಕೊಳ್ಳಬಹುದಾಗಿತ್ತು. ಕೊನೆಯ ಭಾಗದಲ್ಲಿರುವ ಶಂಕರ ಬಟ್ಟೂರರ ಲೇಖನ 'ಉಪಾಧ್ಯಾಯರ ಸರಕಾರಿ ತರಬೇತಿ ವಿದ್ಯಾಲಯವು ಆಚರಿಸಿದ ಐದು ಶತಮಾನೋತ್ಸವಗಳು' ಎಂಬುದು ಕೂಡಾ ಆ ಭಾಗದ ಅಂತ್ಯದಲ್ಲಿ ಸೇರ್ಪಡೆಯಾಗಿದ್ದರೆ ಇನ್ನೂ ಹೆಚ್ಚು ಸೂಕ್ತವಾಗಿರುತ್ತಿತ್ತು. ಏನೇ ಆದರೂ ಈ 'ಕನ್ನಡದ ದೀಪ' ಎಂಬ ಸಂಪಾದನಾ ಕೃತಿ ಹಾಗೂ ಚೆನ್ನಬಸಪ್ಪನವರ ಶತಮಾನೋತ್ಸವದ ಆಚರಣೆ ಇವೆರಡರಿಂದಾಗಿ, ಡೆಪ್ಯೂಟಿ ಚೆನ್ನಬಸಪ್ಪನವರಿಗೆ ನ್ಯಾಯವಾದ ಗೌರವದ ಸ್ಥಾನ ದೊರಕಿದ್ದು, ಮತ್ತು ಅವರು ಬೆಳಗಾಗುವುದರೊಳಗಾಗಿ ಕನ್ನಡಿಗರ ಮನೆಮಾತಾದದ್ದು. - ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಇತ್ತೀಚೆಗಷ್ಟೇ ಅಂದರೆ ೧೯೮೯ ರಲ್ಲಿ 'ಕನ್ನಡದ ಶಕಪುರುಷ ಡೆಪ್ಯೂಟಿ ಚೆನ್ನಬಸಪ್ಪನವರು' ಎಂಬ ಕೃತಿಯನ್ನು ಆರ್.ಎನ್.ಕರಡಿಯವರು ಹೊರತಂದಿದ್ದಾರೆ. ಇದರ ಪ್ರಕಾಶಕರು ಜೀವನಶಿಕ್ಷಣ ಪತ್ರಿಕೆಯ ಶತಮಾನೋತ್ತರ ಬೆಳ್ಳಿಹಬ್ಬದ ಸಮೀತಿಯವರು. ಬೆಲೆ ೩ ರೂಪಾಯಿ. 'ಡೆಪ್ಯೂಟಿ ಚೆನ್ನಬಸಪ್ಪ ಪ್ರಾಥಮಿಕ ಶಿಕ್ಷಣ ಪ್ರತಿಷ್ಠಾನ'ದ ಆಶ್ರಯದಲ್ಲಿ ಶೈಕ್ಷಣಿಕ ಸಾಹಿತ್ಯವನ್ನು ಜನಪ್ರಿಯಗೊಳಿಸುವ ಉದ್ದೇಶದಿಂದ ಒಂದು ಯೋಜನೆ ರೂಪುಗೊಂಡು, ಆ ಯೋಜನೆಯ ಅಡಿಯಲ್ಲಿ ಪ್ರಸ್ತುತ, ಕರಡಿಯವರ ಕೃತಿ ಪ್ರಕಾಶನಗೊಂಡಿದೆ. ಇದರ ಪುಟಗಳು ೭೨. ಆರಿಕೆಯಲ್ಲಿ ಲೇಖಕರು ತಮ್ಮ ಕೃತಿರಚನೆಗೆ ಫ.ಗು.ಹಳಕಟ್ಟಿಯವರ 'ಕೈ.ವಾ.ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆ'ಯೇ ಮೂಲಾಧಾರವೆಂದೂ, ಅಲ್ಲದೆ 'ಕನ್ನಡದದೀಪ' (ಪ್ರ. ಸಂ.ಮ.ಗು.ಹಂದ್ರಾಳ) ಡೆಪ್ಯೂಟಿ ಚೆನ್ನಬಸಪ್ಪನವರು (ಮ.ಗು.ಹಂದ್ರಾಳ) ಸಂಯುಕ್ತ ಕರ್ನಾಟಕ ಹಾಗೂ ಪ್ರಜಾವಾಣಿಯಲ್ಲಿ ಬಂದ ಲೇಖನಗಳನ್ನು ಬಳಸಿಕೊಂಡಿರುವುದಾಗಿಯೂ ಸ್ಪಷ್ಟಪಡಿಸಿದ್ದಾರೆ. ಈ ವರೆಗೆ ಡೆಪ್ಯೂಟಿಯವರನ್ನು ಕುರಿತು ಬಂದಿರುವ ಕೃತಿಗಳಿಗಿಂತ ಇದರಲ್ಲಿರುವ ಕೆಲವು ವಿಶೇಷ

ಅಂಶಗಳೆಂದರೆ, ಕರಡಿಯವರು ಪ್ರತಿಷ್ಠಾನದ ಗೌರವನಿರ್ದೇಶಕರಾಗಿ ಕೆಲಸ ಮಾಡುತ್ತಿರುವುದರಿಂದ ಅದರ ಸಂಕ್ಷಿಪ್ತ ಇತಿಹಾಸವನ್ನೂ ಇಲ್ಲಿ ಪರಿಚಯಿಸುತ್ತಾರಲ್ಲದೆ, ಅದರ ಮುಖ್ಯ ಧ್ಯೇಯೋದ್ದೇಶಗಳನ್ನು ಒಂದೆಡೆಗೆ ಪಟ್ಟಿ ಮಾಡುತ್ತಾರೆ. ಅಲ್ಲದೆ ಟ್ರೇನಿಂಗ ಕಾಲೇಜು, ಮಠಪತ್ರಿಕೆಯ ಸಂಕ್ಷಿಪ್ತ ಇತಿಹಾಸವನ್ನು ಒದಗಿಸುತ್ತಾರೆ. ಇಷ್ಟನ್ನು ಬಿಟ್ಟರೆ ಇನ್ನುಳಿದೆಲ್ಲವೂ ಈ ಹಿಂದಿನ ಕೃತಿಗಳ ವಸ್ತುವಿನಿಂದ ಪ್ರತಿಬಿಂಬಿತವಾದ ವಿಷಯವೇ ಎಂಬುದು ಮೇಲ್ನೋಟಕ್ಕೇ ಗೊತ್ತಾಗುತ್ತದೆ. ಅಂತೂ ಚೆನ್ನಬಸಪ್ಪನವರನ್ನು ಕುರಿತು ಬಂದ ಸಾಹಿತ್ಯ ತೀರ ಅತ್ಯಲ್ಪ ಎಂಬ ಕೊರಗನ್ನು ಸ್ವಲ್ಪಮಟ್ಟಿಗಾದರೂ ನೀಗುವುದಕ್ಕೆ ಈ ಕೃತಿ ಸಹಾಯಕವಾಗಿದೆ ಎಂಬುದು ಒಂದು ಸಮಾಧಾನದ ಸಂಗತಿ ಅಷ್ಟೇ.

೧೯೬೦ ರಲ್ಲಿ ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ 'ಶಿಕ್ಷಣಯೋಗಿ ಚೆನ್ನಬಸಪ್ಪನವರು' ಮತ್ತೊಂದು ಸಂಪಾದನಾ ಕೃತಿ. ಇದರ ಸಂಪಾದಕರು ವಿದ್ವಾನ್ ಜಿ.ವಿ.ಶಿವಸ್ವಾಮಿ. ಕನ್ನಡ ಸಾಹಿತ್ಯ ಪರಿಷತ್ತಿನ ಅಮೃತ ಮಹೋತ್ಸವದ ಅಂಗವಾಗಿ ಹಮ್ಮಿಕೊಂಡ (ಜುಲೈ ೨೨-೧೯೯೦) ಡೆಪ್ಯೂಟಿ ಚೆನ್ನಬಸಪ್ಪನವರ ವಿಚಾರ ಸಂಕಿರಣದಲ್ಲಿ ಭಾಗವಹಿಸಿ ಮಾತನಾಡಿದ ನಾಲ್ಕು ಜನ ವಿದ್ವಾಂಸರ (ವಿದ್ವಾನ್ ಜಿ.ವಿ.ಶಿವಸ್ವಾಮಿ, ಶ್ರೀ ಎನ್.ಬಸವಾರಾಧ್ಯ, ಪ್ರೊ.ಆರ್.ಜಿ. ಕುಲಕರ್ಣಿ, ಶ್ರೀ ಟಿ.ಆರ್.ಮಹದೇವಯ್ಯ) ಉಪನ್ಯಾಸಗಳ ಸಂಗ್ರಹವೇ ಹೀಗೆ ಕೃತಿರೂಪ ತಾಳಿದೆ. ಪುಟಗಳು ೩೩, ಬೆಲೆ ೬ ರೂಪಾಯಿ. ಇದಕ್ಕೆ ಪರಿಷತ್ ಅಧ್ಯಕ್ಷರಾಗಿದ್ದ ಜಿ.ಎಸ್.ಸಿದ್ಧಲಿಂಗಯ್ಯನವರ ಪುಟ್ಟ ಮುನ್ನುಡಿಯಿದೆ. ಇಲ್ಲಿ ಕೂಡ ಡೆಪ್ಯೂಟಿ ಚೆನ್ನಬಸಪ್ಪನವರ ಜೀವನ ಮತ್ತು ಸಾಧನೆಗಳನ್ನು ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಡುವುದೇ ಪ್ರಧಾನ ಉದ್ದೇಶವಾಗಿದೆ. ಶಿಕ್ಷಣಯೋಗಿ ಚೆನ್ನಬಸಪ್ಪ, ಡೆಪ್ಯೂಟಿ ಚೆನ್ನಬಸಪ್ಪನವರ ವ್ಯಕ್ತಿತ್ವ, ಡೆಪ್ಯೂಟಿ ಚೆನ್ನಬಸಪ್ಪನವರ ಶಿಕ್ಷಣ ಸೇವೆ, ಡೆಪ್ಯೂಟಿ ಚೆನ್ನಬಸಪ್ಪನವರ ಕನ್ನಡ ಸೇವೆ - ಎಂಬ ವಿಷಯಗಳಲ್ಲಿ ಚೆನ್ನಬಸಪ್ಪನವರ ಬದುಕನ್ನು ಅರ್ಥೈಸಿಕೊಡುವ ಇಲ್ಲಿಯ ಪ್ರಯತ್ನ ಪರಿಣಾಮಕಾರಿಯಾಗಿಯೇ ಮೂಡಿಬಂದಿದೆ.

**ಬಿಡಿ ಲೇಖನಗಳು:**

ಮುದವೀಡು ಕೃಷ್ಣರಾಯರು, ಡಾ.ಶ್ರೀನಿವಾಸ ಹಾವನೂರ, ಡಾ.ರಾ.ಯ. ಧಾರವಾಡಕರ, ಶಿಂತ್ರಿ ಬಸಪ್ಪನವರು, ಪ್ರೊ. ಸ.ಸ.ಮಾಳವಾಡ, ಎಸ್.ಎಂ.ಅಂಗಡಿ, ಮ.ಗು. ಹಂದ್ರಾಳ, ವೆಂಕಟೇಶ ಸಾಂಗಲಿ ಇವರು ಡೆಪ್ಯೂಟಿ ಚೆನ್ನಬಸಪ್ಪನವರನ್ನು ಕುರಿತು ಲೇಖನಗಳನ್ನು ಬರೆದವರಲ್ಲಿ ಪ್ರಮುಖರು.

ಮುದವೀಡು ಕೃಷ್ಣರಾಯರು ಮತ್ತು ವೆಂಕಟೇಶ ಸಾಂಗಲಿಯವರು ಹೊಸಗನ್ನಡ ಪುಣ್ಯಪುರುಷರನ್ನು ಪರಿಚಯಿಸುವ ಸಂದರ್ಭದಲ್ಲಿ, ಅವರಲ್ಲಿ ಅಗ್ರಗಣ್ಯರಾದ ಡೆಪ್ಯೂಟಿ ಚೆನ್ನಬಸಪ್ಪನವರ ವ್ಯಕ್ತಿತ್ವವನ್ನು ಸಾಕಷ್ಟು ಅಭಿಮಾನಪೂರ್ವಕವಾಗಿಯೇ ಚಿತ್ರಿಸಿದ್ದಾರೆ. ಇದರಲ್ಲಿ ಕೃಷ್ಣರಾಯರ ಲೇಖನವಂತೂ ತುಂಬಾ ಮನೋಹರವಾಗಿದ್ದು ಚೆನ್ನಬಸಪ್ಪನವರ ಬಗ್ಗೆ ಪ್ರಾಥಮಿಕ ತಿಳುವಳಿಕೆಯಿಲ್ಲದವರ ಮೇಲೆ ಈ ಲೇಖನ ಆಳವಾದ ಪರಿಣಾಮ ಬೀರುವಲ್ಲಿ ಸಂದೇಹವೇ ಇಲ್ಲ. ಇಲ್ಲಿಯ ಸರಳವಾದ ಸ್ಫುಟವಾದ, ಭಾವೋತ್ತೇಜಕವಾದ ಭಾಷೆ ಹಾಗೂ ಶೈಲಿಯಿಂದಾಗಿ ಇದೊಂದು ಸಾಕಷ್ಟು ಜನಪ್ರಿಯವಾದ ಲೇಖನವೆನಿಸಿಕೊಂಡಿದೆ. ಹಾವನೂರ ಹಾಗೂ ಧಾರವಾಡಕರರಿಬ್ಬರೂ ಅನುಷಂಗಿಕಾವಾಗಿ ತಮ್ಮ ಸಂಪ್ರಬಂಧಗಳಲ್ಲಿ ಚೆನ್ನಬಸಪ್ಪನವರನ್ನು ಕುರಿತು ಪ್ರಸ್ತಾಪಿಸಿದ್ದಾರೆ. ಹಾವನೂರ ಅವರು ಟ್ರೇನಿಂಗ ಕಾಲೇಜಿನ

ಶಿಕ್ಷಕವರ್ಗದವರನ್ನು ಪರಿಚಯಿಸುವ ಸಂದರ್ಭದಲ್ಲಿ ತೀರ ಸಂಕ್ಷಿಪ್ತವಾಗಿ, ಧಾರವಾಡಕರ ಅವರು ಉದಯಕಾಲದ ಶೈಕ್ಷಣಿಕ ಆಡಳಿತಗಾರರನ್ನು ಪರಿಚಯಿಸುವ ಸಂದರ್ಭದಲ್ಲಿ ಸ್ವಲ್ಪ ವಿಸ್ತೃತವಾಗಿ ಬರೆಯುತ್ತಾರೆ. ಧಾರವಾಡಕರ ಲೇಖನದ ಮೇಲೆ ಹಳಕಟ್ಟಿಯವರ ಪ್ರಭಾವವಿರುವುದು ಒಡೆದುಕಾಣುವ ಅಂಶವಾಗಿದೆ.

ಶಿಂತ್ರಿ ಬಸಪ್ಪನವರ ಲೇಖನ (೧೯೫೭, ಧಾ.ಗ. ಸರಕಾರಿ ಟ್ರೇನಿಂಗ ಕಾಲೇಜ ಶತಾಬ್ದಿ ಸಮಾರಂಭ ಸ್ಮಾರಕ ಸಂಪುಟ) ಚೆನ್ನಬಸಪ್ಪನವರನ್ನು ಸಮಗ್ರವಾಗಿ ವಿಶ್ಲೇಷಿಸುತ್ತದೆ. ಇಲ್ಲಿ ಅವರು ಪ್ರಸ್ತಾವನೆ, ಬಾಲ್ಯ ಶಿಕ್ಷಣ, ಸರಕಾರಿ ನವಕರಿ, ಡೆಪ್ಯೂಟಿ ಹುದ್ದೆಯಲ್ಲಿ ಸೇವೆ, ಕನ್ನಡ ಭಾಷೆಗೆ ಸಲ್ಲಿಸಿದ ಕಾಣಿಕೆ ಹೀಗೆ ಒಟ್ಟು ವಿಷಯವನ್ನು ಹಂಚಿಕೊಂಡು ಡೆಪ್ಯೂಟಿಯವರ ಸಾಧನೆ ಸಿದ್ಧಿಗಳ ಕಡೆಗೂ ಗಮನಹರಿಸಿದ್ದು ವಿಶೇಷವೆನಿಸುತ್ತದೆ. ಬಹುಶಃ ಹಳಕಟ್ಟಿಯವರು ಡೆಪ್ಯೂಟಿಯವರನ್ನು ಕುರಿತು ಬರೆದ ಕೃತಿಯ ನಂತರ ಡೆಪ್ಯೂಟಿಯವರನ್ನು ಸಾಕಷ್ಟು ಸಮರ್ಪಕವಾಗಿ ಮತ್ತು ಗಟ್ಟಿಯಾಗಿ ಚಿತ್ರಿಸಿದ ಲೇಖನ ಇದಾಗಿದೆ.[೩]

ಪ್ರೊ. ಸ.ಸ.ಮಾಳವಾಡರು 'ಕನ್ನಡದ ಪಿತಾಮಹ ಡೆಪ್ಯೂಟಿ ಚೆನ್ನಬಸಪ್ಪ' ಎಂಬ ಬಿಡಿ ಲೇಖನವೊಂದನ್ನು ಡೆಪ್ಯೂಟಿಯವರ ನೂರನೆಯ ಪುಣ್ಯತಿಥಿಯ ಸಂದರ್ಭದಲ್ಲಿ ಸಂಯುಕ್ತ ಕರ್ನಾಟಕ ದಿನಪತ್ರಿಕೆ (೪.೧.೧೯೮೧)ಯಲ್ಲಿ ಪ್ರಕಟಿಸಿದ್ದಾರೆ. ಇದರಂತೆಯೇ ಎಸ್‌ಎಂ.ಅಂಗಡಿಯವರು ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಶತಮಾನೋತ್ಸವ ಸಮಿತಿ ಪ್ರಕಟಿಸಿದ (೧೯೮೭) ಸಂಸ್ಮರಣ ಸಂಚಿಕೆಯಲ್ಲಿ ಅದರ ಸಂಸ್ಥಾಪಕರು ಹಾಗೂ ಗೌರವಾನ್ವಿತರನ್ನು ಪರಿಚಯಿಸುತ್ತ ಡೆಪ್ಯೂಟಿ ಚೆನ್ನಬಸಪ್ಪನವರನ್ನು ಕುರಿತು ಲೇಖನ ಪ್ರಕಟಿಸಿದ್ದಾರೆ. ಈ ಎರಡೂ ಲೇಖನಗಳು ಎರಡು ಪ್ರತ್ಯೇಕ ವಿಶಿಷ್ಟ ಸಂದರ್ಭಗಳಿಗಾಗಿ ಬರೆದವುಗಳೆಂಬುದು ಗಮನಾರ್ಹ. ಹೀಗಾಗಿ ಡೆಪ್ಯೂಟಿಯವರನ್ನು, ಅವರ ಬದುಕಿನ ಪ್ರಮುಖ ಘಟ್ಟಗಳನ್ನೂ ಪರಿಚಯಿಸುವುದಕ್ಕೆ ಈ ಲೇಖನಗಳು ಬದ್ಧವಾಗಿವೆ.

'ಕನ್ನಡ ಕುಲದೀಪಕ ಲಿಂಗೈಕ್ಯ ಡೆಪ್ಯೂಟಿ ಚೆನ್ನಬಸಪ್ಪನವರು' ಎಂಬ ಶೀರ್ಷಿಕೆಯ ಲೇಖನವನ್ನು ಮ.ಗು.ಹಂದ್ರಾಳ ಅವರು 'ಕನ್ನಡದ ದೀಪ'ದಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ಮೊದಲಿಗೆ ಸಂಕ್ಷಿಪ್ತವಾದ ಐತಿಹಾಸಿಕ ಹಿನ್ನೆಲೆಯನ್ನು ಹೇಳಿ, ನಂತರ ಅವರ ಜೀವನ, ಸಾಧನೆ, ವ್ಯಕ್ತಿತ್ವಗಳನ್ನು ದಾಖಲಿಸುವ ಪ್ರಯತ್ನವಿದೆ. ಹಂದ್ರಾಳ ಅವರು ಈ ಮುಂಚೆ(೧೯೮೦) ಗದುಗಿನ ವೀರಶೈವ ಅಧ್ಯಯನ ಸಂಸ್ಥೆಯ ವೀರಶೈವ ಪುಣ್ಯಪುರುಷರ ಗ್ರಂಥಮಾಲೆಯಲ್ಲಿ ಚೆನ್ನಬಸಪ್ಪನವರನ್ನು ಕುರಿತು ಒಂದು ಕಿರುಹೊತ್ತಿಗೆಯನ್ನು ಪ್ರಕಟಿಸಿದ್ದರಾದ್ದರಿಂದ, ಈ ಲೇಖನಕ್ಕೆ ಅಲ್ಲಿಯ ವಸ್ತುವನ್ನೇ ತಕ್ಕಷ್ಟು ಬಳಸಿಕೊಳ್ಳಲಾಗಿದೆ. ಹೀಗಾಗಿ ಚೆನ್ನಬಸಪ್ಪನವರ ಬಗ್ಗೆ ಈ ಲೇಖನದಲ್ಲಿಯೂ ನಮಗೆ ಅಧಿಕೃತವಾದ ವಿವರಗಳು ಸಿಗುವಂತಾಗಿದೆ. ಕೇವಲ ಚರಿತ್ರೆಯನ್ನು ಹೇಳುವ ಉದ್ದೇಶಕ್ಕಿಂತಲೂ ವಿಶೇಷವಾದ ಒಂದು ಚಿಂತನಪರ ದೃಷ್ಟಿ ಅಭಿವ್ಯಕ್ತಗೊಂಡಿರುವುದು ಇಲ್ಲಿ ಎದ್ದು ಕಾಣುವ ಅಂಶವಾಗಿದೆ. ಪ್ರಸ್ತುತ ಈ ಲೇಖನಗಳಲ್ಲದೆ ಇನ್ನೂ ಹಲವಾರು ದಿನಪತ್ರಿಕೆ, ಮಾಸಪತ್ರಿಕೆ, ನಿಯತಕಾಲಿಕೆಗಳಲ್ಲಿಯೂ ಕೆಲವು ಬಿಡಿ ಲೇಖನಗಳು ಪ್ರಕಟವಾಗಿರುವುದು ತಿಳಿದು ಬರುತ್ತದೆ. ಆದರೆ ಅವು ಸಕಾಲಕ್ಕೆ ನನಗೆ

೩. ಜೀವನ ಶಿಕ್ಷಣ: ಧಾ.ಗಂ.ಸ.ಟ್ರೇ.ಕಾ. ಶತಾಬ್ದಿ ಸಮಾರಂಭದ ಸ್ಮಾರಕ ಸಂಪುಟ: ಲಿಂಗೈಕ್ಯ ಡೆಪ್ಯೂಟಿ ಚೆನ್ನಬಸಪ್ಪನವರು, ಪುಟ. ೨೪ - ೨೮.

ಲಭ್ಯವಾಗಲಿಲ್ಲ. ಅಲ್ಲದೆ ನನ್ನದೇ ಒಂದು ಲೇಖನ 'ಡೆಪ್ಯೂಟಿ ಚೆನ್ನಬಸಪ್ಪನವರು' ಎಂಬುದು 'ಹಚ್ಚೇವು ಕನ್ನಡ ದೀಪ' ಎಂಬ ೫೯ನೇ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಗ್ರಂಥದಲ್ಲಿ ಪ್ರಕಟವಾಗಿದೆ. ಇದು ಕೂಡ ಈ ಸಮೀಕ್ಷೆಯಿಂದ ಹೊರಗೇ ಉಳಿದಿದೆ. ಅಂದರೆ ಇಲ್ಲಿ ಕೆಲವು ವಿಶಿಷ್ಟವೆನ್ನಿಸಿದ ಲೇಖನಗಳನ್ನು ಮಾತ್ರ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಕವನಗಳು:

'ಕನ್ನಡದ ದೀಪ'ವು ಪ್ರಕಟವಾದಾಗ ಅದರಲ್ಲಿ 'ಕವಿಗಳು ಕಂಡ ಡೆಪ್ಯೂಟಿ ಚೆನ್ನಬಸಪ್ಪನವರು' ಎಂಬ ಪ್ರತ್ಯೇಕ ಶಿರೋನಾಮೆಯ ಅಡಿಯಲ್ಲಿ ೧೮ ಜನ ಕವಿಗಳು ಕವನಗಳನ್ನು ಬರೆದು ಚೆನ್ನಬಸಪ್ಪನವರಿಗೆ ತಮ್ಮ ಗೌರವ ಕಾಣಿಕೆಗಳನ್ನು ಸಲ್ಲಿಸಿದ್ದಾರೆ. ಈ ಮುಂಚೆ ಹಾಗೂ ನಂತರ ಕೂಡ ಕೆಲವು ಕವಿಗಳು ಜೀವನಶಿಕ್ಷಣ ಮಾಸಪತ್ರಿಕೆಯಲ್ಲಿ ಕವನಗಳನ್ನು ಆಗಾಗ ಬರೆದು ತಮ್ಮ ಶ್ರದ್ಧೆ, ಪ್ರೀತಿಗಳನ್ನು ಪ್ರಕಟಿಸಿದ್ದಾರೆ. ಇವರಲ್ಲಿ ಪ್ರಮುಖರಾದವರೆಂದರೆ, ಚೆನ್ನವೀರ ಕಣವಿ, ರಾಮಚಂದ್ರ ಪಾಟೀಲ, ಕೊತ್ತಲ ಮಹಾದೇವಪ್ಪ, ಗುರುಲಿಂಗ ಕಾಪಸೆ, ಆಯ್.ಎಸ್.ಬಿದರಿ, ಎಚ್.ಆರ್.ಬಂಡೀವಡ್ಡರ, ಬಿ.ಶಿವಶಂಕರ, ನಿಂಗಣ್ಣ ಕುಂಟಿ, ಮಹಮದಲಿ ಗೋಗೇರಿ, ಬಸವರಾಜ ಕುರುಬೆಟ್ಟ ಮುಂತಾದವರು. ಸಾಮಾನ್ಯವಾಗಿ ಇವರ ಕವನಗಳಲ್ಲಿ ಚೆನ್ನಬಸಪ್ಪನವರ ಕಾರ್ಯತತ್ಪರತೆಯನ್ನು, ಕನ್ನಡಕ್ಕಾಗಿ ಅವರು ನಡೆಸಿದ ಹೋರಾಟವನ್ನು, ಆದರಿಂದ ಕನ್ನಡಿಗರು ಪಡೆದ ಸ್ಫೂರ್ತಿಯನ್ನು ಕೊಂಡಾಡುವುದಕ್ಕೇ ನಿಷ್ಠವಾಗಿವೆ. ಹಲವಾರು ವಿಶೇಷಣಗಳನ್ನು ನೀಡಿ ಚೆನ್ನಬಸಪ್ಪನವರ ಗುಣಾಧಿಕ್ಯಕ್ಕೆ ವಿಶೇಷ ಒತ್ತುನೀಡಿದ್ದು ಈ ಕವನಗಳಲ್ಲಿಯ ಏಕರೂಪ ಅಂಶವಾಗಿದೆ.

ಚೆನ್ನವೀರ ಕಣವಿಯವರಂತೂ ಚೆನ್ನಬಸಪ್ಪನವರ ಅಖಂಡವ್ಯಕ್ತಿತ್ವವನ್ನೇ ತಮ್ಮ ಪುಟ್ಟ ಕವನದಲ್ಲಿ ಸೂರೆಗೊಂಡಿದ್ದಾರೆ. ಒಬ್ಬ ವ್ಯಕ್ತಿಯ ಚಿತ್ರವನ್ನು ಹೇಗೆ ಕಾವ್ಯಾತ್ಮಕಗೊಳಿಸಬೇಕೆಂಬುದಕ್ಕೆ ಇಲ್ಲಿಯ 'ಕನ್ನಡ ಕುಲದೀಪಕ' ಕವನ ಒಂದು ಮಾದರಿ. ಉದಾಹರಣೆಗೆ ಕೆಲವು ಸಾಲುಗಳನ್ನು ನೋಡಬೇಕು.

ಮುತ್ತಿ ಮುಸುಗಿದ ಅನ್ಯಭಾಷೆಯ ಮಂಜನೊತ್ತಿ
ಕತ್ತೆತ್ತಿ, ಕನ್ನಡದ ಹೊಂಗಿರಣಗಳ ಚಾಚಿ
ಎಚ್ಚರಿಸಿ, ತನ್ನತನದರಿವ ಮೂಡಿಸಿ, ಮೊಳಗಿ
ಮೂಲೆ ಮೂಲೆಗು ಶಾಲೆ, ಚಿಲಿಚಿಲಿದನಿ ಎತ್ತಿ
ಉದಯಕಾಲದ ಸ್ಫೂರ್ತಿಕೇಂದ್ರವಾಗುತ ನೂರು
ಹೃದಯದೊಳಹೊಕ್ಕು ಹೊರಹೊಮ್ಮಿಸಿದ ಕೃತಿಯಾಗಿ,
ಕೆರಳಿ ಆತ್ಮಸ್ತುತಿಗೆ, ಗುಡುಗಿದರು ಹುಲಿಯಾಗಿ,

ಕರ್ತವ್ಯಕ್ಕೆ ಕಲಿ, ವಾದಿ, ವಾಗ್ಮಿ, ನಿಷ್ಪೃಹರು
ಸಾಹಿತ್ಯ ಶಿಕ್ಷಣವು ಒಡೆವೆರೆದು ತಾಯ್ನುಡಿಗೆ
ಗುಡಿಯಾಗಿ ಕೋಟೆ ಕೊತ್ತಳ ಭದ್ರವಾಗಿಡಲು
ಧಾರವಾಡೆತ್ತರ ಬಿತ್ತರದ ಅಡಿಗಲ್ಲ
ಆ ಗಣಿತದ ಗುಣಾಕಾರವರ್ಧಿಸಿತು ಹೀಗೆ ||

ಇಲ್ಲಿ ಡೆಪ್ಯೂಟಿಯವರು ಮೂಡಿಬಂದ ಪರಿಸರ, ಅವರು ಮಾಡಿದ ಸಾಧನೆ, ನೀಡಿದ ಸ್ಫೂರ್ತಿ, ಅವರ ಗುಣ, ಸ್ವಭಾವ, ಪ್ರತಿಭೆಗಳನ್ನೆಲ್ಲ ಪ್ರತಿಫಲಿಸಿ ತೋರಿಸಿರುವುದನ್ನು ನೋಡಿದರೆ ೧೦ ಪುಟದ ಗದ್ಯದಲ್ಲೂ ಈ 'ನಿಜದರ್ಶನ' ಮಾಡಿಸಲು ಸಾಧ್ಯವಿಲ್ಲವೆಂಬುದು ಮನದಟ್ಟಾಗುತ್ತದೆ.

ಇದನ್ನೆಲ್ಲ ನೋಡುವಾಗ ಒಬ್ಬ ವ್ಯಕ್ತಿಯನ್ನು ಕುರಿತು ಪ್ರಕಟಗೊಳ್ಳುವ ಸಾಹಿತ್ಯ; ಆ ವ್ಯಕ್ತಿಯನ್ನು ಕೇವಲ ಚಾರಿತ್ರಿಕ ಕಣ್ಣಿನಿಂದ ಮಾತ್ರ ನೋಡದೆ, ಆ ಜಾಡಿನಿಂದ ಬಿಡಿಸಿ ಹೊರತಂದು ಅವನನ್ನು ತನ್ನ ಕಾವ್ಯದೃಷ್ಟಿಯ ವಿವಿಧಕೋನಗಳಿಂದ ನೋಡಿ, ಅಲ್ಲಿ ಕಾಣುವ ಪಾರದರ್ಶಕ ಸೌಂದರ್ಯದ ಕಡೆಗೂ ಇನ್ನುಳಿದವರ ಗಮನಸೆಳೆಯುವ ಕೆಲಸ ಮಾಡುತ್ತದೆ. ಈ ಮಾತುಗಳಿಗೆ ಡೆಪ್ಯೂಟಿಯವರನ್ನು ಕುರಿತು ಬಂದ ಈ ಗದ್ಯ-ಪದ್ಯ ಸಾಹಿತ್ಯವೇ ಸಾಕ್ಷಿ.



## ಚೆನ್ನಬಸಪ್ಪನವರ ವ್ಯಕ್ತಿತ್ವ – ಧೋರಣೆ

ಮನುಷ್ಯ ಅಗತ್ಯ ಬಿದ್ದಾಗಲೆಲ್ಲ ತನ್ನ ಸುತ್ತಲಿನ ಪರಿಸರಕ್ಕೆ ತಕ್ಕಷ್ಟು ಪ್ರತಿಕ್ರಿಯಿಸುತ್ತಾನೆ, ಸಮಕಾಲೀನ ಸಮಾಜದೊಂದಿಗೆ ಮುಖಾಮುಖಿಯಾಗುತ್ತಾನೆ. ಹೀಗೆ ಮುಖಾಮುಖಿಯಾಗುವ ಅಥವಾ ಪ್ರತಿಕ್ರಿಯಿಸುವ ಸಂದರ್ಭಗಳು, ಅಭಿರುಚಿ, ಆಸಕ್ತಿಗಳು ವ್ಯಕ್ತಿಯಿಂದ ವ್ಯಕ್ತಿಗೆ ವಿಭಿನ್ನವಾಗಿರುವ ಸಾಧ್ಯತೆಗಳೇ ಹೆಚ್ಚು. ಬಹುಸಂಖ್ಯಾತ ಜನಕ್ಕೆ ಆ ಅಭಿರುಚಿ - ಆಸಕ್ತಿಗಳು ಅವರವರ ಬದುಕನ್ನೇ ಕೇಂದ್ರವನ್ನಾಗಿಸಿಕೊಂಡಿರುತ್ತವೆ. ಇದನ್ನು ಮೀರಿ ಇವರು ಯೋಚಿಸುವುದೇ ಇಲ್ಲ. ಇಂಥವರಿಗೆ 'ವ್ಯಕ್ತಿತ್ವ' ಇರುವುದೇ ವಿರಳ, ಇದ್ದರೂ ಅದು ತೀರ ತೆಳುವಾಗಿರುತ್ತದೆ. ಅಂಥದನ್ನು 'ವ್ಯಕ್ತಿತ್ವ' ಎಂದು ಕರೆಯುವುದಕ್ಕೂ ಮನಸ್ಸು ಒಪ್ಪುವುದಿಲ್ಲ. ಈ ವಿಧದ ಜನ ತನ್ನ ಸಮಾಜದ ಸ್ಥಾಪಿತ ವ್ಯವಸ್ಥೆಯೊಂದಿಗೆ, ಮೌಲ್ಯಗಳೊಂದಿಗೆ ಮೌನಸಂಧಾನ ಮಾಡಿಕೊಂಡು ವೈಯಕ್ತಿಕ ಸುಖ-ಸಾಧನೆಗೆ ಅತ್ಯಂತ ಸುಗಮವಾದ ದಾರಿಯನ್ನು ಕಂಡುಕೊಳ್ಳುತ್ತಾರೆ. ಈ ವಿಚಾರಕ್ಕೆ ಪೂರಕವಾಗಿರುವ ಅಭಿಪ್ರಾಯವೊಂದು ಹೀಗಿದೆ:

"ಒಂದು ವ್ಯವಸ್ಥೆಗೆ ತನ್ನನ್ನು ಒಪ್ಪಿಸಕೊಂಡ ವ್ಯಕ್ತಿ, ಅದರಿಂದ ದೊರಕುವ ಪ್ರಯೋಜನಗಳತ್ತಲೇ ತನ್ನ ದೃಷ್ಟಿ ನೆಟ್ಟಿರುತ್ತಾನೆ. ಇದಕ್ಕಾಗಿ ಅವನು ಏನೇನೂ ಕಷ್ಟಪಡಬೇಕಾಗಿಲ್ಲ. ಸಮೂಹವನ್ನು ನಿರ್ಯೋಚನೆಯಿಂದ ಅನುಸರಿಸಿದರೆ ಸಾಕು. ಯಾವುದೇ ತಲೆಬಿಸಿಯ ಅಗತ್ಯವಿಲ್ಲ. ವಿಶೇಷ ಪರಿಶ್ರಮ, ಸಾಧನೆ, ಚಿಂತನೆಗಳ ಅಗತ್ಯವೂ ಇಲ್ಲ. ಸುಮ್ಮನೆ ಹಿಂಬಾಲಿಸಿದರಾಯಿತು. ಇದರಿಂದ ಅವನ ಪಾಲಿಗೆ ತೊಡಕಿಲ್ಲದ, ವಿರೋಧವಿಲ್ಲದ, ವಿವಾದ-ಸಂಘರ್ಷಗಳಿಗೆ ಎಡೆಕೊಡದ ನಿರಾಂತಕವೂ ಆದ ಬದುಕು ಲಭ್ಯವಾಗುವುದು ಕಡಿಮೆ ಪ್ರಯೋಜನಕಾರಿ ಅಲ್ಲ. ಇಂತಹ ವ್ಯಕ್ತಿಗೆ ಹತ್ತರಕೂಡ ಹನ್ನೊಂದಾಗುತ್ತ, ಗುಂಪಿನ ಕೂಡ ಗೋವಿಂದ ಎನ್ನುತ್ತ, ಗಾಳಿ ಬಿಟ್ಟತ್ತ ತೂರಿಕೊಳ್ಳುತ್ತ, ಸಾಗುವುದೇ ಜಾಯಮಾನವಾಗುತ್ತದೆ. ಇದರ ಮೂಲಕ ಅವನು ಪಡೆದುಕೊಳ್ಳುವ ಪ್ರಯೋಜನ ಹಲವರ ದೃಷ್ಟಿಯಲ್ಲಿ ಮಹತ್ವದ್ದೆನಿಸುವುದರಿಂದ ಇಂಥ ಅನುಕರಣಶೀಲ ವ್ಯಕ್ತಿಗಳ ಸಮೂಹವೇ ಸೃಷ್ಟಿಯಾಗಿ, ಆ ಮೂಲಕ ಒಂದು ವ್ಯವಸ್ಥೆ ರೂಪುಗೊಳ್ಳುತ್ತದೆ. ಈ ವ್ಯವಸ್ಥೆಯ ಹಿತ ಪ್ರಯೋಜನ ಗಳನ್ನುಂಡವರು ಅದನ್ನು ಉಳಿಸಿಕೊಳ್ಳಲು ಪ್ರಯತ್ನವನ್ನೂ ಮಾಡುತ್ತಾರೆ".[೧] ಸಾಮಾನ್ಯವಾಗಿ ಬೆರಳೆಣಿಕೆಯಷ್ಟು ಜನರನ್ನು ಮಾತ್ರ ಹೊರತುಪಡಿಸಿ, ಉಳಿದವರೆಲ್ಲರಿಗೂ ಜೀವನದ

೧. ಹೆಗಡೆ ಆರ್.ಪಿ.: ಸಂಕ್ರಮಣ, ವ್ಯಕ್ತಿ ವಿಶಿಷ್ಟತೆ ಮತ್ತು ಪ್ರಗತಿ, ಪುಟ. ೩-೪.

ಪುರುಷಾರ್ಥ ಇದೇ ಆಗಿರುತ್ತದೆ. ಚೆನ್ನಬಸಪ್ಪನಂಥ ಒಬ್ಬಿಬ್ಬರು ಮಾತ್ರ ವ್ಯವಸ್ಥೆಯ ವ್ಯೂಹದಿಂದ ಹೊರಬರುತ್ತಾರೆ. ಆಮೇಲೆ ಸಮಾಜಘಾತುಕವಾದ ನೆಲೆಗಳನ್ನು ಹುಡುಕಿಕೊಂಡು ಹೋಗಿ ಅವುಗಳ ಮೇಲೆ ಲಗ್ಗೆಹಾಕುತ್ತಾರೆ. ಇವರನ್ನು ಯಾವಾಗಲೂ 'ಸಾಮಾಜಿಕ ಶ್ರೇಷ್ಠತೆ'ಯ ಅಭೀಪ್ಸೆ ಕಾಡುತ್ತಿರುತ್ತದೆ. ವೈಯಕ್ತಿಕ ಶ್ರೇಷ್ಠತೆಯನ್ನು ಸಂಪಾದಿಸಿಕೊಳ್ಳುತ್ತಿರುವ ಹಾಗೇ "ಅದನ್ನು ಸುತ್ತಣ ಸಮಷ್ಟಿಯಲ್ಲಿ ಜೀರ್ಣಿಸಿಕೊಳ್ಳಬೇಕಾಗುತ್ತದೆ. ಮೇಲಕ್ಕೇರಿಕೊಂಡ ವ್ಯಕ್ತಿ ಈ ಪ್ರಕ್ರಿಯೆಯಲ್ಲಿ ಸ್ವಲ್ಪ ಕೆಳಕ್ಕೆ ಬಂದು ಕೆಳಕ್ಕಿರುವ ಸಮಾಜವನ್ನು ಕೂಡಾ ತನ್ನ ಕಡೆ ಮೇಲಕ್ಕೆತ್ತಿಕೊಳ್ಳುತ್ತಾನೆ. ಇದೇ ಸಂಸ್ಕೃತಿಯ ಅಥವಾ ಇತಿಹಾಸ ಚಲನೆಯ ಪ್ರಕ್ರಿಯೆ...."[೨] ಚೆನ್ನಬಸಪ್ಪನವರು ಈ 'ಪ್ರಕ್ರಿಯೆ'ಯಲ್ಲಿ ತಮ್ಮ ವ್ಯಕ್ತಿತ್ವದ ಸಾರ್ಥಕತೆಯನ್ನು ಕಂಡುಕೊಂಡರು. ಆದರಿಂದಾಗಿ ಅವರ ಧೋರಣೆಗಳು ಕೂಡಾ ಇತರರಿಗಿಂತ ವಿಶಿಷ್ಟವಾಗಿರುವುದನ್ನೂ ಅವು ಅವರ ವೃತ್ತಿಜೀವನದ ಪರಿಕಲ್ಪೆಯ ಆಚೆಗೂ ಮೈಚಾಚಿ ನಿಂತಿರುವುದನ್ನೂ ನಿದರ್ಶನಗಳಿಂದ ಕಂಡುಕೊಳ್ಳಲು ಸಾಕಷ್ಟು ಅವಕಾಶವಿದೆ. ಈ ನಿದರ್ಶನಗಳನ್ನು ಪರಾಮರ್ಶಿಸುವಾಗ ಒಬ್ಬ ವ್ಯಕ್ತಿಯ ವೈಯಕ್ತಿಕ ಹಾಗೂ ಸಾಮಾಜಿಕ ಹೀಗೆ ಎರಡೂ ನೆಲೆಗಳು ಮುಖ್ಯವಾಗಿರುವುದರಿಂದ ಚೆನ್ನಬಸಪ್ಪನವರ ವ್ಯಕ್ತಿತ್ವ ಮತ್ತು ಧೋರಣೆಗಳನ್ನು ಉಭಯ ನೆಲೆಗಳಲ್ಲೂ ಶೋಧಿಸಬೇಕಾಗಿದೆ.

" ಮುಖವು ಮನಸ್ಸಿನ ಕನ್ನಡಿ" ಎಂಬ ಗಾದೆ ಹಳೆಯದಾಗಿದ್ದರೂ ಇಂದು ಅದು ನೂರಕ್ಕೆ ನೂರೂ 'ಅಪ್ರಸ್ತುತ' ಎಂದು ಹೇಳುವುದು ಸಾಧುವಾಗಿ ಕಾಣುವುದಿಲ್ಲ. ಯಾಕೆಂದರೆ, ಎಷ್ಟೋ ಸಂದರ್ಭಗಳಲ್ಲಿ ಅನೇಕ ವ್ಯಕ್ತಿಗಳ ಮುಖ ಅವರ ವ್ಯಕ್ತಿತ್ವದ ಪಡಿಯಚ್ಚಾಗಿರುತ್ತದೆ. ಚೆನ್ನಬಸಪ್ಪನವರ ವ್ಯಕ್ತಿತ್ವದ ಬಾಹ್ಯಚರ್ಯೆಯನ್ನು, ಅದರ ರಾಚನಿಕತೆಯನ್ನು ಅವರ ಭಾವಚಿತ್ರದ ಬಲದಿಂದ ಗುರುತಿಸುವಾಗ, ಅವರ ವಿಶಾಲವಾದ ಹಣೆ, ಅದಕ್ಕೆ ಹೊಂದಿ ನಿಶ್ಚಲವಾಗಿ ಉರಿಯುವ ಎರಡು ನೀಲಾಂಜನಗಳಂತಿರುವ ಚಿಂತನಶೀಲ ಕಣ್ಣುಗಳು, ಆ ಎರಡೂ ಕಣ್ಣು-ಹುಬ್ಬುಗಳನ್ನು ಸಮಭಾಗಿಸಿ ತೊಂಡಿಲಾಗಿರುವ ನಾಸಿಕ, ಪ್ರಶ್ನಾರ್ಥಕ ಚಿಹ್ನೆಯನ್ನು ಹೋಲುವ ವಿಶಾಲವಾದ ಕಿವಿಗಳು, ಸ್ವಲ್ಪ ನೀಳವೆನ್ನಬಹುದಾದ ಮುಖ, ಆಗಲವಾದ ಎದೆ, ನೆಗೆದು ನಿಂತಿರುವ ಕುತ್ತಿಗೆ, ಬಿಡುಬೀಸಾದ ತಲೆ, ನಸುಗೆಂಪಾದ ಮೈಬಣ್ಣ, ಹುರಿಕಟ್ಟಾದ, ಎತ್ತರ ನಿಲುವು. ಇನ್ನು ವೇಷ-ಭೂಷಣದ ಬಗ್ಗೆ ಹೇಳಬೇಕೆಂದರೆ ಎಡಗಿವಿ ಪೂರ್ಣ, ಬಲಗಿವಿ ಅರ್ಧ ಮುಚ್ಚುವ ಹಾಗೆ ಸುತ್ತಿದ ಪೇಟಾ, ಕುತ್ತಿಗೆಯ ಮೇಲಿಂದ ಎದೆಯ ಇಬ್ಬಾಗದ ಮೇಲೆ ಇಳಿಚೆಲ್ಲಿರುವ ಹಗುರವಾದ ಒಲ್ಲಿಯ ಸೆಲ್ಲೆ, ಎದೆಯ ಬಲ ಬದಿಯಿಂದ, ಎಡಬದಿಯನ್ನೂ ಆಚ್ಛಾದಿಸಿಕೊಂಡು ಕಂಕುಳದ ಕೆಳಗೆ ಕಟ್ಟಿರುವ ಬಗಲಗಸೆಯ ಅಂಗಿ, ಬಹುಶಃ ಕೆಳಗೊಂದು ಪಂಚೆ- ಇವೂ ಕೂಡ ಅಷ್ಟೇನೂ ನಯವಲ್ಲದ ಉರುಟಾದ ನೂಲಿನ ಬಟ್ಟೆಗಳಾಗಿದ್ದಂತೆ ತೋರುತ್ತದೆ. ಯಾಕೆಂದರೆ ಫ.ಗು.ಹಳಕಟ್ಟಿಯವರು ಅವರ ಉಡಿಗೆ ತೊಡಿಗೆಯ ಬಗ್ಗೆ ಹೇಳುತ್ತ "ಅವರೊಬ್ಬ ದೊಡ್ಡ ಸರಕಾರಿ ಅಧಿಕಾರಿಗಳಂತೆ ಕಾಣದೆ ಒಬ್ಬ ಹಳೇ ಪದ್ಧತಿಯ ಬಣಜಿಗನಂತೆ ಕಾಣುತ್ತಿದ್ದರು"[೩] ಎಂದಿರುವ ಮಾತುಗಳು ಇಲ್ಲಿ ತುಂಬಾ ಗಮನಾರ್ಹವೆನಿಸುತ್ತವೆ. ಚೆನ್ನಬಸಪ್ಪನವರ ಉಡುಗೆ-ತೊಡುಗೆಗಳಿಗಿಂತಲೂ ವಯಸ್ಸಿಗೆ ಮೀರಿದ ಪ್ರಬುದ್ಧತೆ, ಶಿಸ್ತು, ನಿಯಮಿತತನ, ಅಚ್ಚುಕಟ್ಟುತನ, ನಿರಾಡಂಬರತೆ ಅವರ ವ್ಯಕ್ತಿತ್ವದಲ್ಲಿ ಒಡೆದು ತೋರುವ ಪ್ರವೃತ್ತಿಗಳಾಗಿದ್ದವು. ಚದುರಂಗದ ಮೇಲೆ (ಚೆಸ್ ಮೇಲೆ) ಅವರಿಗೆ ವಿಶೇಷ ಪ್ರೀತಿಯಿತ್ತು.

---

೨. ಸುಬ್ಬಣ್ಣ ಕೆ.ವಿ.: ಸಂಕ್ರಮಣ, ಶ್ರೇಷ್ಠತೆಯ ವ್ಯಸನ, ಪುಟ. ೬೬.

೩. ಕೈ.ವಾ. ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು, ಪುಟ. ೪೧.

ಅಷ್ಟೇ ಅಲ್ಲ ಅದರಲ್ಲಿ ಅವರು ಸಾಕಷ್ಟು ಚತುರರೂ ಆಗಿದ್ದರು. ಊಟದ ಬಗ್ಗೆಯಂತೂ ಅವರಿಗೆ ಹೆಚ್ಚು ಹಪಾಹಪಿ ಇರಲಿಲ್ಲ. ಸಂಚಾರದಲ್ಲಿದ್ದಾಗ ರುಚಿರುಚಿಯಾದ ಪಕ್ವಾನ್ನಗಳನ್ನು ಅವರು ಎಂದೂ ಇಚ್ಛಿಸುತ್ತಿದ್ದಿಲ್ಲ. ತಂಗಳ ರೊಟ್ಟಿಯನ್ನು ಎಲ್ಲಿಯಾದರೂ ಹಳ್ಳದ ಅಥವಾ ಭಾವಿಯ ದಂಡೆಯ ಮೇಲೆ ಕುಳಿತು ತಿನ್ನುವುದಕ್ಕೆ ಅವರು ಹೆಚ್ಚು ಅಪೇಕ್ಷೆ ಪಡುತ್ತಿದ್ದರು. ಈ ಎಲ್ಲ ಅಂಶಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಚಿಂತಿಸುವಾಗ ಅವರ ನಿಷ್ಕಳಂಕ ಜೀವನದ ಸರಳ ಸಾತ್ವಿಕ ರೂಪ ಕಣ್ಣಿಗೆ ಕಟ್ಟುತ್ತದೆ.

ಪ್ರಸ್ತುತ 'ವ್ಯಕ್ತಿವಿಶಿಷ್ಟ'ವಾದ ಈ ಅವರ ವ್ಯಕ್ತಿತ್ವ; ಅವರ ಸಾರ್ವಜನಿಕ ಜೀವನದಲ್ಲಿ ಪ್ರಾಸಂಗಿಕವಾಗಿ ಇಂಬುಪಡೆಯುತ್ತ ಅರಳಿನಿಂತಿರುವುದನ್ನು ಹಲವಾರು ನಿದರ್ಶನಗಳಿಂದ ಕಂಡುಕೊಳ್ಳಲು ಸಾಕಷ್ಟು ಅವಕಾಶವುಂಟು. ಶ್ರೀ ಫ.ಗು.ಹಳಕಟ್ಟಿಯವರು ಚೆನ್ನಬಸಪ್ಪನವರ ವ್ಯಕ್ತಿತ್ವವನ್ನು ಸಂಕ್ಷಿಪ್ತವಾಗಿ ಹೀಗೆ ವ್ಯಾಖ್ಯಾನಿಸಿದ್ದಾರೆ : "ಚೆನ್ನಬಸಪ್ಪನವರು ಅತ್ಯಂತ ನೈತಿಕ ಧೈರ್ಯವುಳ್ಳವರಾಗಿದ್ದರು. ಯಾವ ಕಾಲದಲ್ಲೂ ಅವರಿಗೆ ಭೀತಿ ಎಂಬುದು ಏನೂ ಇರಲಿಲ್ಲ. ತೇಜಪುಂಜವಾದ ಈ ವರ್ತನೆಯು ಅವರ ಸ್ವಭಾವದಲ್ಲಿ ಒಡೆದು ಕಾಣುವಂತೆ ಇದೆ. ಒಬ್ಬ ಮನುಷ್ಯನು ವಿದ್ವಾಂಸನೂ, ದೊಡ್ಡ ಅಧಿಕಾರಿಯೂ ಶ್ರೀಮಂತನೂ ಇರಬಹುದು. ಆದರೆ ಅವನಲ್ಲಿ ಈ ಬಗೆಯ ನೈತಿಕ ಧೈರ್ಯವಿಲ್ಲದಿದ್ದರೆ ಅವನಿಂದ ದೊಡ್ಡ ಕಾರ್ಯಗಳಾಗವು. ಈ ಗುಣವು ಬರಬೇಕಾದರೆ ಅವನಲ್ಲಿ ಸತ್ಯದ ಬಗ್ಗೆ ನಿಷ್ಕಪಟವಾದ ಪ್ರೀತಿಯು ಬೇಕು. ಮತ್ತು ಆ ಸತ್ಯದ ಪ್ರಸಾರದ ಬಗ್ಗೆ ಭೀತಿಯುಳ್ಳವನಾಗದೆ ಅದಕ್ಕಾಗಿ ಹಿಂಸಿಸಲ್ಪಡಲು ಸಿದ್ಧನಿರಬೇಕು. ಇಂಥವನು ಯಾವ ಸ್ಥಿತಿಯಲ್ಲಿದ್ದರೂ ಅವನ ವರ್ಚಸ್ಸು ಎಲ್ಲ ಜನರ ಮೇಲೂ ಉಳಿಯುವುದು. ಇವೆಲ್ಲ ಗುಣಗಳು ಚೆನ್ನಬಸಪ್ಪನವರಲ್ಲಿ ಸಂಪೂರ್ಣವಾಗಿದ್ದವೆಂಬುದು ಅವರ ಅನೇಕ ಪ್ರಸಂಗಗಳಲ್ಲಿಯ ವರ್ತನೆಯಿಂದ ವಾಚಕರಿಗೆ ತಿಳಿದುಬರುವಂತೆ ಇದೆ".[೪] ಈ ಮಾತುಗಳು ಚೆನ್ನಬಸಪ್ಪನವರ ಸಮಗ್ರವ್ಯಕ್ತಿತ್ವವನ್ನು ಕಟ್ಟಿ ಕೊಡಲಾರವಾದರೂ ಅವರ ವ್ಯಕ್ತಿತ್ವದ ಅಭ್ಯಾಸಕ್ಕೆ ಪೂರಕವಾದ ಕೆಲವು ಸೂಚನೆಗಳನ್ನಂತೂ ಖಂಡಿತವಾಗಿಯೂ ನೀಡುತ್ತದೆ. ಧಾರ್ಮಿಕವಿರಲಿ, ಸಾಮಾಜಿಕವಿರಲಿ, ಅಥವಾ ಅದು ಆಡಳಿತಾತ್ಮಕವೇ ಆಗಿರಲಿ ಇಲ್ಲೆಲ್ಲ ಡೆಪ್ಯೂಟಿಯವರ ತಾತ್ವಿಕ ನಿಲುವು ಅತ್ಯಂತ ಅಚಲ ಹಾಗೂ ಭದ್ರವಾದುದಾಗಿತ್ತೆಂಬುದಕ್ಕೆ ಅವರು ಹಲವು ಸಂದರ್ಭಗಳಲ್ಲಿ ಕಟ್ಟಿಕೊಂಡ ನೈಷ್ಠುರ್ಯವೇ ಪ್ರಮಾಣ :

ಒಮ್ಮೆ ಧಾರವಾಡದಲ್ಲಿ ತೋಳಮಟ್ಟಿ ಸ್ವಾಮಿರಾಯರೆಂಬ ಒಬ್ಬ ಪ್ರಸಿದ್ಧ ಬ್ರಾಹ್ಮಣ ವಕೀಲರ ಮನೆಯಲ್ಲಿ ಒಂದು ಲಗ್ನಸಮಾರಂಭವು ತುಂಬಾ ವೈಭವಪೂರ್ಣವಾಗಿ ಜರುಗಿತು. ಈ ಶುಭಕಾರ್ಯದ ನಿಮಿತ್ತ ಉತ್ತರಾದಿಮಠದ ಸ್ವಾಮೀಜಿಯವರೂ, ಅವರೊಂದಿಗೆ ಹಲವು ಪಂಡಿತರೂ, ಶಾಸ್ತ್ರಿಗಳೂ ಬಂದಿದ್ದರು. ಈ ಸುದ್ದಿ ತಿಳಿದ ಚೆನ್ನಬಸಪ್ಪನವರು ೧. ದೇವರ ಅಸ್ತಿತ್ವ, ೨. ದೇವರ ನಾಸ್ತಿತ್ವ, ೩. ಜಗತ್ತಿನ ಸತ್ಯಜ್ಞಾನ ಸಿದ್ಧ ಮಾಡಿತೋರಿಸುವುದು, ೪.ನ್ಯಾಯ ಶಾಸ್ತ್ರದೊಳಗಿನ ಶಬ್ದ ಪ್ರಮಾಣವನ್ನು ಸಿದ್ಧ ಮಾಡುವುದು - ಈ ನಾಲ್ಕು ವಿಷಯಗಳನ್ನು ಕುರಿತು ಪಂಡಿತರೊಂದಿಗೆ ಚರ್ಚಿಸಲು ಅಪೇಕ್ಷಿಸಿದರು. ಆ ಬಗ್ಗೆ ಒಂದು ಪ್ರಕಟಣೆಯನ್ನೂ ಕೊಟ್ಟರು. ಆ ಘಟನೆ ಶಾಲಾಪತ್ರಕದಲ್ಲಿ ಹೀಗೆ ಪ್ರಸಿದ್ಧವಾಗಿದೆ: "ಧಾರವಾಡದಲ್ಲಿ ಶ್ರೀಮಂತ ವೈಷ್ಣವ ಸ್ವಾಮಿಗಳು ಬಂದು ಈಗ ಸುಮಾರು ಮೂರು ತಿಂಗಳಾಯಿತು. ಅವರು ಈ ತಿಂಗಳಲ್ಲಿ ಇಲ್ಲಿ ಮಹಾ ಸಮಾರಾಧನೆಯನ್ನು ಮಾಡಿದ್ದರಿಂದ

೪. ೩. ಕೈ.ವಾ. ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು, ಪುಟ. ೩೮.

ಬಹುಜನ ಪಂಡಿತರು ಕೂಡಿದ್ದರು. ಈ ಸಂಧಿಯನ್ನು ನೋಡಿ ರಾ.ಸಾ.ಚನ್ನಬಸಪ್ಪಣ್ಣನವರು ಕೆಳಗೆ ಬರೆದಂತೆ ಆ ಪಂಡಿತರಿಗೂ ಸ್ವಾಮಿಗಳಿಗೂ ತಿಳಿಸಿದರು.

"ಇಲ್ಲಿ ಕೂಡಿದ ಪಂಡಿತರ ಕೈಯಲ್ಲಿ ನನ್ನ ಅಜ್ಞಾನವನ್ನು ಕಳಕೊಳ್ಳಬೇಕೆಂಬ ಅಪೇಕ್ಷೆಯಿಂದ ಪಾಂಡುರಂಗನ ದೇವಾಲಯದಲ್ಲಿ ನಾಳೆ ಆ ಪಂಡತರ ಸಭೆ ಕೂಡಬೇಕೆಂದು ಬಯಸುತ್ತೇನೆ. ಆ ಸಭೆಯಲ್ಲಿ ನಾನು ಕೇಳಿದ ಪ್ರಶ್ನೆಗಳಿಗೆ ಸಮರ್ಪಕವಾಗಿ ಉತ್ತರ ಹೇಳಿದವರಿಗೆ ಇನಾಮು ಗೊತ್ತು ಮಾಡಿದ್ದು ಹ್ಯಾಗೆಂದರೆ :

೧. ಜಗತ್ಮದ ಸತ್ಯಜ್ಞಾನವಾಗುತ್ತಿದ್ದರೆ ಅದನ್ನು ಸಿದ್ಧ ಮಾಡಿದವರಿಗೆ ರೂ. ೫೦

೨. ನ್ಯಾಯಶಾಸ್ತ್ರದೊಳಗಿನ ಶಬ್ದ ಪ್ರಮಾಣವನ್ನು ಸಿದ್ಧಮಾಡಿದವರಿಗೆ ರೂ. ೧೦೦

೩. ದೇವರ ಅಸ್ತಿತ್ವವನ್ನು ಸಿದ್ಧಮಾಡಿದವರಿಗೆ ರೂ. ೧೫೦

೪. ದೇವರ ನಾಸ್ತಿತ್ವವನ್ನು ಸಿದ್ಧಮಾಡಿದವರಿಗೆ ರೂ. ೩೦೦

ಆದರೆ ಆ ಪಂಡಿತರು ಈ ಕೆಲಸಕ್ಕೆ ಕೈಹಾಕುವುದು ತಕ್ಕದ್ದಲ್ಲೆಂದು ಹೇಳಿ ಸಭೆಗೆ ಬರಲಿಲ್ಲ".[೫]

ಈ ಪ್ರಸಂಗ ಕೆಲವರಿಗೆ 'ವಾದಕ್ಕಾಗಿ ವಾದ' ಎನಿಸಬಹುದು. ಆದರೆ ಇದರ 'ವಸ್ತುಸ್ಥಿತಿ' ಬೇರೆಯೇ ಎಂಬುದನ್ನು ನಾವು ಮನಗಾಣಬೇಕಾಗಿದೆ. ಕೆಲವು ಜನ ಪಾಂಡಿತ್ಯದ ಸೋಗುಹಾಕಿಕೊಂಡು ಅಜ್ಞ, ಮುಗ್ಧಜನರ ಶೋಷಣೆ ಮಾಡುವುದನ್ನು ಅವರು ಎಂದೂ ಸಹಿಸುತ್ತಿರಲಿಲ್ಲ. ಅಂಥವರ ಬಣ್ಣವನ್ನು ಬಯಲಿಗೆಳೆದು, ಅವರ ನೈಜಸ್ವರೂಪವನ್ನು ಜನರಿಗೆ ತೋರಿಸುತ್ತಿದ್ದರು. 'ಟೊಳ್ಳುತನ' ಯಾವುದೇ ಮಟ್ಟದಲ್ಲಿರಲಿ ಅದು ತುಂಬಾ ಅಪಾಯಕಾರಿ ಎಂಬುದನ್ನು ಅವರು ಎಂದೋ ಮನಗಂಡಿದ್ದರು.

ಚೆನ್ನಬಸಪ್ಪನವರಲ್ಲಿ ಯಾವಾಗಲಾದರೂ ಜ್ಞಾನದ ಹಸಿವು ಇದ್ದೇ ಇರುತ್ತಿತ್ತು. ಅನೇಕ ಮೂಲಗಳಿಂದ ಈ ಹಸಿವನ್ನು ಹಿಂಗಿಸಿಕೊಳ್ಳಲು ಅವರು ಒಂದೇ ಸವನೆ ತವಕಿಸುತ್ತಿದ್ದರು. ಬಿಡುವು ದೊರೆತಾಗಲೆಲ್ಲ ಓದಿ ಅನೇಕ ವಿಷಯಗಳನ್ನು ಗ್ರಹಣ ಮಾಡಿಕೊಳ್ಳುತ್ತಿದ್ದರಷ್ಟೇ ಅಲ್ಲ, ಹಲವು ವರ್ಷಗಳ ವರೆಗೆ ಸ್ವತಃ ತಮ್ಮ ಬಳಿಯಲ್ಲಿ ಒಬ್ಬ ಪಂಡಿತನನ್ನು ಇಟ್ಟುಕೊಂಡು ಹಿಂದೂ ಧರ್ಮಶಾಸ್ತ್ರಗಳನ್ನು ಅಭ್ಯಸಿಸಿದರು. ತಮಗಿಂತ ಬಲ್ಲವರು ಯಾರೇ ಆಗಿರಲಿ, ಯಾವುದೇ ಜಾತಿಯವರಾಗಿರಲಿ ಅವರ ಬಳಿಗೆ ಹೋಗಿ ಅವರಲ್ಲಿದ್ದ ಜ್ಞಾನಸಂಪಾದನೆ ಮಾಡಿಕೊಳ್ಳುತ್ತಿದ್ದರು.

ಯಾರೋ ಒಬ್ಬ ಸ್ನೇಹಿತರು ಒಂದು ಸಲ ಚೆನ್ನಬಸಪ್ಪನವರನ್ನುದ್ದೇಶಿಸಿ "ಜನರು ನಿಮಗೆ ನಾಸ್ತಿಕರೆನ್ನುತ್ತಾರೆ ಇದರ ಕಾರಣವೇನು?" ಎಂದು ಪ್ರಶ್ನಿಸಿದರಂತೆ. ಆಗ ಡೆಪ್ಯೂಟಿಯವರು ಆ ಅಭಿಪ್ರಾಯವನ್ನು ಒಪ್ಪಿಕೊಳ್ಳುತ್ತಾ ಆ ಜನಾರೋಪವನ್ನು ವಿಶ್ಲೇಷಿಸಿದ ರೀತಿ ಅತ್ಯಂತ ತರ್ಕಬದ್ಧವಾದುದು. ಅವರು ಹೇಳಿದ್ದೇನೆಂದರೆ; "ಹೌದು ನಾನು ನಾಸ್ತಿಕನೇ ಯಾಕೆಂದರೆ, ದೇವರ ಅಸ್ತಿತ್ವವನ್ನೂ ಅವನ ಅಗಾಧವಾದ ಮಹಿಮೆಯನ್ನೂ ತಿಳಿದವರಷ್ಟೇ ಆಸ್ತಿಕರು, ಇನ್ನುಳಿದವರೆಲ್ಲ ನಾಸ್ತಿಕರೇ ಸರಿ. ಈ ಲೆಕ್ಕದಲ್ಲಿ ನಾನೂ ನಾಸ್ತಿಕನೇ" ಎಂದು ಹೇಳಿ

೫. ಕನ್ನಡ ಶಾಲಾ ಪತ್ರಕವು: ಪುಸ್ತಕ, ೧೫, ಸಂಚಿಕೆ ೧೦-೧೮೮೦, ಪುಟ.೨೨೧-೨೨೨.

ಅವರು ಕೊಟ್ಟ ದೃಷ್ಟಾಂತ ಅವರ ವ್ಯಕ್ತಿತ್ವ-ಧೋರಣೆಗಳನ್ನು ಪರಿಶೋಧಿಸಿಕೊಡುತ್ತದೆ. ಈ ವಿಚಾರದಿಂದ ಚೆನ್ನಬಸಪ್ಪನವರು ಒಬ್ಬ 'ಸಿನಿಕ್' ಆಗಿರಲಿಲ್ಲವೆಂಬುದಂತೂ ಅಪ್ಪಟ ಸತ್ಯ.

ಅವರು ಯಾವುದೇ ವಿಚಾರವನ್ನು ಅದು ಎಷ್ಟೇ ಜನಮನ್ನಣೆ ಪಡೆದುದಾಗಿರಲಿ, ಎಂದೂ ಅದನ್ನು ಅಂಧಶ್ರದ್ಧೆಯಿಂದ ಸ್ವೀಕರಿಸುತ್ತಿರಲಿಲ್ಲ. 'ಜಿಜ್ಞಾಸೆ' ಅವರ ಮೂಲಭೂತ ಗುಣಗಳಲ್ಲಿ ಒಂದಾಗಿತ್ತು. ಇದಕ್ಕೆ ಅವರ ಪಾಶ್ಚಾತ್ಯಶಿಕ್ಷಣ, ಓದಿನಬಲ, ಪುಣೆಯ ವಿಚಾರವಾದಿಗಳ ಸಂಪರ್ಕ ಕಾರಣವಾಗಿರಬಹುದು. ಅವರ ಗ್ರಂಥಭಂಡಾರವೂ ದೊಡ್ಡದಾಗಿತ್ತು. ಹೀಗಾಗಿ ಗೊಡ್ಡು ಆಚಾರಗಳನ್ನು ಕಂಡರಂತೂ ಅವರು ತುಂಬಾ ಸಿಡಿಮಿಡಿಗೊಳ್ಳುತ್ತಿದ್ದರು. ಒಂದು ಸಲ ಒಬ್ಬ (ಆಚಾರಿಯ ಕೂಡ) ಶಾಸ್ತ್ರಿಗಳ ಕೂಡ ಸಹಭೋಜನ ಮಾಡುತ್ತಿದ್ದರು. ಊಟದ ಮಧ್ಯೆ ಹತ್ತಿರವಿದ್ದ ತಂಬಿಗೆಯನ್ನು ಎಡಗೈಯಿಂದ ಎತ್ತಿ ನೀರು ಕುಡಿಯತೊಡಗಿದರು. ಇದನ್ನು ಕಂಡ ಶಾಸ್ತ್ರಿಗಳು ಗಾಬರಿ ಬಿದ್ದು "ಅಣ್ಣನವರೇ ಎಡಗೈಯನ್ನಷ್ಟೇ ಉಪಯೋಗಿಸಿ ನೀರು ಕುಡಿದರೆ ಅದು ಶರೆ ಕುಡಿದ ಹಾಗಾಗುತ್ತದೆ. ಅದಕ್ಕೆ ಬಲಗೈ ಹಚ್ಚಿ ಕುಡಿಯತಕ್ಕದ್ದು" ಎಂದು ಸೂಚಿಸಿದರು. ಆಗ ಚೆನ್ನಬಸಪ್ಪನವರು ಒಮ್ಮೆಲೇ - "ಅದು ಹಾಗೆ ಹೇಗಾದೀತು? ಒಂದು ತಂಬಿಗೆಯಲ್ಲಿ ಶರೆ ಹಾಕಿ ಬಲಗೈಯಿಂದ ಕುಡಿದರೆ ನೀರು ಕುಡಿದಂತೆ ಆಗುವುದೋ ಹ್ಯಾಗೆ?" ಎಂದು ತಿರುಗಿ ಪ್ರಶ್ನೆ ಹಾಕಿದರು. ಶಾಸ್ತ್ರಿಗಳು ಕಕ್ಕಾವಿಕ್ಕಿಯಾಗಿ 'ಅದು ಹ್ಯಾಗಾದೀತು?' ಎಂದರು. ಮತ್ತೆ ಚೆನ್ನಬಸಪ್ಪನವರು 'ಎಡಗೈಯಿಂದ ಕುಡಿದರೇನು? ಬಲಗೈಯಿಂದ ಕುಡಿದರೇನು? ನೀರು ಯಾವಾಗಲೂ ನೀರೇ, ಶರೆ ಯಾವಾಗಲೂ ಶರೆಯೇ' ಎಂದು ಶಾಸ್ತ್ರಿಗಳ ಬಾಯಿ ಮುಚ್ಚಿಸಿದರು. ನಮಗಿಲ್ಲಿ ಮುಖ್ಯವಾಗುವುದು ಬರೀ ತರ್ಕಸರಣಿಯಲ್ಲ. ಅದನ್ನು ಮೀರಿದ ಸಮಯಪ್ರಜ್ಞೆ, ನಿರ್ದಾಕ್ಷಿಣ್ಯ ಮನೋವೃತ್ತಿ, ವಾಸ್ತವದ ಪರಿಜ್ಞಾನ. ಬಹುಮಂದಿಯ ವ್ಯಕ್ತಿತ್ವ ಕರಗಿ ನೀರಾಗುವುದು ಇಂಥ ಪೇಚಿನ ಪ್ರಸಂಗಗಳಲ್ಲಿಯೇ; ಇಬ್ಬಂದಿತನ ಬೆಳೆದು ಆತ್ಮವಂಚನೆಗೆ ಬಲಿಯಾಗುವುದು ಇಂಥಲ್ಲಿಯೇ ಎಂದು ಹೇಳಿದರೂ ತಪ್ಪಾಗಲಿಕ್ಕಿಲ್ಲ.

ಇನ್ನೊಮ್ಮೆ ಕೆಲವು ಕ್ರಿಶ್ಚನ್ ಪಾದ್ರಿಗಳು, ಮುಸಲ್ಮಾನಧರ್ಮದ ಮೌಲ್ವಿಗಳು "ತಮ್ಮ ತಮ್ಮ ಧರ್ಮಗ್ರಂಥಗಳು(ಬೈಬಲ್ ಮತ್ತು ಕುರಾನಗಳು) ದೇವಪ್ರಣೀತವಾದವುಗಳು, ಅವು ಮಾನವ ನಿರ್ಮಿತವಲ್ಲ" ಎಂಬ ಅವೈಜ್ಞಾನಿಕವಾದ ವಿಚಾರವನ್ನು ಜನರ ತಲೆಯಲ್ಲಿ ಬಿಂಬಿಸಲು ಪ್ರಯತ್ನಿಸುತ್ತಿದ್ದರು. ಹೀಗಿರುವಾಗ ಒಂದು ಸಲ ಧಾರವಾಡದಲ್ಲಿ ಆಗ ಪ್ರಸಿದ್ಧ ಪಾದ್ರಿಗಳಾಗಿದ್ದ ಝಿಗಲ್‌ರ ದೊರೆಗಳ ಬಂಗ್ಲೆಯಲ್ಲಿ ಮುಸಲ್ಮಾನ ಹಾಗೂ ಕ್ರಿಶ್ಚನ್ ಈ ಎರಡೂ ಧರ್ಮೀಯರ ದೊಡ್ಡ ಸಭೆಯು ನೆರೆದಿತ್ತು. ಈ ಅವಕಾಶವನ್ನು ಚೆನ್ನಬಸಪ್ಪನವರು ಚೆನ್ನಾಗಿ ಸದುಪಯೋಗ ಪಡಿಸಿಕೊಂಡರು. ಅವರು ಸಭೆಯಲ್ಲಿ ಮೂಲಭೂತವಾದ ಒಂದು ಪ್ರಶ್ನೆಯನ್ನೆತ್ತಿ "ಒಂದು ವೇಳೆ ನಿಮ್ಮ ನಿಮ್ಮ ಧರ್ಮಗ್ರಂಥಗಳು ದೇವರಿಂದಲೇ ನಿರ್ಮಿತವಾದವುಗಳೆಂದು ಸಿದ್ಧಮಾಡಿಕೊಟ್ಟರೆ ಆ ಧರ್ಮಕ್ಕೆ ಮತಾಂತರ ಹೊಂದುವೆನೆಂದರು" ಆದರೆ ಯಾರಿಗೂ ಈ ಸವಾಲನ್ನು ಎದುರಿಸಲಾಗಲಿಲ್ಲ. ಮತ್ತೊಂದು ಸಲ ಯಾರೋ ಒಬ್ಬರು "ಪೃಥ್ವಿಯಲ್ಲಿಯ ಧರ್ಮಗಳಲ್ಲಿ ಯಾವುದು ಸತ್ಯವಾದುದು" ಎಂದು ಕೇಳಲು ಚೆನ್ನಬಸಪ್ಪನವರು "ಅವೆಲ್ಲವೂ ಸಣ್ಣದೊಡ್ಡ ತೂತುಗಳುಳ್ಳ ಡೋಣಿಗಳಂತೆ ಇವೆ" ಎಂದು ಅತ್ಯಂತ ಮಾರ್ಮಿಕವಾಗಿ ಉತ್ತರಿಸಿದರಂತೆ. ಹೀಗೆ ಎಷ್ಟೋ ಸಲ ಅವರು ಕಠೋರ ಸತ್ಯವನ್ನೇ ಆಡುತ್ತಿದ್ದರು. ತಾವು ಹೇಳುವುದು 'ಅಪ್ರಿಯ ಸತ್ಯ' ಎಂದು ಅವರಿಗೆ ಗೊತ್ತಿದ್ದೂ ಅದನ್ನು ಹೇಳಲು ಅವರು ಎಂದೂ ಹಿಂಜರಿದವರಲ್ಲ. ಇಂಥ ದಿಟ್ಟತನ ಅವರ ವ್ಯಕ್ತಿತ್ವದ ಒಂದು ಭಾಗ.

ಧರ್ಮ 'ಅಫೀಮ್'ದಂತೆ ದುರ್ಬಳಕೆಯಾಗುವುದನ್ನು ಚೆನ್ನಬಸಪ್ಪನವರು ಎಂದೂ ಸಹಿಸುತ್ತಿರಲಿಲ್ಲ. ಭಕ್ತಿಯ ಆವೇಶದಲ್ಲಿ ಕೊಚ್ಚಿಕೊಂಡು ಹೋಗುವುದನ್ನು ಅವರು ಒಪ್ಪುತ್ತಿರಲಿಲ್ಲ. ಯಾರೇ ಆಗಲಿ, ಒಂದು ನಿರ್ಧಾರಕ್ಕೆ ಬರುವಾಗ ಅದು ಪ್ರಜ್ಞಾಪೂರ್ವಕವಾಗಿರಬೇಕು. ಮತ್ತು ಸ್ವಯಂಪ್ರೇರಿತವಾಗಿರಬೇಕೆಂಬ ಧೋರಣೆಯುಳ್ಳವರು ಅವರಾಗಿದ್ದರು. ಇದರ ಒಂದು ಪ್ರತ್ಯಕ್ಷದರ್ಶನ ಹುಬ್ಬಳ್ಳಿ ಹತ್ತಿರವಿರುವ ಉಣಕಲ್ ಗ್ರಾಮದಲ್ಲಿ ಆಯಿತು. ಅಲ್ಲಿ ಅನೇಕ ಜನ ಕ್ರಿಶ್ಚನ್‌ಧರ್ಮಕ್ಕೆ ಸೇರಲಿದ್ದಾರೆಂಬ ಸಂಗತಿ ಚೆನ್ನಬಸಪ್ಪನವರಿಗೆ ಗೊತ್ತಾಯಿತು. ಆಗ ಅಲ್ಲಿಗೆ ಧಾವಿಸಿ ಹೋಗಿ ಜನಕ್ಕೆ ತಿಳಿಸಿ ಹೇಳಿದರು. ಅವರ ಮನಸ್ಸಿಗೆ ಕವಿದಿದ್ದ ಭ್ರಮೆಯನ್ನು ಸರಿಸಿದರು. ಜನ ಆವೇಶದಲ್ಲಿ ತೆಗೆದುಕೊಂಡ ನಿರ್ಧಾರವನ್ನು ಬದಲಿಸಿದರು.[೬] ಇವೆಲ್ಲ ಚಿಕ್ಕಪುಟ್ಟ ಘಟನೆಗಳೆನಿಸಬಹುದು. ಆದರೆ ಚೆನ್ನಬಸಪ್ಪನವರ ವ್ಯಕ್ತಿತ್ವದರ್ಶನಕ್ಕೆ ಇವು ಉತ್ತಮ ಸಾಧನಗಳಾಗಿವೆ. ಜನ ಎಲ್ಲ ದೃಷ್ಟಿಯಿಂದಲೂ ಆರೋಗ್ಯಪೂರ್ಣವಾಗಿ ಬದುಕಬೇಕೆಂಬ ಬಲವಾದ ಆಸೆ ಅವರದಾಗಿತ್ತು. ಅವರಿಗೆ ಎಷ್ಟೊಂದು ಸಾಮಾಜಿಕ ಕಳಕಳಿ ಇತ್ತೆಂದರೆ, ತಮ್ಮ ಸಮ್ಮುಖದಲ್ಲಿ ನಡೆವ ಒಂದು ಚಿಕ್ಕ ವ್ಯಾಜ್ಯಕ್ಕೂ ಪ್ರತಿಕ್ರಿಯಿಸದೆ ಇರುತ್ತಿರಲಿಲ್ಲ. ಎಲ್ಲದಕ್ಕೂ ಉದಾಸೀನ ಮಾಡುತ್ತ ಹೋಗುವುದರ ಕೇಡು ಏನೆಂಬುದು ಎಷ್ಟೋ ಸಲ ಅವರ ಅನುಭವಕ್ಕೆ ಬಂದ ವಿಷಯವಾಗಿತ್ತು. ಹೀಗೇ ಒಂದು ದಿನ ತಮ್ಮ ಮನೆಯ ಕಟ್ಟೆಯ ಮೇಲೆ ಕುಳಿತಿದ್ದಾಗ ಇಬ್ಬರು ಹೆಂಗಸರು ಜಗಳಾಡುತ್ತ ಒಬ್ಬರನ್ನೊಬ್ಬರು ವಾಚಾಮಗೋಚರವಾಗಿ ಬಯ್ಯುತ್ತಿದ್ದುದನ್ನು ಕೇಳಿದರು. ಆಗ ಅವರಿಬ್ಬರನ್ನೂ ಕರೆದು "ನಿಮ್ಮಲ್ಲಿ ಇರುವ ಅತೀ ಹೆಚ್ಚಿನ ಬೈಗುಳನ್ನು ಪರಸ್ಪರರು ಬೈಯಿರಿ. ಆಗ ಮಾತ್ರ ನಿಮ್ಮ ನಿಮ್ಮ ಬೈಗುಳದ ಬಂಡವಲು ಏನೆಂದು ಗೊತ್ತಾಗುತ್ತದೆ" ಎಂದು ಚುಚ್ಚಿದರು. ಇದರಿಂದ ಇಬ್ಬರೂ ನಾಚಿಗೆಪಟ್ಟು ಜಗಳ ನಿಲ್ಲಿಸಿ ಮನೆಗೆ ಹೋದರಂತೆ. ಇಲ್ಲಿ ಚೆನ್ನಬಸಪ್ಪನವರು ಆ ಹೆಂಗಸರನ್ನು ಕರೆದು ಬಯ್ದು ಕಳಸಿದ್ದರೆ ಅದು ಹೆಚ್ಚಿನ ಪರಿಣಾಮ ಬೀರುತ್ತಿರಲಿಲ್ಲವೇನೋ. ಆದರೆ ಅವರು ಸಾಂದರ್ಭಿಕವಾಗಿ ಬಳಸಿದ 'ಕಟಕಿ' ಚುರುಕಾದ ಪರಿಣಾಮ ಬೀರಿರಬೇಕೆಂಬುದರ ಬಗ್ಗೆ ಸಂದೇಹವೇ ಇಲ್ಲ.

ಇನ್ನು ಅವರ ತ್ಯಾಗ, ಸಮಾಜಬಾಂಧವರ ಶಿಕ್ಷಣದ ಬಗೆಗಿನ ಕಳಕಳಿ, ಕೈಕೊಂಡ ಕೆಲಸದ ಬಗ್ಗೆ ಇರುವ ನಿಷ್ಠೆ, ಆತ್ಮವಿಶ್ವಾಸ, ಸಂದರ್ಭವನ್ನು ಸದ್ವಿನಿಯೋಗ ಮಾಡಿಕೊಳ್ಳುವ ಹಂಬಲ, ಗುಣಾತ್ಮಕವಾದ ಕೆಲಸಗಳಿಗಾಗಿ ಎಂಥವರನ್ನೂ ಎದುರು ಹಾಕಿಕೊಳ್ಳುವ ಜಿಗುಟುತನ ಇತ್ಯಾದಿಗಳಿಗೆಲ್ಲ ಅವರು ಬಹುದೊಡ್ಡ ನಿದರ್ಶನ.

ಜಾತ್ರೆ-ಉತ್ಸವ-ಮೋಜು-ಮಜಲು-ಅನ್ನಸಂತರ್ಪಣೆ ಇತ್ಯಾದಿಗಳ ಹೆಸರಿನಲ್ಲಿ ನಡೆಯುತ್ತಿದ್ದ ದುಂದು ವೆಚ್ಚವನ್ನು, ಕಲಿಯುವ ಬಡವಿದ್ಯಾರ್ಥಿಗಳ ಅನ್ನ-ವಸತಿಗಳ ಸಲುವಾಗಿ ತಿರುಗಿಸಿ ಅದು ನಿಜವಾದ ಅರ್ಥದಲ್ಲಿ 'ಸತ್ಪಾತ್ರಕ್ಕೆ' ಸಲ್ಲುವಂತೆ ಮಾಡಿದ ಶ್ರೇಯಸ್ಸು ಚೆನ್ನಬಸಪ್ಪನವರಿಗೆ ಸಲ್ಲಬೇಕು. ಇಲ್ಲಿ ನಮಗೆ ಅವರು ಎಷ್ಟೊಂದು ಪ್ರಗತಿಪರರೆ ನಿಸುತ್ತಾರೆಂದರೆ, ಇಪ್ಪತ್ತೊಂದನೇ ಶತಮಾನದಲ್ಲಿಯೂ ಪ್ರಸ್ತುತ 'ದುಂದುವೆಚ್ಚ'ಗಳಿಗಾಗಿ ಹರಿದು ಹೋಗುವ ಹಣವನ್ನು ದುರ್ಬಳಕೆಯಾಗದಂತೆ ಸದ್ವಿನಿಯೋಗ ಮಾಡಿಕೊಳ್ಳಲು ಒಂದು ಸಂಘಟಿತ ಹೋರಾಟ ಬೇಕೆನಿಸುತ್ತದೆ. ಚೆನ್ನಬಸಪ್ಪನವರು ಈ ನಿಟ್ಟಿನಲ್ಲಿ ವ್ಯಕ್ತಪಡಿಸಿದ ಪ್ರತಿಭಟನೆ ಬಂಡಾಯದ ಒಂದು ಅರ್ಥಪೂರ್ಣ ಹೆಜ್ಜೆಯೆಂದೇ ಹೇಳಬೇಕಾಗುತ್ತದೆ.

---

೬. ಬರಗಾಲದಿಂದಾಗಿ ಜನ ಈ ನಿರ್ಧಾರಕ್ಕೆ ಬಂದಿರುವರೆಂದು ತಿಳಿದು ಅವರಿಗೆ ಆಗ ನಾಲ್ಕೈದುನೂರು ರೂಪಾಯಿಗಳ ವರೆಗೆ ದಾನಮಾಡಿದರು.

ಮಠಸ್ಥರನ್ನು ತಮ್ಮ ಪ್ರಚಾರಕ್ಕಾಗಿ ಎದುರುಹಾಕಿಕೊಂಡಂತೆ ನಟಿಸಿದರೂ, ತೆರೆಮರೆಯಲ್ಲಿ ಹೋಗಿ ಕಾಲುಹಿಡಿಯುವ ಟೊಳ್ಳು ಬಂಡಾಯಕ್ಕೂ, ಚೆನ್ನಬಸಪ್ಪನವರು ಮಾಡಿತೋರಿಸಿದ ಅಪ್ಪಟ ಬಂಡಾಯಕ್ಕೂ ಎಷ್ಟೊಂದು ವ್ಯತ್ಯಾಸವಿದೆ ಎಂಬುದನ್ನು ಪ್ರಸ್ತುತ ಪ್ರಸಂಗದ ಹಿನ್ನೆಲೆಯಲ್ಲಿ ಯೋಚಿಸುವುದು ಅಗತ್ಯವಾಗಿದೆ. ನಿಜ ಹೇಳಬೇಕೆಂದರೆ, ಡೆಪ್ಯೂಟಿಯವರಂಥ ದೃಷ್ಟಾರರು ಸಿಗುವುದು ತುಂಬ ವಿರಳ. ಅವರಂತೆ ತಾವು ನೆಟ್ಟ ಸಾಂಸ್ಕೃತಿಕ ಸಸಿಗಳಿಗೆ ತಮ್ಮ ವೈಯಕ್ತಿಕ ಸಂಪತ್ತಿನ ತ್ಯಾಗ ಜಲ ಎರೆಯುವವರು ಇನ್ನೂ ವಿರಳವೆಂದೇ ಹೇಳಬೇಕಾಗುತ್ತದೆ. ಇಂದು ಕೇವಲ ಸಿಡಿಮದ್ದಿಗಾಗಿ ಖರ್ಚುಮಾಡಿ, ಪರಿಸರ ಮಾಲಿನ್ಯವನ್ನು ಸೃಷ್ಟಿಮಾಡುವ ಹಣವನ್ನಷ್ಟೇ ಚೆನ್ನಬಸಪ್ಪನವರು ಉಪಕ್ರಮಿಸಿದ ಯೋಜನೆಗೆ ನಾವು ಬಳಸಿಕೊಂಡರೆ ನಾಡಿನ ಶಿಕ್ಷಣರಂಗದಲ್ಲಿ ಒಂದು ಕ್ರಾಂತಿಯನ್ನೇ ಮಾಡಬಹುದು. ಲಿಂಗರಾಜರಿಗೆ ಸಂಸ್ಥಾನವಿತ್ತು, ಶಿಕ್ಷಣರಂಗಕ್ಕೆ 'ದಾನಪತ್ರ' ಬರೆದು ಅವರು ತ್ಯಾಗವೀರರಾದರು. ಡೆಪ್ಯೂಟಿಯವರಿಗೆ ಇಂಥ ಯಾವುದೇ ಸಾಂಪತ್ತಿಕ ಬಲವಿರಲಿಲ್ಲ. ಆದರೂ ಅವರು ಬದುಕಿರುವಾಗಲೇ ತ್ಯಾಗಮಾಡಿದರು. ಒಂದು ವಿದ್ಯಾರ್ಥಿನಿಲಯವನ್ನು ರಕ್ಷಿಸುವುದಕ್ಕಾಗಿ ಹೆಂಡಂದಿರ ಮೈಮೇಲಿನ ಆಭರಣಗಳನ್ನು ಮಾರಿ ಸಾಲಹರಿದರು. ಆದಕ್ಕಾಗಿ ಕೋರ್ಟಿನ ದಾವೇ ಎದುರಿಸಿದರು. ನಿಜವಾಗಿಯೂ ಈ ಮಹಾತ್ಯಾಗದ ಹಿಂದಿನ ಡೆಪ್ಯೂಟಿಯವರ ವ್ಯಕ್ತಿತ್ವ-ಧೋರಣೆಗಳನ್ನು ಅರ್ಥೈಸಿಕೊಳ್ಳುವುದೇ ಒಂದು ಸತ್ಪರಂಪರೆಗೆ ದಾರಿ ಮಾಡಿ ಕೊಟ್ಟಂತೆ. ಇಂದು ಕರ್ನಾಟಕದಾದ್ಯಂತ ಕಾಣಸಿಗುವ ವಿದ್ಯಾರ್ಥಿನಿಲಯಗಳ, ವೀರಶೈವ ಶಿಕ್ಷಣ ಸಂಸ್ಥೆಗಳ ಪರಂಪರೆಯ ಬೇರುಗಳಿರುವುದು ಚೆನ್ನಬಸಪ್ಪನವರ ಕ್ರತುಶಕ್ತಿಯಲ್ಲಿ ಎಂಬುದನ್ನು ಎಷ್ಟು ಬಾರಿ ನೆನೆದರೂ ಅದು ಸ್ಫೂರ್ತಿದಾಯಕವೇ. ಈ ಬಗ್ಗೆ ಫ.ಗು. ಹಳಕಟ್ಟಿಯವರ ವಿಚಾರವೊಂದು ಹೀಗಿದೆ:

"...... ಈ ಮೇರೆಗೆ ವಿದ್ಯಾರ್ಥಿನಿಲಯವು ನಿಂತುಹೋದದ್ದರಿಂದ, ಮುಂದೆ ಶಾಶ್ವತವಾದ ಒಂದು ಧ್ರುವನಿಧಿಯನ್ನು ಕೂಡಿಸಬೇಕೆಂಬ ವಿಚಾರಗಳು ಜನರಲ್ಲಿ ಸಹಜಿಕವಾಗಿಯೇ ಹೊರಡಹತ್ತಿದವು. ಮುಂದೆ ಸ್ವಲ್ಪ ವರ್ಷಗಳಲ್ಲಿಯೇ ಕೈ.ವಾ.ಗುರುಸಿದ್ದಪ್ಪ ಬಸವಣ್ಣೆಪ್ಪ ಗಿಲಗಂಚಿಯವರೂ, ರಾ|ಬ| ರುದ್ರಗೌಡ ಚನವೀರಗೌಡಾ ಆರಟಾಳ ಇವರೂ ಈಗಿನ ಧಾರವಾಡ 'ಲಿಂಗಾಯತ ವಿದ್ಯಾಭಿವೃದ್ಧಿ ಸಂಘ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ..... ಈ ವಿದ್ಯಾರ್ಥಿನಿಲಯವು ಮುರಿದುಹೋದರೂ ಅದರಲ್ಲಿದ್ದ ಅನೇಕ ವಿದ್ಯಾರ್ಥಿಗಳು, ಈ ಕಾಲಕ್ಕೆ ಸ್ಥಾಪಿಸಲ್ಪಟ್ಟಿದ್ದ ಬೆಳಗಾಂವ ಸರದಾರ ಹಾಯ್‌ಸ್ಕೂಲಿನಲ್ಲಿಯೂ, ಅಲ್ಲಿದ್ದ ಶಾಲೆಗಳಲ್ಲಿಯೂ ತಮ್ಮ ಅಭ್ಯಾಸವನ್ನು ಸಾಗಿಸಹತ್ತಿದರು. ಬಹುತರವಾಗಿ ಬಡವರಿದ್ದುದರಿಂದ ಅವರೆಲ್ಲ ಹೇಗಾದರೂ ಮಾಡಿ ಕಷ್ಟಪಟ್ಟು ಶಿಕ್ಷಣವನ್ನು ಸಂಪಾದಿಸಲಾರಂಭಿಸಿದರು. ಇವರಲ್ಲಿ ಅನೇಕರು ಮ್ಯಾಟ್ರಿಕ್ಯುಲೇಶನ್ನ ಮತ್ತು ಟ್ರೇನಿಂಗ ಕಾಲೇಜ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಬೇರೆ ಬೇರೆ ಖಾತೆಗಳಲ್ಲಿ ಸೇರಿಕೊಂಡರು. ಮತ್ತು ಅನೇಕರು ಶಾಲಾಧ್ಯಾಪಕರಾದರು. ಈಗಿನ ಕಾಲಕ್ಕೆ ಈ ಸಂಗತಿಗಳು ಅತ್ಯಲ್ಪವೆಂದೆನಿಸಿಕೊಳ್ಳಬಹುದು. ಆದರೆ ಈ ಮೇರೆಗೆ ಪ್ರಯತ್ನಪೂರ್ವಕವಾಗಿ ಜರುಗಿಸಲ್ಪಟ್ಟ ಸುಧಾರಣಾ ಕಾರ್ಯಗಳು ಸಮಾಜದಲ್ಲಿ ಹೊಸ ವಿಚಾರಗಳನ್ನು ಹುಟ್ಟಿಸಲಿಕ್ಕೂ, ಆತ್ಮೋನ್ನತಿಯ ಪ್ರಯತ್ನಗಳನ್ನು ಹಬ್ಬಿಸಲಿಕ್ಕೂ ಕಾರಣವಾಗುತ್ತದೆ. ಈ ಪ್ರಯತ್ನಗಳು ಆರಂಭದಲ್ಲಿ ಅತ್ಯಲ್ಪವಾಗಿ ತೋರಿದರೂ ಅವುಗಳ ಸುಪರಿಣಾಮಗಳು ಕ್ರಮೇಣ ಹಬ್ಬುತ್ತಹೋಗಿ ಮುಂದೆ ಒಂದು ಪ್ರಚಂಡ ನದಿಯಂತೆ ಪ್ರವಹಿಸತೊಡಗುವವು"[೭] - ಈ ಮಾತುಗಳು ಈಗ ನೂರಕ್ಕೆ ನೂರು ಸತ್ಯವಾಗಿ ಪರಿಣಮಿಸಿವೆ. ಇಂದು ನಾಡಿನ ಉದ್ದಗಲಕ್ಕೂ

೭. ಕೈ.ವಾ. ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು, ಪುಟ. ೩೨,೩೩.

ಬೆಳೆದು ನಿಂತಿರುವ ಶಿಕ್ಷಣ ಸಂಸ್ಥೆಗಳೂ, ಪ್ರಸಾದನಿಲಯಗಳೂ ಇದಕ್ಕೂ ಪ್ರತ್ಯಕ್ಷ ಸಾಕ್ಷಿಗಳಾಗಿವೆ.

ಎಂಥವರ ಮನಸ್ಸಿನಲ್ಲಿಯೂ ಡೆಪ್ಯೂಟಿಯವರ ವ್ಯಕ್ತಿತ್ವ ಹಾಗೂ ಧೋರಣೆಯನ್ನು ಅಚ್ಚೊತ್ತಿ ಬಿಡುವ ಮತ್ತೊಂದು ಘಟನೆ, 'ಸರಕಾರಿ ಬುಕ್ ಡಿಪೋದ ಅವ್ಯವಹಾರ' ಧಾರವಾಡದಲ್ಲಿ ಒಂದು ಸರಕಾರಿ ಡಿಸ್ಟ್ರಿಕ್ಟ ಬುಕ್ ಡಿಪೋ ಇರುತ್ತಿತ್ತು. ಅದರ ಉಸ್ತುವಾರಿಯೆಲ್ಲ ಡೆಪ್ಯೂಟಿಯವರ ಕಡೆಗೆ. ಅದರಲ್ಲಿ ಮಾರಾಟಕ್ಕಾಗಿ ಯಾವಾಗಲೂ ೮-೧೦ ಸಾವಿರ ಪುಸ್ತಕಗಳು ಇರುತ್ತಿದ್ದವು. ಹೀಗಿರುವಾಗ ಆ ಡಿಪೋದ ಕಾರಕೂನನು ಡೆಪ್ಯೂಟಿಯವರಿಗೆ ತಿಳಿಯದ ಹಾಗೆ ಕ್ರಮೇಣ ೪-೬ ವರ್ಷಗಳಲ್ಲಿ ೪-೫ ಸಾವಿರ ರೂಪಾಯಿಗಳನ್ನು ತಿಂದು ಹಾಕಿದ್ದನು. ಇದು ಗೊತ್ತಾಗದೆ ಯಥಾಪ್ರಕಾರ ಈ ಡಿಪೋದ ಜಮಾಖರ್ಚಿನ ಪುಸ್ತಕಗಳ ಮೇಲೆ ಚೆನ್ನಬಸಪ್ಪನವರ ರುಜು ಇರುತ್ತಿತ್ತು. ಕಾನೂನಿನಂತೆ ಡೆಪ್ಯೂಟಿಯವರು ಈ ಅವ್ಯವಹಾರಕ್ಕೆ ಹೊಣೆಗಾರರಾಗ ಬೇಕಾಯಿತು. ತಾನು ಮಾಡಿದ ಮೋಸವು ಬಯಲಿಗೆ ಬಂದಕೂಡಲೇ ಕೂರಕೂನನು ಓಡಿಹೋಗಿಬಿಟ್ಟನು. ಇವನಿಗೆ ಜಾಮೀನು ಹಾಕಿದವನಿಂದಲೂ ಎಲ್ಲ ಹಣ ವಸೂಲಿಯಾಗದ್ದರಿಂದ ಚೆನ್ನಬಸಪ್ಪನವರು "ಈ ಡಿಪೋದ ತಪಾಸಣೆಯು ನನ್ನ ಕಡೆಗೆ ಇದ್ದು; ನಾನು ನನ್ನ ಹೆಡ್‌ಕ್ಲಾರ್ಕನನ್ನು ನಂಬಿ ಈ ಜಮಾಖರ್ಚಿನ ಪುಸ್ತಕಗಳ ಮೇಲೆ ಸಹಿ ಮಾಡಿದ್ದು ನನ್ನ ತಪ್ಪು ಇರುತ್ತದೆ. ನಾನು ಸ್ವತಃ ಈ ಲೆಕ್ಕವನ್ನು ತಪಾಸಣೆ ಮಾಡದಿದ್ದರೂ ಕಳೆದುಹೋದ ಹಣಕ್ಕೆ ನಾನೇ ಜವಾಬುದಾರನಾಗಿದ್ದೇನೆ. ಆದ್ದರಿಂದ ನನಗೆ ಸಲ್ಲುತಕ್ಕ ಪಗಾರದಲ್ಲಿ ನನ್ನ ಮನೆತನದ ವೆಚ್ಚಕ್ಕೆ ೬೦ ರೂಪಾಯಿ ಮಾತ್ರ ಬಿಟ್ಟುಕೊಟ್ಟು, ಉಳಿದದ್ದನ್ನೆಲ್ಲ ಕಡಿಮೆ ಬಿದ್ದ ಹಣವನ್ನು ಮುಟ್ಟಿಸಿಕೊಳ್ಳುವುದಕ್ಕಾಗಿ ಉಪಯೋಗಿಸಬೇಕು" ಎಂದು ಸರಕಾರಕ್ಕೆ ತಿಳಿಸಿದರು. ಆಗ ಸರಕಾರದವರು ಚೆನ್ನಬಸಪ್ಪನವರಿಂದ ವಿದ್ಯಾಖಾತೆಗೆ ಆದ ಮಹತ್ತರ ಸಹಾಯವನ್ನು ಲಕ್ಷಕ್ಕೆ ತಂದುಕೊಂಡು ಆ ಹಣವನ್ನು ಮನ್ನಾಮಾಡಿಬಿಟ್ಟರು.

ಈ ಪ್ರಸಂಗದಲ್ಲಿ ಚೆನ್ನಬಸಪ್ಪನವರು ವರ್ತಿಸಿದ ರೀತಿ ಅನನ್ಯವಾದುದು. ಯಾಕೆಂದರೆ ಅದು ಒಬ್ಬ ಕಾರಕೂನನಿಂದಾದ ಅವ್ಯವಹಾರವೆಂದು ಸುಲಭವಾಗಿ ಜಾರಿಕೊಂಡಿದ್ದರೆ ಅವರನ್ನು ಯಾರೂ ಕೇಳುವ ಗೊಡವೆಗೆ ಹೋಗುತ್ತಿದ್ದಿಲ್ಲ. ಇದು ಚೆನ್ನಬಸಪ್ಪನವರಿಗೆ ಅರಿಯದ್ದೂ ಇರಲಿಲ್ಲ. ಆದಾಗ್ಯೂ ಜಮಾಖರ್ಚಿನ ಪುಸ್ತಕಕ್ಕೆ ತಮ್ಮ ಸಹಿ ಇರುವುದರಿಂದ ಆ ಅವ್ಯವಹಾರದ ಪ್ರತ್ಯಕ್ಷ ಹೊಣೆಗಾರ ಗುಮಾಸ್ತನಾದರೂ, ಪರೋಕ್ಷ ಹೊಣೆಗಾರ ತಾವೇ ಎಂಬ ಪ್ರಜ್ಞೆ ಜಾಗೃತವಾಗಲು ಅವರು ರೂಪಿಸಿಕೊಂಡದ್ದ ವ್ಯಕ್ತಿತ್ವವೇ ಕಾರಣ. ಸಾಲದ ಮೊತ್ತ ಎಷ್ಟೇ ಆಗಿರಲಿ ಆಗಿನ ಬ್ರಿಟೀಷ ಸರಕಾರ ಅದನ್ನು ಮನ್ನಾ ಮಾಡಿದ್ದು, ಚೆನ್ನಬಸಪ್ಪನವರ ಸಂದೇಹಾತೀತವಾದ ಪ್ರಾಮಾಣಿಕತೆಗೆ ಸಂದಕಾಣಿಕೆ ಎನ್ನಬೇಕಾಗುತ್ತದೆ. ತಾವು ಮಾಡಿದ ಅವ್ಯವಹಾರಗಳನ್ನೇ ಇನ್ನೊಬ್ಬರ ತಲೆಯ ಮೇಲೆ ಹಾಕಿ ಜಾರಿಕೊಳ್ಳುವವರೇ ಹೆಚ್ಚಾಗಿರುವಾಗ ಇವರು, ಇನ್ನೊಬ್ಬರು ಮಾಡಿದ್ದನ್ನು ತಮ್ಮ ತಲೆಯ ಮೇಲೆ ಹಾಕಿಕೊಳ್ಳುವುದನ್ನು ನೋಡುವಾಗ ಅವರ ವ್ಯಕ್ತಿತ್ವದ ವಿರಾಟದರ್ಶನವಾಗುತ್ತದೆ.

ಶಿಕ್ಷಣದ ಪ್ರಗತಿಗೆ ಆತಂಕ ಒಡ್ಡುವ, ಕರ್ತವ್ಯಲೋಪಮಾಡುವ, ಅಪ್ರಾಮಾಣಿಕರಾಗಿರುವ, ಅನರ್ಹರಾಗಿರುವ ಶಿಕ್ಷಕರನ್ನು ಆಗಾಗ ತರಾಟೆಗೆ ತೆಗೆದುಕೊಂಡು, ಅವರ ಒಂದೊಂದು ದೌರ್ಬಲ್ಯವನ್ನೂ ಎತ್ತಿತೋರಿಸಿ, ಅವರನ್ನು ತಿದ್ದುವ ವರೆಗೆ ಚೆನ್ನಬಸಪ್ಪನವರಿಗೆ ಸಮಾಧಾನವೇ ಇರುತ್ತಿರಲಿಲ್ಲ. ಇಂಥ ಸಂದರ್ಭಗಳಲ್ಲಿ ಅವರು ಇನ್ನೂ ಹೆಚ್ಚು ನಿಷ್ಠುರರಾಗುತ್ತಿದ್ದರು. ಇಲ್ಲಿ ದಾಕ್ಷಿಣ್ಯಕ್ಕೆ ಕಿಂಚಿತ್ತೂ ಎಡೆ ಇರುತ್ತಿರಲಿಲ್ಲ. ವಿದ್ಯಾರ್ಥಿಗಳ

ಭವಿಷ್ಯರೂಪಿಸುವಲ್ಲಿ ಅವರಿಗೆ ಅಪಾರವಾದ ಕಳಕಳಿ. ಪ್ರಾಥಮಿಕ ಶಾಲೆಯ ಹೆಡ್‌ಮಾಸ್ತರರೊಬ್ಬರು ತಮ್ಮ "ಅಸಿಸ್ಟಂಟನೊಬ್ಬ ಒಟ್ಟಾರೆ ತಮ್ಮ ಮಾತನ್ನು ಕೇಳದೆ ತನ್ನ ಮನಸ್ಸಿಗೆ ಬಂದಂತೆ ನಡೆಯುತ್ತಾನೆ" ಎಂದು ಚೆನ್ನಬಸಪ್ಪನವರ ಮುಂದೆ ದೂರು ಹೇಳಿದನು. ಆಗ ಅವರು ಹೆಡ್‌ಮಾಸ್ತರನ ಮಾತನ್ನು ಅವನಿಗೇ ತಿರುಗಿಸಿ "ಹೀಗೋ ಒಳ್ಳೆದು, ನೀನು ನಿನ್ನ ಮನಸ್ಸಿಗೆ ಬಂದಂತೆ ನಡೆಯುವಿಯೋ ಅಥವಾ ಬಾರದಂತೆ ನಡೆಯುವಿಯೋ ಭೂಮಿಯ ಮೇಲಿನ ಜನರು ತಮ್ಮ ತಮ್ಮ ಮನಸ್ಸಿಗೆ ಬಂದಂತೆ ನಡೆಯುವರೋ ಅಥವಾ ಬಾರದಂತೆ ನಡೆಯುವರೋ ಹೇಳು" ಎಂದು ಕೇಳಿದರು. ಇದರಿಂದ ಹಾಗೆ ವರ್ತಿಸಲು ತನ್ನ ಅಸಿಸ್ಟಂಟನ್ನು ಬಿಟ್ಟದ್ದು ತನ್ನ ದೌರ್ಬಲ್ಯವೇ ಎಂಬುದು ಹೆಡ್‌ಮಾಸ್ತರಗೆ ಸ್ಪಷ್ಟವಾಗಿ ಅರಿವಾಯಿತು. ಅಲ್ಲದೆ ಇಂಥ ಕ್ಷುಲ್ಲಕ ವಿಷಯಗಳನ್ನು ವರಿಷ್ಠರ ಮುಂದೆ ಹೇಳುವುದೂ ಸರಿಯಾದದ್ದಲ್ಲ ಎಂದು ತಿಳಿಯುವದೂ ತಡವಾಗಲಿಲ್ಲ. ಇಂಥ ಪ್ರಸಂಗಾವಧಾನತೆಯನ್ನು ಡೆಪ್ಯೂಟಿಯವರು ಸಾಕಷ್ಟು ಕಡೆ ಹೊಮ್ಮಿಸುತ್ತಿದ್ದುದು ಅವರ ಜಾಣ್ಮೆಯನ್ನು ಪರಿಚಯಿಸಿಕೊಡುತ್ತದೆ.

ಕೆಲವರಿಗೆ ಬೇರೆಯವರ ದೋಷಗಳನ್ನು ಭೂತಗನ್ನಡಿ ಹಚ್ಚಿ ನೋಡುವುದೇ ಚಟವಾಗಿ ಬಿಟ್ಟಿರುತ್ತದೆ. ಇಂಥವರಿಗೆ ತಮ್ಮ ಆನೆಗಾತ್ರದ ದೋಷಗಳೂ ಅರಿವಿಗೆ ಬರುವುದಿಲ್ಲ. ಆದರೆ ಡೆಪ್ಯೂಟಿಯವರು ಇದಕ್ಕೆ ವ್ಯತಿರಿಕ್ತವಾಗಿದ್ದರು. ಇನ್ನೊಬ್ಬರ ತಪ್ಪುಗಳನ್ನು ಗಂಭೀರವಾಗಿ ಪರಿಗಣಿಸುತ್ತಿದ್ದಂತೆಯೇ ಇವರು ತಮ್ಮ ದೋಷಗಳನ್ನು ಯಾರಾದರೂ ಎತ್ತಿ ತೋರಿಸಿದರೆ ಅದನ್ನು ಅಷ್ಟೇ ಕ್ರೀಡಾ ಮನೋಭಾವದಿಂದ ಸ್ವೀಕರಿಸುತ್ತಿದ್ದರು. ಇವರ ಈ ಮನೋಧರ್ಮದ ಪರೀಕ್ಷೆಯು ಒಂದು ಶಾಲೆಯಲ್ಲಿ ಹೀಗೆ ನಡೆಯಿತು : ಆ ಶಾಲೆಯಲ್ಲಿ ಉಚ್ಚವರ್ಗದ ವಿದ್ಯಾರ್ಥಿಗಳಿಗೆ ಒಂದು ಗಣಿತ ಹೇಳಿ, ಅದನ್ನು ಹೆಡ್‌ಮಾಸ್ತರರಿಗೂ ಮಾಡುವಂತೆ ಸೂಚಿಸಿದರು. ಆಗ ಆ ಹೆಡ್‌ಮಾಸ್ತರರು ವಿನಯಪೂರ್ವಕ - "ನಾನು ಇದನ್ನು ಮಾಡುತ್ತೇನೆ. ಆದರೆ ಒಂದು ವೇಳೆ ಇದು ನನಗೆ ಬರದಿದ್ದರೆ ನನ್ನ ವಿದ್ಯಾರ್ಥಿಗಳಲ್ಲಿ ನನ್ನ ಮಹತ್ವವು ಕಡಿಮೆಯಾಗಿ ನನ್ನ ಕರ್ತವ್ಯಕ್ಕೆ ನೀವೇ ಭಂಗ ತಂದಂತಾಗುವುದಿಲ್ಲವೇ?" ಎಂದು ಕೇಳಿ, ಇದು ಎಲ್ಲ ಶಿಕ್ಷಕರ ಮರ್ಯಾದೆಯ ಪ್ರಶ್ನೆ ಎಂದು ಆ ಸಂದರ್ಭದ ಸೂಕ್ಷ್ಮವನ್ನು ವಿವರಿಸಿದರು. ಈ ಪರಿಸ್ಥಿತಿಯಲ್ಲಿ ಬೇರೆ ಯಾರಾಗಿದ್ದರೂ "ಈ ಶಿಕ್ಷಕನು ಎದುರಾಡುತ್ತಾನಲ್ಲ" ಎಂದು ಕೋಪಾತಿರೇಕದಿಂದ ವಿದ್ಯಾರ್ಥಿಗಳ ಮುಂದೆ ಉದ್ದೇಶಪೂರ್ವಕವಾಗಿಯೇ ಅವಮಾನ ಮಾಡಬಹುದಾಗಿತ್ತು. ಆದರೆ ಡೆಪ್ಯೂಟಿಯವರು ತಮ್ಮನ್ನೇ ತಿದ್ದಿಕೊಂಡರು. ಹೆಡ್‌ಮಾಸ್ತರರಿಗೆ "ನೀನೇ ನನ್ನ ಗುರುವು" ಎಂದು ಹೇಳಿ ತಮ್ಮ ಆದರ್ಶಪ್ರಾಯವಾದ ವ್ಯಕ್ತಿತ್ವವನ್ನೇ ಪ್ರಕಟಿಸಿದರು. ಯಾವ ಸಾಧು ಸತ್ಪುರುಷರಲ್ಲಿಯೂ ದೊರೆಯದ ಈ ಬಹುದೊಡ್ಡ ಗುಣವನ್ನು ಕಾಣುತ್ತೇವೆ.

ಪ್ರಶಂಸೆ, ಮುಖಸ್ತುತಿಗಳು ಹೊನ್ನಶೂಲವಾದರೆ, ಮನ್ನಣೆ 'ಮಸೆದ ಅಲಗು' ಎಂಬುದು ಶರಣರ ಅನುಭವ. ಇನ್ನು ಸಾಮಾನ್ಯರ ಬದುಕಿನಲ್ಲಿ ಇವು ಎಂಥ ಪಾತ್ರವನ್ನಾಡಬಲ್ಲವು ಎಂಬುದನ್ನು ಹೇಳುವುದೇ ಬೇಡ. ಚೆನ್ನಬಸಪ್ಪನವರು ಇಂಥ ಒಂದು ಸಂದರ್ಭದಲ್ಲಿ ಹೇಗೆ ಪ್ರತಿಕ್ರಿಯಿಸಿದರೆಂಬುದನ್ನು ಇಲ್ಲಿ ನೋಡಬಹುದು. ಒಮ್ಮೆ ಪರೀಕ್ಷೆ ತೆಗೆದುಕೊಳ್ಳುವ ನಿಮಿತ್ತ ಒಂದು ಊರಿಗೆ ಹೋದಾಗ ಅಲ್ಲಿಯ ಶಾಲಾ ಶಿಕ್ಷಕನೊಬ್ಬ ಚೆನ್ನಬಸಪ್ಪನವರ ಅನುಗ್ರಹಕ್ಕೆ ಒಳಗಾಗಲು, ಅವರ ಮೇಲೆ ಕೆಲವು ಕವಿತೆಗಳನ್ನು ರಚಿಸಿ, ಅವುಗಳನ್ನು ಚೆನ್ನಬಸಪ್ಪನವರ ಸಮ್ಮುಖದಲ್ಲಿ ವಾಚನಮಾಡುವ ಅವಕಾಶವನ್ನು ಏರ್ಪಾಡು ಮಾಡಬೇಕೆಂದು ಊರ ಹಿರಿಯರ ಮುಖಾಂತರ ಹೇಳಿ ಕಳಿಸಿದನು. ಆ ಶಿಕ್ಷಕನ ಕೋರಿಕೆಯನ್ನು ಒಪ್ಪಿಕೊಂಡ ಚೆನ್ನಬಸಪ್ಪನವರು

ಅಂದು ಸಾಯಂಕಾಲ ಸಮಯ ಕಲ್ಪಿಸಿಕೊಟ್ಟರು. ಶಿಕ್ಷಕನು ಎಲ್ಲರ ಸಮ್ಮುಖದಲ್ಲಿ ಅತಿರಂಜಿತವಾದ, ಅಸಂಗತವಾದ ತನ್ನ ಕವಿತೆಗಳನ್ನು ವಾಚನಮಾಡಿದನು. ಕವಿತೆಗಳೊಂದರಲ್ಲಿ ಡೆಪ್ಯೂಟಿಯವರ ಮೂಗನ್ನು 'ಸಂಪಿಗೆ ಹೂವಿಗೆ' ಹೋಲಿಸಲಾಗಿತ್ತು. ದಯಾವಂತರೆಂದೂ, ಶಾಂತಸ್ವಭಾವದವರೆಂದೂ ಬಣ್ಣಿಸಲಾಗಿತ್ತು. ತಮ್ಮಲ್ಲಿಲ್ಲದ ಈ ಒಣ ಪ್ರಶಂಸೆಯನ್ನು ಕೇಳಿ ಅವರು ವಿಪರೀತ ಬೇಸರಗೊಂಡರು. "ನನ್ನನ್ನು ದೇವರಿಗೆ ಸರಿಯೆಂದು ವರ್ಣಿಸಿರುವಿರಿ. ಇದು ಶುದ್ಧ ಸುಳ್ಳು. ನಿಮ್ಮ ಕವಿತೆಗಳೆಲ್ಲ ದೋಷಪೂರ್ಣವಾದವುಗಳು. ಈ ರೀತಿ ಯಾಕೆ ಸುಳ್ಳು ಬರೆದು ವ್ಯರ್ಥ ವೇಳೆ ಕಳೆದಿರಿ? ಇದಕ್ಕೆ ಬದಲು ಮನೆಯಲ್ಲಿ ನಿಮ್ಮ ಹೆಂಡತಿಗೆ ಒಂದು ರೊಟ್ಟಿ ಬಡಿದು ಹಾಕುತ್ತಿದ್ದರು" ಎಂದು ಹೇಳಿದರು. ಅಂದರೆ ಅರ್ಥಹೀನವಾದ, ಅಪ್ರಯೋಜಕವಾದ, ಅಂಥ ಕವಿತೆಗಳನ್ನು ಬರೆದು ಕಾಲಹರಣ ಮಾಡುವುದಕ್ಕಿಂತ ಜೋಳ ಬೀಸುವಂತಹ, ಕನಿಷ್ಟಪಕ್ಷ ಮನೆಮಂದಿಗಾದರೂ ಪ್ರಯೋಜನಾತ್ಮಕ ಕೆಲಸ ಮಾಡುವುದು ಎಷ್ಟೋ ಪಾಲು ಮೇಲು ಎಂಬುದು ಅವರ ಮಾತಿನ ಅರ್ಥವಾಗಿತ್ತು. ಹೀಗೆ ಯಾವುದೇ ವಿಷಯವನ್ನು ಮುಖದ ಮೇಲೆಯೇ ಹೇಳಿ ವ್ಯಕ್ತಿಗಳ ಲೋಪ-ದೋಷಗಳನ್ನು ತಿದ್ದುವುದು ಚೆನ್ನಬಸಪ್ಪನವರ ಪರಿಪಾಠ. ಬಹಳಷ್ಟು ಸಲ ನೂರಕ್ಕೆ ೯೦ರಷ್ಟು ಜನ ಯಾವುಯಾವುದೋ ಭಿಡೆಗೆ ಸಿಕ್ಕು, ತಮ್ಮ ಮನಸ್ಸಿಗೆ ಒಪ್ಪದೇ ಇರುವ ಅನೇಕ ಸಂಗತಿಗಳನ್ನು ಮೆಚ್ಚಿಕೊಂಡಂತೆ ವರ್ತಿಸುತ್ತಾರೆ. ಆದರೆ ಇದು ಬರೀ ನಾಟಕವಾಗಿರುತ್ತದೆ. ಇಂಥ ನಾಟಕ ಮಾಡಿ ಸೋಗಿನ ಜೀವನ ನಡೆಸುತ್ತ ಆತ್ಮವಂಚನೆ ಮಾಡಿಕೊಳ್ಳುವುದರಲ್ಲಿ ಡೆಪ್ಯೂಟಿಯವರಿಗೆ ಕಿಂಚಿತ್ತೂ ಮನಸ್ಸಿರುತ್ತಿರಲಿಲ್ಲ. ಕಂಡದ್ದನ್ನು ಕಂಡಂತೆಯೇ ಹೇಳಿಬಿಡುವುದು ಅವರ ಸ್ವಭಾವವಾಗಿತ್ತು. ಇಂಥ ನಿಷ್ಕಪಟವಾದ ಅವರ ಮನೋಬಲವೇ ಡೆಪ್ಯೂಟಿಯವರನ್ನು ಎತ್ತರೆತ್ತರಕ್ಕೆ ಏರುವಂತೆ ಸಾಹಯ ಹಸ್ತ ಚಾಚಿತು.

ಮುಚ್ಚುಮರೆಯಿಲ್ಲದ ಅವರ ನೇರ ಸ್ವಭಾವದಿಂದ ಅನೇಕರಿಗೆ ಇರಸುಮುರಸಾಗುತ್ತಿದ್ದುದೂ ಅಷ್ಟೇ ಸಹಜ. ಕೆಲವರಾದರೂ ಅವರನ್ನು ನಿರ್ದಯಿ, ಒರಟು ಎಂದು ಕರೆದಿರಲು ಸಾಕು. ಅದಕ್ಕೆ ಅವರು ತಲೆಕೆಡಿಸಿಕೊಳ್ಳಲಿಲ್ಲ. ತಮಗೆ ಸರಿಕಂಡ ದಾರಿಯಲ್ಲಿಯೇ ಸಾಗಿದರು. ಅವರು ನಿಷ್ಕಪಟಿಗಳಾಗಿದ್ದುದೇ ಇದಕ್ಕೆ ಕಾರಣ. ಅವರು ತಮ್ಮ ಅಕುಟಿಲವಾದ ಜೀವನವಿಧಾನದಿಂದಲೇ ಬಹುಜನರ ಪ್ರೀತಿಗೆ ಪಾತ್ರರಾಗಿದ್ದರು. ಬ್ರಿಟಿಶ್ ಅಧಿಕಾರಿಗಳಂತೂ ಇವರ ಪ್ರಾಮಾಣಿಕತೆಯನ್ನು ಉದ್ದಕ್ಕೂ ಗೌರವಿಸುತ್ತ ಬಂದುದಕ್ಕೆ ಸ್ಪಷ್ಟನಿದರ್ಶನಗಳಿವೆ. ರಸೆಲ್‌ರಂತೂ ಇವರ ಮೇಲೆ ಸಂಪೂರ್ಣ ವಿಶ್ವಾಸವಿಟ್ಟೇ ಕೆಲಸ ಮಾಡಿದರು. ಜೆ.ಎಫ್. ಫ್ಲೀಟರು ಇದೇ ವೇಳೆಗೆ ದಕ್ಷಿಣಭಾಗದ ಅಸಿಸ್ಟಂಟ್ ಎಜ್ಯುಕೇಶನಲ್ ಇನ್‌ಸ್ಪೆಕ್ಟರಾದುದರಿಂದ ಡೆಪ್ಯೂಟಿಯಾಗಿದ್ದ ಚೆನ್ನಬಸಪ್ಪನವರು ಅವರ ಕೈಕೆಳಗೂ ಕೆಲಸಮಾಡಿ ಹೌದೆನ್ನಿಸಿಕೊಂಡರು. ಆತ್ಮಘಾತುಕವಾದ ಅಥವಾ ಸಮಾಜಘಾತುಕವಾದ ಯಾವುದೇ ವಿಚಾರಗಳು ಇವರ ಹತ್ತಿರ ಸಹ ಸುಳಿಯುತ್ತಿದ್ದಿಲ್ಲ. ಬೇರೆಯವರಿಂದಲೂ ಇವರು ಅದನ್ನೇ ಅಪೇಕ್ಷಿಸುತ್ತಿದ್ದರು. ಇವರ ಸ್ವಂತ ತಮ್ಮನಾದ ಸಣ್ಣಚೆನಬಸಪ್ಪನೂ ಇವರ ಕೈಯ್ಯಲ್ಲಿಯೇ ಶಿಕ್ಷಕನಾಗಿದ್ದವನು, ರಕ್ತಸಂಬಂಧಿ ಭಾವನೆಯಿಂದ ಅವನೊಡನೆ ಎಂದೂ ವರ್ತಿಸಿದಂತೆ ಎಲ್ಲಿಯೂ ಸುಳಿವು ಸಿಗುವುದಿಲ್ಲ. ಅವರ ನೈತಿಕಬಲ ಅವರಿಗೆ ಬಹುದೊಡ್ಡ ಶಕ್ತಿಯಾಗಿತ್ತು.

ಆ ವರೆಗೆ ನೋಡಿದ ಅಂಶಗಳೆಲ್ಲ ಪ್ರಾಸಂಗಿಕವಾಗಿ ನಡೆದುಹೋದವುಗಳು. ಆದರೆ ಅವರ ವ್ಯಕ್ತಿತ್ವ ಹಾಗೂ ಧೋರಣೆಗಳಿಗೆ ಸಮಗ್ರತೆ ಪ್ರಾಪ್ತವಾಗುವುದು ಅವರ ಅಖಂಡವಾದ ಕನ್ನಡ ನಿಷ್ಠೆಯನ್ನು ಪರಿಚಯಿಸಿಕೊಂಡಾಗ ಮಾತ್ರ. ಕನ್ನಡದ ಪ್ರಗತಿ ಕುಂಠಿತಗೊಳ್ಳುವುದನ್ನು, ಅದರ ಗೌರವಕ್ಕೆ ಚ್ಯುತಿಬರುವುದನ್ನು, ಅದು ಕಳಂಕಿತವಾಗುವುದನ್ನು ಅವರು ಎಂದೂ

ಸಹಿಸಿಕೊಳ್ಳುತ್ತಿರಲಿಲ್ಲ. ಈ ವಿಷಯದಲ್ಲಿ ಅವರ ಸ್ವಾಭಿಮಾನ, ಪ್ರೀತಿ, ಪರಿಶ್ರಮ, ತ್ಯಾಗ, ಮಹತ್ವಾಕಾಂಕ್ಷೆಗಳು ಎಣೆಯಿಲ್ಲದವುಗಳು. ಕನ್ನಡದ ಪ್ರಶ್ನೆ ಬಂದಾಗ ಅವರು ಹಣಾ-ಹಣಿ ಸಂಘರ್ಷಕ್ಕಿಳಿಯುವದಕ್ಕೂ ಸಿದ್ಧ. ಚೆನ್ನಬಸಪ್ಪನವರಿಗೆ ವ್ಯಕ್ತಿ ಯಾರೇ ಆಗಿರಲಿ, ಎಷ್ಟೇ ದೊಡ್ಡ ಸ್ಥಾನದಲ್ಲಿರಲಿ ಅದು ಮುಖ್ಯ ಅಲ್ಲವೇ ಅಲ್ಲ; ಅವರಿಗೆ ಬೇಕಾಗಿದ್ದುದು ಶಿಸ್ತು, ಪ್ರಾಮಾಣಿಕತೆ, ಕನ್ನಡದ ಬಗೆಗಿನ ನಿಷ್ಕಪಟವಾದ ಪ್ರೀತಿ, ವಿಧೇಯತೆ, ಸರಳತನಗಳೇ ವಿನಃ ಬೇರೆ ಯಾವುದೂ ಅಲ್ಲ. ಪ್ರಸ್ತುತ ಮೌಲ್ಯಗಳಿಗೆ ಬದ್ಧವಾಗಿದ್ದ ಡೆಪ್ಯೂಟಿಯವರು ಬೇರೆಯವರಲ್ಲಿಯೂ ಆ ಮೌಲ್ಯಗಳನ್ನೇ ಬಿತ್ತಿ ಬೆಳೆಯಲು ಅಪೇಕ್ಷಿಸುತ್ತಿದ್ದರು. ಈ ನಿರೀಕ್ಷೆಗೆ ಧಕ್ಕೆ ಬಂದಾಗ ಅದಕ್ಕೆ ಕಾರಣರಾದವರನ್ನು ನಿರ್ಭಯವಾಗಿ, ನೇರವಾಗಿ ಅವರು ತರಾಟೆಗೆ ತೆಗೆದುಕೊಳ್ಳುತ್ತಿದ್ದರು. ಅವರಿಗೆ ಸುತ್ತುಬಳಸು ಗೊತ್ತಿರಲಿಲ್ಲ. ಹೀಗಾಗಿ ಅವರನ್ನು 'ನ್ಯಾಯನಿಷ್ಠುರಿ' ಎಂದೇ ಕರೆಯಬೇಕಾಗುತ್ತದೆ. ತಾವು ನಂಬಿದ ತತ್ವಕ್ಕೆ, ನಿಲುವಿಗೆ, ವಚನಕ್ಕೆ ಎಂಥ ಪ್ರಸಂಗದಲ್ಲೂ ಅವರು ಬದ್ಧರಾಗಿರುತ್ತಿದ್ದರು. ಹಿಂಜರಿಕೆ ಅವರ ಜೀವನದಲ್ಲಿ ಎಂದೂ ಹಣಿಕಿ ಹಾಕಲಿಲ್ಲ.

ಇನ್ನು ಶಾಲಾಸುಧಾರಣೆಯ ಕಾರ್ಯದಲ್ಲಂತೂ ಇವರ ಪರಿಶ್ರಮವನ್ನು ಸರಿಗಟ್ಟುವವರು ಇನ್ನೊಬ್ಬರಿಲ್ಲವೆಂದೇ ಹೇಳಬೇಕು. ಕೊಡಗು, ದಕ್ಷಿಣಕನ್ನಡ ಜಿಲ್ಲೆಯನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಪಂಜೆ ಮಂಗೇಶರಾಯರು ಕೂಡ ಶೈಕ್ಷಣಿಕ ಸುಧಾರಣೆಗಾಗಿ ಹೋರಾಡಿದರು. ಆದರೆ ಡೆಪ್ಯೂಟಿಯವರು ಎದುರಿಸಿದ ಸವಾಲುಗಳನ್ನು ಪಂಜೆಯವರು ಎದುರಿಸುವ ಪರಿಸ್ಥಿತಿ ಬರಲಿಲ್ಲ. ಯಾಕೆಂದರೆ, ಇವರಿಗೆ ಅನ್ಯಭಾಷಿಕರ ಜೊತೆಗೆ ಸಂಘರ್ಷಕ್ಕಿಳಿಯುವ ಅಗತ್ಯವಿರಲಿಲ್ಲ. ಡೆಪ್ಯೂಟಿಯವರು ಮುಂಬೈ ಕರ್ನಾಟಕದ ಭಾಗದಲ್ಲಿ ಕೆಲಸ ಮಾಡುತ್ತಿದ್ದಾಗ ಇಲ್ಲಿಯ ಉನ್ನತಾಧಿಕಾರಿಗಳೆಲ್ಲ ಮರಾಠಿಭಾಷಿಕರ ಒಲವು ಉಳ್ಳವರಾಗಿದ್ದರು. ಹೀಗಾಗಿ ಡೆಪ್ಯೂಟಿಯವರು ತಮ್ಮ ಕಾರ್ಯಕ್ಷೇತ್ರದಲ್ಲಿ ತುಂಬಾ ಸೂಕ್ಷ್ಮವಾಗಿ ಕೆಲಸಮಾಡಬೇಕಾಗುತ್ತಿತ್ತು. ಪಠ್ಯಪುಸ್ತಕಗಳನ್ನು ಬರೆಯಿಸುವ ವಿಷಯದಲ್ಲಿ, ಪ್ರಾಥಮಿಕ ಶಿಕ್ಷಣದ ಬಗೆಗಿನ ಕಳಕಳಿಯ ವಿಷಯದಲ್ಲಿ ಸ್ವಲ್ಪಮಟ್ಟಿಗೆ ಡೆಪ್ಯೂಟಿಯವರು ಮತ್ತು ಪಂಜೆಯವರು ಸಮಾನ ಅಭಿರುಚಿಯುಳ್ಳರೆನಿಸಬಹುದಾದರೂ ಚೆನ್ನಬಸಪ್ಪನವರಿಗೆ ಇದನ್ನು ಮೀರಿದ ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಹೋರಾಟ ಮಾಡಿದ ಮತ್ತು ಆ ಸಂದರ್ಭಕ್ಕೆ ಒಂದು ತಿರುವು ತಂದುಕೊಟ್ಟ ಚರಿತ್ರಾರ್ಹಸ್ಥಾನ ಮೀಸಲಾಗಿದೆ. ಇವರಿಗೆ ಸಮಾನಾಂತರದಲ್ಲಿ ಇನ್ನೊಬ್ಬರು ನಿಲ್ಲಲಾರರು. ಯಾಕೆಂದರೆ ಚೆನ್ನಬಸಪ್ಪನವರ ಹೋರಾಟ ಬರೀ ಶೈಕ್ಷಣಿಕ ಮಟ್ಟದ್ದಾಗಿರಲಿಲ್ಲ. ಕನ್ನಡಿಗರ ಸಾಂಸ್ಕೃತಿಕ ಬದುಕು ಕಟ್ಟುವ ಕೆಲಸ ಅದಾಗಿತ್ತು. ಆದ್ದರಿಂದ ಚೆನ್ನಬಸಪ್ಪನವರ ಹೋರಾಟದ ನೆಲೆಗಳನ್ನು ಗುರುತಿಸುವಾಗ ಬರೀ ಶೈಕ್ಷಣಿಕವಾಗಿ ಭಾಷಿಕವಾಗಿ, ಸಾಹಿತ್ಯಿಕವಾಗಿ, ಧಾರ್ಮಿಕವಾಗಿ ಎಂದು ಗುರುತಿಸುವುದು ಅದು ಅವರ ವ್ಯಕ್ತಿತ್ವದ ಒಂದು ಸೀಳುನೋಟ ಮಾತ್ರವಾಗಬಲ್ಲುದು. ಅವರು ಮುಖ್ಯವಾಗಿ ವಿದ್ಯಾಪ್ರೇಮಿಗಳಾಗಿದ್ದರು. ಕನ್ನಡದ ಕಟ್ಟಾಭಿಮಾನಿ ಸೇವಕರಾಗಿದ್ದರು. ಶಿಕ್ಷಣತಜ್ಞರಾಗಿದ್ದರು. ಕರ್ನಾಟಕದಲ್ಲಿ ಶೈಕ್ಷಣಿಕ ಮಾಸಪತ್ರಿಕೆಯ ಜನಕರಾಗಿದ್ದರು, ಬೋರ್ಡಿಂಗಿನ ಸಂಸ್ಥಾಪಕರಾಗಿದ್ದರು, ಬ್ರಿಟಿಶ್ ಆಡಳಿತದಲ್ಲಿ ಕನ್ನಡಿಗ ದಕ್ಷ ಅಧಿಕಾರಿಯಾಗಿದ್ದರು. ಎಲ್ಲಕ್ಕೂ ಹೆಚ್ಚಾಗಿ ಶಿಕ್ಷಣಕ್ಷೇತ್ರದಲ್ಲಿ ಕನ್ನಡ ಸಂಸ್ಕೃತಿಯನ್ನು ಬಿತ್ತಿ ಬೆಳೆಯುವ ಕೃಷಿಕರಾಗಿದ್ದರು. ಇಂಥ ತೆಲವು ವಿಶೇಷತೆಗಳನ್ನು ಗಮನದಲ್ಲಿಟ್ಟುಕೊಂಡು ಫ.ಗು.ಹಳಕಟ್ಟಿಯವರು ಚೆನ್ನಬಸಪ್ಪನವರ ಬಗ್ಗೆ ವ್ಯಕ್ತಪಡಿಸಿದ ಮತ್ತೂ ಕೆಲವು ಅನಿಸಿಕೆಗಳು ಹೀಗಿವೆ : "…. ತಮ್ಮ ಶಾಲಾ ಸುಧಾರಣೆಯ ಕಾರ್ಯದಲ್ಲಿ ಅವರು ಅತ್ಯಂತ ದಕ್ಷರಾಗಿದ್ದರು. ವೇಳೆಯನ್ನು ವ್ಯರ್ಥವಾಗಿ ಸೋಮಾರಿತನದಲ್ಲಿ ಎಂದೂ

ಕಳೆಯುತ್ತಿರಲಿಲ್ಲ. ಮೇಲಿಂದ ಮೇಲೆ ಶಾಲಾ ತಪಾಸಣಾ ಕಾರ್ಯವನ್ನು ಕೈಕೊಂಡು ಆದಷ್ಟು ತ್ವರಿತವಾಗಿ ಅಲ್ಲಿಯ ಲೋಪ ದೋಷಗಳಿಗೆ ಪರಿಮಾರ್ಜನೆ ದೊರಕುವಂತೆ ನೋಡಿಕೊಳ್ಳುತ್ತಿದ್ದರು. ಮಾಸ್ತರರಲ್ಲಿ ಯಾರಾದರೂ ಚೆನ್ನಾಗಿ ಕೆಲಸಮಾಡುವವರಿದ್ದರೆ ಅವರನ್ನು ಸಾಕಷ್ಟು ಪ್ರೋತ್ಸಾಹಿಸುತ್ತಿದ್ದರು" (ಅವರು ಕಾರವಾರ ಜಿಲ್ಲೆಯ ಡೆಪ್ಯೂಟಿಯಾಗಿಯೂ ಕೆಲಸ ಮಾಡಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬೇಕು) ಹಳಕಟ್ಟಿಯವರ ಈ ವಿಚಾರಗಳನ್ನು ಇನ್ನಷ್ಟು ಗಟ್ಟಿಯಾಗಿ ಪ್ರತಿಪಾದಿಸುವ ಧೋಂಡೋ ನರಸಿಂಹ ಮುಳಬಾಗಲರ ವಿಚಾರಗಳು ಎಷ್ಟೊಂದು ಸಮರ್ಪಕವಾಗಿವೆ ಎಂಬುದನ್ನು ಇಲ್ಲಿ ನೋಡಬಹುದು:

"ಇತ್ತಲಾಗಿ ದಕ್ಷಿಣಭಾಗದ ಎಜ್ಯುಕೇಶನಲ್ ಖಾತೆಯ ಪ್ರಮುಖರಾದ ಮೆಹರ್ಬಾನ ರಸೆಲ್ ಧೊರೆಗಳು ಈ ಭಾಷೆಯ ಕಡಿಗೆ ಚನ್ನಾಗಿ ಲಕ್ಷವನ್ನಿತ್ತರು. ಅದೇ ಪ್ರಕಾರವೇ ಅವರ ಉಪಾಧಿಕಾರಿಗಳಲ್ಲಿ ಒಬ್ಬರಾದ - ರಾವಸಾಹೇಬ ಚನಬಸಪ್ಪಾ ಅಪ್ಪಾ ಡಿಪೂಟಿ ಎಜ್ಯುಕೇಶನಲ ಇನಸ್ಪೇಕ್ಟರ ಇವರು ಏತದ್ದೇಶಾಭಿಮಾನಿಗಳೂ, ಏತದ್ಭಾಷಾಭಿಜ್ಞರೂ ಆದಕಾರಣವೂ, ಕರ್ನಾಟಕದ ಮುಖ್ಯಭಾಗಗಳಾದ, ಬೆಳಗಾಂವ, ಧಾರವಾಡ ಜಿಲ್ಲೆಗಳಲ್ಲಿ ಕೆಲಕೆಲವು ದಿವಸ ಕೆಲಸವನ್ನು ನೋಡಿ, ಈಗ ಧಾರವಾಡ ಜಿಲ್ಹೆಯಲ್ಲಿ ಅದೇ ಅಧಿಕಾರದಲ್ಲಿರುವುದರಿಂದಲೂ, ಈ ಭಾಷೆಯು ಮುಳುಗಿ ಹೋಗದೆ, ಯಥಾಸ್ಥಿತಿಯಾಗಿ ಮೆಲ್ಲನೆ ಅಂಗ್ಯೆಯೂರಿ ಏಳಲಾರಂಭಿಸಿತು. ಇವರ ದರ್ಪದಿಂದ ಸ್ಕೂಲ್‌ಮಾಸ್ತರರು "ಬಡಿದು ಭಕ್ತಿಯನ್ನು ಕಲಿಸಿದಂತೆ" ಜುಲುಮೆಯಿಂದಾದರೂ ಈ ಭಾಷೆಯ ಪರಿಜ್ಞಾನವನ್ನು ಮಾಡಿಕೊಳ್ಳಬೇಕಾಯಿತು. ಸಾರಾಂಶವು: ಈ ಗೃಹಸ್ಥರು - ನಾರ್ಮಲ್ ಸ್ಕೂಲಿನ ಹೆಡ್ಡಮಾಸ್ತರ ಕೆಲಸದಿಂದ ಡಿಪೂಟಿ ಎಜ್ಯೂಕೇಶನ ಇನಸ್ಪೇಕ್ಟರ ಕೆಲಸಕ್ಕೆ ಕಾಲಿಟ್ಟ ದಿನವೇ ಕನ್ನಡಿನ ಪೂನರ್ಜನ್ಮಕಾಲವೆಂದು ನಿಃಪಕ್ಷಪಾತವಾಗಿ ಹೇಳಬದುದು. ಮೇಲಿಂದ ಮೇಲೆ ದಕ್ಷಿಣ ಭಾಗದ ವಿದ್ಯಖಾತೆಯ ಮುಖ್ಯಾಧಿಕಾರಿಗಳ ಸೂಚನೆಯಿಂದ ಡಿಪೂಟಿ ಇನಸ್ಪೇಕ್ಟರರು ಕೊಡುವ ಆಜ್ಞಾರೂಪದ ಉತ್ಪಾತಗಳು ಈ ದೇಶದಲ್ಲಿದ್ದ ಈ ಭಾಷೆಯ ವಿನಾಶಹೇತುವಾದ ಮಹಾರಾಷ್ಟ್ರ ಭಾಷೆಗೆ ಭಯವನ್ನು ಹುಟ್ಟಿಸುತ್ತಾ ನಡೆದವು. ಎಲ್ಲ ಸರಕಾರೀ ಸ್ಕೂಲ್‌ಗಳಲ್ಲಿ ಹಳಗನ್ನಡ ಕವಿತಾ ವ್ಯಾಕರಣಗಳ ಬೀಜಾರೋಪಣವು ಆಯಿತು. ಕನ್ನಡ ವಾಚನ ಶುದ್ಧ ಲೇಖನಗಳ ಕಡೆಗಂತೂ ನಮ್ಮ ಅಭಿಜ್ಞರಾದ ಡಿಪೂಟಿ ಇನಸ್ಪೇಕ್ಟರರೂ, ಕನ್ನಡ ಟ್ರಾನ್ಸಲೇಟರರೂ ಒಂದೇ ಸಮನಾಗಿ ಲಕ್ಷವಂನು ಕೊಟ್ಟು, ಆ ವಿಷಯದಲ್ಲಿರುವ ಮಾಸ್ತರಜನರ ಪರಿಭ್ರಾಂತಿಯನ್ನು ಚನ್ನಾಗಿ ಬಿಡಿಸಿಬಿಟ್ಟರು".[೮] ಇದೆಲ್ಲಕ್ಕೂ ಸ್ಪಂದಿಸುತ್ತ ಡೆಪ್ಯೂಟಿಯವರಾಗಿದ್ದಾಗ ಚೆನ್ನಬಸಪ್ಪನವರು ಹೊರಡಿಸಿದ ಪರಿಪತ್ರಗಳು ಅವರ ಚಿಂತನಶೀಲ ಬದುಕಿನ ಕುರುಹುಗಳಾಗಿವೆ.

ತಮ್ಮ ವ್ಯಕ್ತಿತ್ವದ ಪ್ರಭಾವದಿಂದಲೇ ಚೆನ್ನಬಸಪ್ಪನವರಿಗೆ ಕನ್ನಡ ಭಾಷೆಯ ಅಭ್ಯುದಯವನ್ನು ಸಾಧಿಸಲು ಸಾಧ್ಯವಾದದ್ದು. ಈ ಬಗ್ಗೆ ಸ.ಸ.ಮಾಳವಾಡ ಅವರು "ವಿಪುಲ ಮೇಧಾಶಕ್ತಿ, ಸಂಘಟನಾ ಚಾತುರ್ಯ, ನೇರವಾದ ನುಡಿ, ಪಾರದರ್ಶಕ ಪ್ರಾಮಾಣಿಕತೆ, ಸಾದಾಜೀವನ, ನಿಷ್ಠುರವಾದ ಕ್ರಮ ಇವುಗಳಿಂದಾಗಿ ಚೆನ್ನಬಸಪ್ಪನವರು ಅಂದು ಜನತೆಯಲ್ಲಿ ತಮ್ಮ ವ್ಯಕ್ತಿತ್ವದ ಪ್ರಭಾವವನ್ನು ಬೀರಿದರು. .... ಮುಂದೆ ಅವರ ಶಿಷ್ಯ - ಪ್ರಶಿಷ್ಯರು ಸೇರಿ "ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಿದಾಗ ಕನ್ನಡ ತಲೆಯೆತ್ತುವ ಬಗೆಗೆ ಸಾಂಘಿಕ ಪ್ರಯತ್ನ ಆರಂಭವಾಯಿತು. ಹೀಗೆ ಚೆನ್ನಬಸಪ್ಪನವರು ಕನ್ನಡ ಪುನರುಜ್ಜೀವನದ

೮. ಶಾಲಾಪತ್ರಕವು : 'ಪತ್ರವ್ಯವಹಾರವು' - ಧೋಂಡೋ ನರಸಿಂಹ ಮುಳಬಾಗಲ : ಪುಸ್ತಕ ೬, ಸಂಚಿಕೆ - ೧೧, ಪುಟ. xxiv-xxx.

ಪಿತಾಮಹರಾದರು"[೬] ಎಂದು ಬರೆದಿದ್ದಾರೆ. ಅಂದರೆ ಒಬ್ಬ ವ್ಯಕ್ತಿ ಕೇವಲ ತನ್ನ ಅಧಿಕಾರದ ಬಲದಿಂದಲೇ 'ಗೆದ್ದು' ಬದುಕುತ್ತಾನೆನ್ನುವುದು ಬಹುದೊಡ್ಡ ಭ್ರಮೆ. ಅಧಿಕಾರದ ಜೊತೆಗೆ ವ್ಯಕ್ತಿತ್ವವನ್ನೂ ಹೊಂದಿದ್ದರೆ ಅದು ಬಂಗಾರಕ್ಕೆ ಪರಿಮಳ ಬೆರೆತ ಹಾಗೆ ಎಂಬ ಎಂಬ ಸತ್ಯಾಂಶವನ್ನು ಚೆನ್ನಬಸಪ್ಪನವರು ತಮ್ಮ ಡೆಪ್ಯೂಟಿ ಹುದ್ದೆ ಹಾಗೂ ವ್ಯಕ್ತಿತ್ವ - ಇವೆರಡನ್ನೂ ಸಮಿಚೀನಗೊಳಿಸಿ 'ಸಾಧಿಸುವ' ಮೂಲಕ ತೋರಿಸಿದರು.

ಅವರು ತಮ್ಮ ಸಂಚಾರದ ಸಂದರ್ಭದಲ್ಲಿ ಊರವರನ್ನು ಸೇರಿಸಿ, ಅವರಿಗೆ ಶಿಕ್ಷಣದ ಮಹತ್ವವನ್ನು ಬೋಧಿಸುತ್ತಿದ್ದರು. ಇದಕ್ಕೆ ಮಾರುಹೋದ ಜನತೆ ಕನ್ನಡದ ಬಗ್ಗೆ ವಿಶೇಷ ಪ್ರೀತಿಯನ್ನು ಬೆಳೆಸಿಕೊಳ್ಳಲು, ಊರೂರಿಗೆ ಕನ್ನಡ ಶಾಲೆಗಳನ್ನು ತೆರೆಯಲು ತಮ್ಮನ್ನು ಒಪ್ಪಿಸಿಕೊಳ್ಳುವಂತಾಯಿತು. ಚೆನ್ನಬಸಪ್ಪನವರ ಸೇವೆಯ ಹೆಚ್ಚಿನ ಪ್ರಯೋಜನವನ್ನು ಪಡೆದ ಜಿಲ್ಲೆಯೆಂದರೆ, ಧಾರವಾಡ ಜಿಲ್ಲೆ. ಹಾಗಾಗಿ ಈ ಜಿಲ್ಲೆ ಶಿಕ್ಷಣರಂಗದಲ್ಲಿ ಯಾವಾಗಲೂ ಮುಂಚೂಣಿಯಲ್ಲಿದೆ. ಇಂದಿಗೂ ಈ ಜಿಲ್ಲೆ ತನ್ನ ಸ್ಥಾನವನ್ನು ಬಿಟ್ಟುಕೊಟ್ಟಿಲ್ಲ. ಇದನ್ನು ನೋಡುವಾಗ ಚೆನ್ನಬಸಪ್ಪನವರ ವ್ಯಕ್ತಿತ್ವ ಮತ್ತು ಧೋರಣೆಗಳ ಛಾಪು ಎಷ್ಟೊಂದು ಪರಿಣಾಮಕಾರಿ ಎಂಬುದು ಸುಲಭವಾಗಿ ಗೊತ್ತಾಗುತ್ತದೆ.

ಇಂಥ ಸಮಾಜಸುಧಾರಣೆಯ ಅವರ ಹಂಬಲಕ್ಕೆ ಅವರ ಮಾತುಗಾರಿಕೆ ಅತ್ಯಂತ ಪ್ರೇರಕವಾಗಿತ್ತು. ತುಂಬಿದ ಸಭೆಗಳಲ್ಲಿ ನಿಂತು ಜಾಗಟೆ ಬಡಿದ ಹಾಗೆ ವಿಷಯವನ್ನು ಮಂಡಿಸಿ ಜನರ ಮನಸ್ಸಿನ ಮೇಲೆ ಲಗ್ಗೆಹಾಕುವುದರಲ್ಲಿ ಅವರು ನಿಷ್ಣಾತರಾಗಿದ್ದರು. ಅವರ ಉಚ್ಚಧ್ವನಿ, ಎತ್ತರವಾದ ಹುರಿಕಟ್ಟಾದ ಮೈಕಟ್ಟು, ಚಿಂತನಶೀಲ ಮುಖಮುದ್ರೆಯಿಂದ ಸಭಿಕರು ಮೊದಲ ಸುತ್ತಿನಲ್ಲೇ ಅವರ ಮಾತಿನ ಮೋಡಿಗೆ ಒಳಗಾಗಿ ಬಿಡುತ್ತಿದ್ದರು. ಎಷ್ಟು ಗಹನ ವಿಷಯಗಳಿದ್ದರೂ ಅವುಗಳಿಗೆ ಸಮರ್ಪಕವಾದ ಮತ್ತು ವ್ಯಾವಹಾರಿಕವಾದ ಉದಾಹರಣೆಗಳನ್ನು ಕೊಟ್ಟು ಶ್ರೋತೃಗಳಿಗೆ ಅವುಗಳನ್ನು ಮನವರಿಕೆ ಮಾಡಿಕೊಡುವಲ್ಲಿ ಅವರು ಸಿದ್ಧಹಸ್ತರಾಗಿದ್ದರು. ಅವರ ಹತ್ತಿರ, ವಾದ ಮಾಡಲು ಯಾರೂ ಮುಂದೆ ಬರುತ್ತಿರಲಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ ಅವರು ಯಾವುದೇ ಕೆಲಸದಲ್ಲಿ ತೊಡಗಿಕೊಂಡಿರಲಿ ಅದರಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡಿರುತ್ತಿದ್ದರು. ಆ ಕಾರ್ಯದ ಪೂರ್ವಾಪರಗಳನ್ನು ಅರಿಯುತ್ತಿದ್ದರು. ಸಂದರ್ಭಗಳ ಸೂಕ್ಷ್ಮಗಳನ್ನು ಅರಿತುಕೊಂಡೇ ಅದಕ್ಕೆ ಬೇಕಾದ ತಕ್ಕ ಪೂರ್ವ ತಯಾರಿಯನ್ನೂ ಮಾಡಿಕೊಳ್ಳುತ್ತಿದ್ದರು. ಇದೆಲ್ಲದರ ಜೊತೆಗೆ ಅವರಲ್ಲಿ ಪ್ರಚಂಡವಾದ ಆತ್ಮವಿಶ್ವಾಸವಂತೂ ಇದ್ದೇ ಇರುತ್ತಿತ್ತು. ಅಂದಮೇಲೆ ಚೆನ್ನಬಸಪ್ಪನವರ ವ್ಯಕ್ತಿತ್ವದ ಪ್ರಭಾವ ಹೇಗಿರುತ್ತಿತ್ತೆಂಬುದನ್ನು ಮತ್ತೆ ವಿವರಿಸುವ ಅಗತ್ಯವಿಲ್ಲವೆನಿಸುತ್ತದೆ.

೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಸಂಪೂರ್ಣವಾಗಿ ಮರಾಠಿ ಸಂಸ್ಕೃತಿಯಲ್ಲಿ ಕರಗಿಹೋಗಿದ್ದ ಕನ್ನಡ ಸಂಸ್ಕೃತಿಯನ್ನು ಪುನಃ ಶೋಧಿಸಿ ತೆಗೆಯುವ ಕೆಲಸ ಸುಲಭವಾದದ್ದೇನಾಗಿರಲಿಲ್ಲ. ಒಂದು ಜನಾಂಗದಲ್ಲಿ ಬೇರುಬಿಟ್ಟ ಅನ್ಯಸಂಸ್ಕೃತಿಯನ್ನು ಬೇರ್ಪಡಿಸುವುದು ಸಾಕಷ್ಟು ಗಂಡಾಂತರಕಾರಿಯಾದ ಕೆಲಸ. ಯಾಕೆಂದರೆ ಇಂಥ ಸಂದರ್ಭದಲ್ಲಿ ಹೊರಗಿನ ಅಪಾಯಗಳೊಂದಿಗೆ ಒಳಗಿನ ಹಿತಾಸಕ್ತಿಗಳೂ ಶಾಮೀಲಾಗಿ ತಮ್ಮ ತಮ್ಮ ಸ್ವಾರ್ಥಪರ ಜೀವನಶೈಲಿಯನ್ನು ಮುಂದುವರೆಸಲು ಯಾವ ವಾಮಮಾರ್ಗಕ್ಕಿಳಿಯಲೂ ಸಿದ್ಧವಾಗಿರುತ್ತವೆ. ಇಂಥ ಕಹಿ ಅನುಭವದಿಂದ ಚೆನ್ನಬಸಪ್ಪನವರು ಹೊರತಾಗಿರಲಿಲ್ಲ. ಅವರ

೬. ಸಂಯುಕ್ತ ಕರ್ನಾಟಕ ದಿನಪತ್ರಿಕೆ, ೪.೧.೧೯೮೧.

ಹೋರಾಟ ಜೀವನದಲ್ಲಿ ಅವರನ್ನು ಅವರ ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದ್ಧತೆಯಿಂದ (Social and cultural comittments) ಹಿಮ್ಮೆಟ್ಟಿಸಲು ಸಾಕಷ್ಟು ಹುನ್ನಾರಗಳು ನಡೆದಿದ್ದ ಬಗ್ಗೆ ಸುಳಿವು ಸಿಗುತ್ತವೆ. ಯಾವುದಕ್ಕೂ ಹೆದರಿ ತತ್ವಭ್ರಷ್ಟರಾಗುವ ಹೇಡಿಗಳಾಗಿರಲಿಲ್ಲ ಚೆನ್ನಬಸಪ್ಪನವರು. ಅದು ಎಷ್ಟೇ ಪೇಚಿನ ಪ್ರಸಂಗವಾಗಿರಲಿ ತಮ್ಮ ಧೋರಣೆಯಿಂದ ಕೂದಲೆಳೆಯಷ್ಟೂ ಕದಲುವವರಲ್ಲ.

ಈ ಸಂದರ್ಭದಲ್ಲಿ ಇನ್ನೊಂದು ವಿಚಾರ ನಮ್ಮ ಗಮನವನ್ನು ಸೆಳೆಯುತ್ತದೆ. ಅದೇನೆಂದರೆ, ಪೇಶ್ವೆಯರು ನಮ್ಮ ನಾಡನ್ನು ಆಳಿದ್ದರ ಪ್ರಯುಕ್ತ ಮರಾಠಿ ಭಾಷೆ ಸಂಸ್ಕೃತಿಗಳ ವಜ್ರಮುಷ್ಟಿಯಲ್ಲಿ ಸಿಕ್ಕ ಕನ್ನಡ ಜನತೆ, ತಮ್ಮ ಮೂಲಭೂತವಾದ ಭಾಷೆ ಸಂಸ್ಕೃತಿಗಳನ್ನು ಕಳೆದುಕೊಂಡು ನರಳಿದಂತೆ ಬ್ರಿಟೀಷರ ಆಡಳಿತದ ನಂತರ ಈ ನಾಡು ಆಂಗ್ಲ ಭಾಷೆ-ಸಂಸ್ಕೃತಿಗಳ ಹಿಡಿತದಿಂದ ತಪ್ಪಿಸಿಕೊಳ್ಳಲು ಹೆಣಗಾಡಬೇಕಾದದ್ದು ಈ ನಾಡಿನ ಒಂದು ದುರಂತ. ಡೆಪ್ಯೂಟಿಯವರು ಕನ್ನಡಪರ ಹೋರಾಟ ನಡೆಸಿದ ಕಾಲಮಾನಪರಿಸ್ಥಿತಿಗೂ ಇವತ್ತು ಹಲವು ಸಂಘಟನೆಗಳ ಮೂಲಕ ಕನ್ನಡಪರ ಹೋರಾಟ ನಡೆಸಿರುವುದರ ಕಾಲಮಾನ ಪರಿಸ್ಥಿತಿಗೂ ಮೂಲಭೂತವಾಗಿ ಸಾಕಷ್ಟು ವ್ಯತ್ಯಾಸಗಳಿರುವುದನ್ನು ಗುರುತಿಸಬೇಕಾಗಿದೆ. ಡೆಪ್ಯೂಟಿಯವರು ಹೋರಾಟಕ್ಕೆ ಅಣಿಯಾದದ್ದು ಒಂದು ಅನ್ಯಪ್ರಾಂತೀಯ ಭಾಷೆಯ ವಿರುದ್ಧ. ಆದರೆ ಈಗ ಕನ್ನಡ ಚಳುವಳಿ ನಡೆಯುತ್ತಿರುವುದು ಇನ್ನೊಂದು ದೇಶಭಾಷೆಯ ವ್ಯಾಮೋಹದ ವಿರುದ್ಧ. ಇಂದು ನಾವು ನಂಬಿರುವ ಹಾಗೆ ಕನ್ನಡಿಗರು ಸ್ವಂತ ಭಾಷೆ - ಸಂಸ್ಕೃತಿಗಳ ಬಗ್ಗೆ ಸಾಕಷ್ಟು ಪ್ರಜ್ಞಾವಂತರಾಗಿದ್ದಾರೆ (?). ಇಂಥ ಅವಸ್ಥೆಯಲ್ಲೂ ಕನ್ನಡ, ಕನ್ನಡಿಗನ ಬದುಕಿನ ಎಲ್ಲ ರಂಗಗಳಲ್ಲಿಯೂ ಸಾರ್ವಭೌಮ ಭಾಷೆಯಾಗಬೇಕೆಂಬ ಸದಿಚ್ಛೆಯನ್ನಿಟ್ಟುಕೊಂಡು ಹೋರಾಟ ನಡೆಸಬೇಕಾದ ವಿಪರ್ಯಾಸ ಇದ್ದೇ ಇರುವುದನ್ನು ನೋಡುತ್ತೇವೆ. ಕನ್ನಡಿಗರನ್ನು ಈಗ ಕನ್ನಡಿಗರೇ ಆಳುತ್ತಾರೆ. ಶೈಕ್ಷಣಿಕವಾಗಿ ನಾವೆಲ್ಲ ಗಮನಾರ್ಹವಾದ ಪ್ರಗತಿಸಾಧಿಸಿದ್ದೇವೆ. ಪತ್ರಿಕೆ, ಚಲನಚಿತ್ರ, ದೂರದರ್ಶನ, ರೆಡಿಯೋಗಳಂತಹ ಸಮೂಹ ಮಾಧ್ಯಮಗಳಿವೆ. ಕನ್ನಡದ ಶ್ರೇಯೋಭಿವೃದ್ಧಿಗಾಗಿಯೇ ಹೋರಾಟ ನಡೆಸಲು ಕಂಕಣಬದ್ಧವಾಗಿರುವ ಹಲವಾರು (ಕನ್ನಡಪರ – ಕನ್ನಡಶಕ್ತಿಕೇಂದ್ರ, ಕನ್ನಡಕ್ರಿಯಾ ಸಮಿತಿ, ಕರ್ನಾಟಕ ವಿಕಾಸವೇದಿಕೆ, ಕನ್ನಡ ಸಂಘಗಳಂತಹ) ಸಂಘಟನೆಗಳಿವೆ. ಇಷ್ಟೆಲ್ಲ ಬಲವಿದ್ದೂ ಸಾಧನೆಯ ಪ್ರಮಾಣವನ್ನು ನೋಡಿದಾಗ ಸ್ವಲ್ಪ ನಿರಾಶೆಯೇ ಆಗುತ್ತದೆ. ಆದರೆ ಡೆಪ್ಯೂಟಿಯವರಿಗೆ ಈ ಯಾವ ಬೆನ್ನಬಲವೂ ಇರಲಿಲ್ಲವೆಂಬುದು ಗಮನಾರ್ಹ. ಇವರು ಎಂಥ ವಿಷಮ ಸನ್ನಿವೇಶದಲ್ಲಿ ತಮ್ಮ ಹೋರಾಟಕ್ಕೆ ಅಸ್ತಿವಾರವನ್ನು ಹಾಕಿದರೆಂದರೆ; ಆಗ ಈ ನಾಡನ್ನು ಆಳುತ್ತಿದ್ದವರು ನಮ್ಮವರಾಗಿರಲಿಲ್ಲ; ಪರಕೀಯರಾಗಿದ್ದರೆಂಬುದರ ಸೂಕ್ಷ್ಮವನ್ನು ತಿಳಿದಾಗ ಮಾತ್ರ ಡೆಪ್ಯೂಟಿಯವರ ಸಾಧನೆ-ಧೋರಣೆ-ವ್ಯಕ್ತಿತ್ವಗಳ ಆಳ ತಟ್ಟನೆ ಹೊಳೆಯುತ್ತದೆ. ಈ ಹಿನ್ನೆಲೆಯೊಂದಿಗೆ ಒಂದು ಮಾತನ್ನು ಹೇಳಿದರೆ ಡೆಪ್ಯೂಟಿ ಚೆನ್ನಬಸಪ್ಪನವರನ್ನೂ ಅವರ ವ್ಯಕ್ತಿತ್ವ-ಧೋರಣೆಗಳನ್ನೂ ಎಲ್ಲ ಪಾರ್ಶ್ವಗಳಿಂದ ನೋಡಿದ ಒಂದು ಸಣ್ಣ ಸಮಾಧಾನ ಸಿಕ್ಕಿತೇನೋ! ಅದೇನೆಂದರೆ: ಅವರು ಕನ್ನಡಕ್ಕಾಗಿ ನಡೆಸಿದ ಹೋರಾಟ ದುಃಸ್ವಪ್ನವನ್ನು ಕಂಡ ಮನುಷ್ಯನೊಬ್ಬ ಆದರ ಗಲಿಬಿಲಿಯಿಂದ ಹೊರಬರುವ ಮನೋಭಾವದ್ದಾಗಿರಲಿಲ್ಲ. ಅದು ಪ್ರಜ್ಞಾವಂತನೊಬ್ಬನು 'ವಾಸ್ತವಕ್ಕಾಗಿ' ನಿರ್ಭಯದಿಂದ ನಡೆಸಿದ ಹೋರಾಟ ಆಗಿದ್ದಿತೆಂದರೆ ತಪ್ಪಾಗಲಿಕ್ಕಿಲ್ಲ.

ಇದೆಲ್ಲವನ್ನೂ ಎದೆತುಂಬ ತುಂಬಿಗೊಂಡ ಕನ್ನಡ ಜನತೆ, ಚೆನ್ನಬಸಪ್ಪನವರು ಬದುಕಿದ್ದಾಗ ಮಾತ್ರ ಅವರ ಬಗ್ಗೆ ಭಯ-ಭಕ್ತಿ, ನಯ-ನಾಜೂಕತೆಗಳನ್ನು ತೋರಿಸಿದ್ದರೆ

ಆದೊಂದು ಯಾಜಮಾನ್ಯಪದ್ಧತಿಯ ಪರ್ಯಾಯ ಸಂಸ್ಕೃತಿ ಎನಿಸುತ್ತಿತ್ತು. ಆದರೆ ಡೆಪ್ಯೂಟಿಯವರ ವಿಷಯದಲ್ಲಿ ಹಾಗಾಗಿಲ್ಲವೆಂಬುದೇ ಅವರ ವ್ಯಕ್ತಿತ್ವಕ್ಕೆ ಇರುವ ಘನತೆಯ ದ್ಯೋತಕ. ಅವರು ಬದುಕಿರುವಾಗಿನಕಿಂತಲೂ ಅವರು ದೇಹವಿಟ್ಟು ಶತಮಾನ ಉರುಳಿಹೋದ ಮೇಲೆ ಅವರ ಬಗ್ಗೆ ಕನ್ನಡಿಗರು ಬೆಳೆಸಿಕೊಂಡಿರುವ ಗೌರವ ಇನ್ನೂ ವಿಶೇಷವಾದದ್ದು. ನಿದರ್ಶನಕ್ಕೆ ಕೆಲವು ಸಂಗತಿಗಳನ್ನು ಇಲ್ಲಿ ಉಲ್ಲೇಖಿಸದಿದ್ದರೆ ತಪ್ಪಾಗುತ್ತದೆ. ಅವರು ಆರಂಭಿಸಿದ ಟ್ರೇನಿಂಗ ಕಾಲೇಜು ಒಂದು ಸ್ವಯಂಪೂರ್ಣ ಹೆಮ್ಮೆಯ ಸಂಸ್ಥೆಯಾಗಿ, ಇವತ್ತಿನ ಯಾವ ಲಾಲಸೆಗಳಿಗೂ ಬಲಿಯಾಗದೆ ಚೆನ್ನಬಸಪ್ಪನವರ ಧ್ಯೇಯಾದರ್ಶಗಳನ್ನೇ ಗೌರವಿಸುತ್ತ ಬೆಳೆದು ನಿಂತಿರುವುದಕ್ಕಿಂತಲೂ ದೊಡ್ಡ ಗೌರವ ಇನ್ನೊಂದಿಲ್ಲವೆಂದೇ ಹೇಳಬೇಕಾಗುತ್ತದೆ. ಜೊತೆ ಜೊತೆಗೇ ಧಾರವಾಡದಲ್ಲಿ ಚೆನ್ನಬಸಪ್ಪನವರ ಪ್ರತಿಷ್ಠಾನ, ಅವರ ಕಂಚಿನಪುತ್ಥಳಿಯ ಪ್ರತಿಷ್ಠಾಪನೆ, ಲಿಂಗಾಯತ ಅಭಿವೃದ್ಧಿ ಸಂಸ್ಥೆಯ ಗ್ರಂಥಾಲಯಕ್ಕೆ ಚೆನ್ನಬಸಪ್ಪನವರ ಹೆಸರು, ಟ್ರೇನಿಂಗ ಕಾಲೇಜು - ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠ - ವಿದ್ಯಾವರ್ಧಕ ಸಂಘಗಳಲ್ಲಿ ಚೆನ್ನಬಸಪ್ಪನವರ ತೈಲಚಿತ್ರ, ಭಾವಚಿತ್ರಗಳ ಅನಾವರಣ, ಕರ್ನಾಟಕದ ಉದ್ದಗಲಕ್ಕೂ ಅವರನ್ನು ಕುರಿತು ನಡೆದ, ನಡೆಯುತ್ತಿರುವ ವಿಚಾರ ಸಂಕಿರಣ, ಸಾಹಿತ್ಯಗೋಷ್ಠಿಗಳು, ಸಾಹಿತ್ಯ ಪ್ರಕಟಣೆಗಳು, ಅವರೇ ಹುಟ್ಟುಹಾಕಿದ 'ಮಠಪತ್ರಿಕೆ' ಈಗ 'ಜೀವನಶಿಕ್ಷಣ' ಪತ್ರಿಕೆಯಾಗಿ ಶತಮಾನೋತ್ತರ ಬೆಳ್ಳಿಹಬ್ಬವನ್ನು ಆಚರಿಸಿಕೊಂಡು ಮುನ್ನಡೆಯುತ್ತಿರುವ ಸಂಗತಿ - ಇಂಥ ಇನ್ನೂ ಕಂಡರಿಯದ ಹಲವಾರು ಅರ್ಥಪೂರ್ಣ ಬೆಳವಣಿಗೆಗಳು ಚೆನ್ನಬಸಪ್ಪನವರ ವ್ಯಕ್ತಿತ್ವವನ್ನೂ ಧೋರಣೆಯನ್ನೂ ಸಾಕಾರಗೊಳಿಸಿ, ಎಂದೆಂದೂ ಅದು ಅಚ್ಚಳಿಯದಂತೆ ಮಾಡಿವೆ. - ಎಂಬುದು ಕನ್ನಡಿಗರೆಲ್ಲರಿಗೂ ಹೆಮ್ಮೆಯ ವಿಷಯ.



## ಸುತ್ತೋಲೆಗಳು

ಚೆನ್ನಬಸಪ್ಪನವರು ಡೆಪ್ಯೂಟಿ ಎಜ್ಯುಕೇಶನಲ್ ಇನಸ್ಪೆಕ್ಟರ್ ಹುದ್ದೆಯಿಂದ ಹೊರಡಿಸಿದ ಸುತ್ತೋಲೆಗಳು ಅಂದಿನ ಐತಿಹಾಸಿಕ ಸಂದರ್ಭದ ಮಹತ್ವಪೂರ್ಣ ಶೈಕ್ಷಣಿಕ ದಾಖಲೆಗಳೆನಿಸಿವೆ. ಆದುದರಿಂದ ನಮಗೆ ಲಭ್ಯವಾದ ಅವರ ಎಲ್ಲ ಸುತ್ತೋಲೆಗಳನ್ನು ಇಲ್ಲಿ (ನೇಮಣೂಕಿ ಪತ್ರಗಳು ಸಹಿತ) ಕೊಟ್ಟಿದ್ದೇವೆ. ಚೆನ್ನಬಸಪ್ಪನವರು ತಮ್ಮ ಆಡಳಿತ ಕಕ್ಷೆಯಲ್ಲಿ ಬರುವ ಮರಾಠಿ ಶಾಲೆಗಳಿಗಾಗಿ ಆಗಾಗ ಕೆಲವು ಮರಾಠಿ ಸುತ್ತೋಲೆಗಳನ್ನೂ ಹೊರಡಿಸಿದ್ದು, ಅವುಗಳನ್ನು ಇಲ್ಲಿ ಸೇರಿಸಿಲ್ಲ. ಈ ಎಲ್ಲ ಆದೇಶಗಳು ಚೆನ್ನಬಸಪ್ಪನವರವಾಗಿದ್ದರೂ ಕೆಲವೊಮ್ಮೆ ಬರೆವಣಿಗೆ ಮಾತ್ರ ಅವರ ಕೈಕೆಳಗಿನ ಸಿಬ್ಬಂದಿಯದಾಗಿರುತ್ತಿದ್ದ ಕಾರಣ, ಅಲ್ಲಲ್ಲಿ ಭಾಷೆಯ ಅಶುದ್ಧಿ ನುಸುಳಿಕೊಂಡಿರುವುದನ್ನೂ ಕಾಣುತ್ತೇವೆ.

ಈ ಸುತ್ತೋಲೆಗಳೆಲ್ಲ ಮಠಪತ್ರಿಕೆಗಳಲ್ಲಿ ಪ್ರಕಟವಾಗಿದ್ದು, ಈ ಪತ್ರಿಕೆಯ ಸಂಪಾದಕರು ಸಂಪುಟ ಹಾಗೂ ಸಂಚಿಕೆಗಳ ಸಂಖ್ಯೆಯನ್ನು ಕೆಲವೊಮ್ಮೆ ತಪ್ಪಾಗಿ ಮುದ್ರಿಸಿರುವುದರಿಂದ ಸಂಪುಟ–ಸಂಚಿಕೆಗಳ ಸಂಖ್ಯಾನುಕ್ರಮವನ್ನು ಬಿಟ್ಟು, ಈ ದಾಖಲೆಗಳನ್ನು ಕಾಲಾನುಕ್ರಮದಲ್ಲಿ ಹೊಂದಿಸಿದ್ದೇವೆ. ಕೆಲವು ಸುತ್ತೋಲೆಗಳನ್ನೊಳಗೊಂಡ 'ಮಠಪತ್ರಿಕೆ'ಯ ಸಂಚಿಕೆಗಳು ಲಭ್ಯವಾಗದ ಕಾರಣ, ಮೂರು ಸುತ್ತೋಲೆಗಳನ್ನು 'ಕನ್ನಡದ ದೀಪ' ಕೃತಿಯಲ್ಲಿ ಪ್ರಕಟವಾದ ಶ್ರೀ ಶಿವಶಂಕರ ಹಿರೇಮಠ ಅವರ ಲೇಖನದಿಂದ ಎತ್ತಿಕೊಂಡಿದ್ದೇವೆ. ಒಟ್ಟು ಚೆನ್ನಬಸಪ್ಪನವರು ಹೊರಡಿಸಿದ ಕನ್ನಡದ ಎಲ್ಲ ಸುತ್ತೋಲೆಗಳನ್ನು ಒಂದು ಕಡೆ ದಾಖಲಿಸಬೇಕೆಂಬ ನಮ್ಮ ಹಂಬಲ ಈ ಮೂಲಕ ಈಡೇರಿದಂತಾಗಿದೆ.

(೧)

**Notice**

**ನೋಟೀಸು**

ಬೆಳಗಾವಿ ಜಿಲ್ಲೆಯಲ್ಲಿರುವ ಯಾವತ್ತು ಕನ್ನಡಸ್ಕೂಲ ಮಾಸ್ತರರಿಗೆ ತಿಳಿಯಪಡಿಸುವುದೇನೆಂದರೇ - ನಿಮ್ಮ ಕಡಿಯಿಂದ ನಂಮ ಕಡಿಗೆ ಬರುವ ಪತ್ರಗಳೆಲ್ಲಾ ಕನ್ನಡದಲ್ಲಿ ಬರಿಬೇಕು.

ತಾ|| ೧೬ನೆ ಮಾಹೆ ಜನವರಿ ಸಂನ ೧೮೬೬ ಯ್ಸಿವಿ.

Chanbussappa B. Dharwar
ಡಿಪುಟಿ ಎಜ್ಯುಕೇಶನಲ್ ಇನಸ್‌ಪೆಕ್ಟರ ಬೆಳಗಾಂವ.

(ಮಠಪತ್ರಿಕೆ : ೧-೧೧, ಪು.೨೬೦ - ಫೆಬ್ರುವರಿ ೧೮೬೬)

(೨)

**Notice**

**ನೋಟೀಸು**

ಈ ನೋಟಿಸನಿಂದಾ ನಂಮ ಕೈಕೆಳಗಿರುವ ಯಾವತ್ತೂ ಸ್ಕೂಲಮಾಸ್ತರರಿಗೆ ತಿಳಿಸುವದೇನಂದರೆ - ಚಿಕ್ಕ ಹುಡುಗರಿಗೆ ಸಸಾರ ಶಬ್ದಗಳನು ಬರಿಯಲಿಕ್ಕೂ, ಓದಲಿಕ್ಕೂ ಕಲಿಸುವದಂನು ಬಿಟ್ಟು ಬಿಟ್ಟು, ಅಕರಕ್ಕೆ, ಜಾಟಕ್ಕೆ ಯಂಬ ತಿಳಿಯದಂಥಾವುಗಳನು ಕಲಿಸುವದು ನಂಮ ದೃಷ್ಟಿಗೆ ಬಿತ್ತೂ. ಮತ್ತು ಕಲಿಸುತ್ತಿರೆಂಬುವದು ನಮಗೆ ಗೊತ್ತಾ ಆದೆ. ಅಂದರೆ ಈ ರೀತಿಯಿಂದ ಕಲಿಸುವದು ನಮಗೆ ನೆಟ್ಟಗೆ ಕಾಣುವುದಿಲ್ಲ. ಮೊದಲು ಹುಡಗರಿಗೆ ಸಸಾರ ಹೆಸರಗಳನ್ನು ಬರಿಯಲಿಕ್ಕೂ ಓದಲಿಕ್ಕೂ ಕಲಿಸಿದ ಬಳಿಕ ಮೆಲ್ಲಮೆಲ್ಲಗೆ ಯಿಂಥಾ ವಿಷಯಗಳಂನು ಕಲಿಸಲಿಕ್ಕೆ ಆರಂಭ ಮಾಡಬೇಕು. ಹುಡಗರಿಗೆ ತಿಳಿಯುವಂಥಾದ್ದನ್ನು ಕಲಿಸಬೇಕು. ತಿಳಿಯದಂಥಾದನ್ನು ಕಲಿಸುವ ಗೊಡವಿಗೆ ಹೋಗಬಾರದು.

Chanbussappa B. Dharwar
ಡಿ. ಇ. ಇ. ಬೆಳಗಾವ.

(ಮಠಪತ್ರಿಕೆ : ೧-೧೧, ಪು.೨೬೦-೬೧ - ಫೆಬ್ರುವರಿ ೧೮೬೬)

(೩)

**Circular**

**ಸರಕೂಲರ**

ಬೆಳಗಾಂವಿ ಮತ್ತು ಉತ್ತರಕಾನಡಾ ಯೀ ಜಿಲ್ಲೆಗಳಲ್ಲಿರುವ ಯಾವತ್ತು ಸರಕಾರಿ ದೇಶಭಾಷೆಯ ಸಾಲಿಯ ಪಂತೋಜಿಗಳಿಗೆ ಕೆಳಗೆ ಸಹಿಮಾಡುವವರು ತಿಳಿಸುವದೇನೆಂದರೆ – ಸಾಲಿಯಲ್ಲಿ ಹೊಸದಾಗಿ ಹುಡುಗರ ತೆಗಿದುಕೊಳ್ಳಬೇಕಾದರೆ ಮೊದಲು ಅವರ ಕಡಿಯಿಂದ ಫೀ ವಸೂಲಮಾಡಿ ತೆಗೆದುಕೊಳ್ಳಬೇಕು. ಹಾಗೇ ಸಾಲಿಯಲ್ಲಿ ಬರಕೊಡಬಾರದು. ಯಾವ ದಿವಸ ಫೀ ವಸುಲ ಆಗುತ್ತದೊ ಅದೆ ದಿವಸ ಲೆಖಿಕ್ಕೆ ಜಮಾ ಮಾಡಬೇಕು.

ತಾ|| ೧೧ನೇ ಫೆಬ್ರೂಆರಿ ೧೮೬೬
ಮುಕ್ಕಾಂ ಮುನವಳ್ಳಿ

Chanbussappa B. Dharwarker
ಡಿ. ಇ. ಇ. ಬೆ. ಮ. ಉತ್ತರಕಾನಡಾ

(ಮಠಪತ್ರಿಕೆ : ೧-೧೨, ಪು.೨೮೨-೮೩ - ಮಾರ್ಚ ೧೮೬೬)

೪

## Notice
## ನೋಟಿಸು

ಕೆಲವು ಪಂತೋಜಿಗಳು ಹುಕುಮಿನ ಹೊರ್ತು ಮತ್ತು ಕಾರಣವಿಲ್ಲದೇ ತಂಮ ಸಾಲಿಯ ಕೆಲಸವಂನು ಶೀಕ್ಷಕರ ಕಡಿಗೆ ಒಪ್ಪಿಸಿ ನಂಮ ಭೆಟ್ಟಿಗೆ ಬರುತ್ತಾರೆ. ಇದು ಬಹಳ ಗೈರಸಿಸ್ತು. ಅದರಿಂದ ಬೆಳಗಾಂವಿ ಮತ್ತು ಉತ್ತರಕನಡ ಯಿವೆರಡು ಜಿಲ್ಹೆಗಳಲ್ಲಿರುವ ಯಾವತ್ತು ಪಂತೋಜಿಗಳಿಗೆ ತಿಳಿಯ ಪಡಿಸುವದೇನಂದರೆ - ಅವರು ಮೊದಲು ನಂಮ ಕಡಿಯಿಂದ ಅಪ್ಪಣೆ ತೆಗದುಕೊಳ್ಳದೆ ನಂಮ ಭೆಟ್ಟಿಗೆ ಬರುವದೇನು ಕಾರಣವಿಲ್ಲವು; ಬಂದರೆ ಆ ವಿಷಯಕ್ಕೆ ಜವಾಬು ಕೊಡಬೇಕಾಗುವುದು.

ತಾ|| ೨೪ ಫೆಬ್ರೂಆರಿ ೧೮೬೬
ಗೊಕಾವಿ

Chanbussappa B. Dharwarker
ಡಿ. ಇ. ಇ. ಬೆಳಗಾವ ಮತ್ತು ಉತ್ತರಕಾನಡಾ

(ಮಠಪತ್ರಿಕೆ : ೧-೧೨, ಪು.೨೮೩-೮೪ - ಮಾರ್ಚ ೧೮೬೬)

೫

## Notice
## ನೋಟಿಸು

ಬೆಳಗಾವಿ ಮತ್ತು ಉತ್ತರಕಾನಡಾ ಯಿವೆರಡು ಜಿಲ್ಹೆಗಳಲ್ಲಿರುವ ಯಾವತ್ತು ಪಂತೋಜಿಗಳಿಗೆ ತಿಳಿಸುವದೇನಂದರೆ - ನಂಮ ಕಡಿಗೆ ಬರುವ ಕಾಗದ ಪತ್ರಗಳಲ್ಲಿ ಕೆಲವು ಪಂತೋಜಿಗಳು ಶುದ್ಧ ಬರಿಯುವದರ ಕಡಿಗೆ ಬಹುದುರ್ಲಕ್ಷ ಮಾಡಿರುವದು ನಂಮ ದೃಷ್ಟಿಗೆ ಬೀಳುತ್ತದೆ. ಆಂದರೆ ಯಿವತ್ತಿನಿಂದ ಹಿಡಿದು ಅವರು ಶುದ್ಧ ಬರಿಯುವದರ ಕಡಿಗೆ ಹೆಚ್ಚ ಲಕ್ಷಕೊಡಬೇಕು.

ತಾ|| ೨೬ನೇ ಫೆಬ್ರೂಆರಿ ಸಂನ ೧೮೬೬ ಯಿಸವಿ.
ಮುಕ್ಕಾಂ ಹುಕ್ಕೆರಿ

Chanbussappa B. Dharwarker
ಡಿ. ಇ. ಇ. ಬೆಳಗಾವ ಮತ್ತು ಉತ್ತರಕಾನಡಾ

(ಮಠಪತ್ರಿಕೆ : ೧-೧೨, ಪು.೨೮೪ - ಮಾರ್ಚ ೧೮೬೬)

೬

## Notice
## ನೋಟಿಸು

ಬೆಳಗಾವಿ ಜಿಲ್ಹೆಯಲ್ಲಿರುವ ಯಾವತ್ತು ಪಂತೋಜಿಗಳಿಗೆ - ಈ ಸರಕುಲರ ನೋಟಿಸಿನಿಂದಾ ತಿಳಿಯಪಡಿಸುವದೇನಂದರೆ, ಪಂತೋಜಿಗಳನ್ನು ಒಂದೂರಿಂದ ಮತ್ತೊಂದೂರಿಗೆ ವರ್ಗ ಮಾಡಿದರೆ ಅವರು ಹುಕ್ಕುಂ ಕಂಡಕೂಡ್ಲೆ ತಮ್ಮ ತಯಾರಿ ಮಾಡಿಕೊಂಡು ನೇಮಿಸಿದ ಊರಿಗೆ ಹೊಗುವದನ್ನು ಬಿಟ್ಟು ನಮ್ಮ ಕಡಿಗೆ ತಾವು ಬಂದು ಅನೇಕ ತರಹೇದ ಸುಳ್ಳು ಹೆಳುತ್ತಾರೆ ಯಿಲ್ಲವೆ ಸುಳ್ಳ ಮಜಕೂರಿನ ಅರ್ಜಿಯನ್ನು ಕಳುಹಿಸುತ್ತಾರೆ, ಈ

ಯತ್ನಗಳಿಂದ ಬಂದ ಸಂಕಟ ದೂರಾಗದ ಹಾಂಗೆ ಕಂಡರೆ, ಊರವರ ಕಡಿಯಿಂದ ಪಂತೋಜಿನ ನಮ್ಮ ಊರಲ್ಲಿ ಇಡವದಕ್ಕೆ ಹುಕ್ಕುಂ ಆಗಬೇಕು. ಈ ಪಂತೋಜಿನ ಯರಡನೆ ಕಡಿಗೆ ಬದಲಿ ಮಾಡಿದರೆ ನಂಮ ಹುಡುಗರ ಅಭ್ಯಾಸ ನೆಟ್ಟಗಾಗಲಿಕ್ಕಿಲ ಎಂಬ ಮೊದಲಾದ ಮಜಕೂರಿನ ಅರ್ಜಿ ತಾವೇ ತಯಾರ ಮಾಡಿ ಅದರ ಕೆಳಗೆ ಗ್ರಾಮಸ್ತರ ಸಹಿ ತೆಗಿದುಕೊಂಡು ನಮ್ಮ ಕಡಿಗೆ ಕಳಹಿಸುವ ಹಂಚಿಕಿ ಮಾಡುತ್ತಾರೆ, ಹಿಗೆ ಮಾಡವದು ಬಾಹಳ ಗೈರು. ಆದರೆ ಪಂತೋಜಿಗಳ ಬದಲಿ ಆದ ಕೂಡಲೆ ಯಾವ ಗ್ರಾಮಕ್ಕೆ ಬದಲಿ ಆಗುವರು ಅಲ್ಲಿಗೆ ಹೋಗಿ ಅಲ್ಲಿಂದ ಮಾಡತಕ್ಕ ಪ್ರಯತ್ನ ಮಾಡಬೇಕು.

ತಾರೀಖ ೨೨ ಮಾರ್ಚ ೧೮೭೬ ಇಸವಿ.
ಮುಕ್ಕಾಮ ಅಥಣಿ

Chanbussappa B. Dharwar
ಡಿ. ಇ. ಇನಸ್ಪೆಕ್ಟರ ಜಿಲ್ಲಾ ಬೆಳಗಾವ

(ಮಠಪತ್ರಿಕೆ : ೧-೧೩, ಪು.೩೦೦-೩೦೧ - ಎಪ್ರೀಲ್ ೧೮೭೬)

೭

## Notice
## ನೋಟಿಸು

ಬೆಳಗಾವಿ ಜಿಲ್ಹೆಯೊಳಗಿರುವ ಯಾವತ್ತು ಪಂತೋಜಿಗಳಿಗೆ -

ಈ ನೋಟಿಸಿನಿಂದ ತಿಳಿಯಪಡಿಸುವದೇನಂದರೆ, ನಾವು ಸಾಲಿಗಳ ಪರಿಕ್ಷೆ ತೆಗಿದುಕೊಂಬೋ ಸಮಯದಲ್ಲಿ ಪಂತೋಜಿಗಳಿಗೆ ಯೇನಾದರು ಕೇಳಿದರೆ ಅವರು ನಮಗೆ ಆದು ಬರುವದಿಲ್ಲಾ ಅಥವಾ ನಾವು ಅವಂನು ಮರತೆವು ಎಂದು ಹೇಳುತ್ತಾರೆ. ಇದು ಅವರಿಗೆ ಅತಿ ಅಯೋಗ್ಯವೂ.

ಪಂತೋಜಿಗಳು ಮನಿಯಲ್ಲಿ ಕೂಡಿದ್ದಾಗ್ಗೆ ಅಭ್ಯಾಸ ಮಾಡುತ್ತಿರಬೇಕು. ಅಂದರೆ ಕಲಿತಷ್ಟಾದರೂ ಮರಿಯಲಿಕ್ಕಿಲ್ಲಾ. ಬರುವ ವರುಷ ಹೀಗೆ ಮೇಹನತ ಮಾಡದ ಪಂತೋಜಿಗಳು ನಂಮ ಕಣ್ಣಿಗೆ ಬಿದ್ದರೆ ಅವರ ವಿಷಯಕ್ಕೆ ನಮ್ಮ ಮನಸ್ಸಿಗೆ ಬಂದಂತೆ ನಾವು ತಜವಿಜಿಯಂನು ನಡಿಸುವೆವು.

ತಾವು ಬಹು ಶಾಹಣೇರು ಮತ್ತು ಬಹು ಹುಷಾರಿಯಿಂದ ಕೆಲಸ ನಡಿಸುವವರು ಎಂದು ನಮಗೆ ತೋರಿಸಬೇಕೆಂಬ ಹುಚ್ಚಮನಸ್ಸಿನಿಂದ ಕೆಲವು ಪಂತೋಜಿಗಳು ತಮ್ಮ ಹಿಂದಿನ ಚರಿತ್ರಿಯನ್ನು ತಮ್ಮ ಬಾಯಿಂದ ನಂಮ ಮುಂದೆ ವರ್ಣನೆ ಮಾಡಿ ಬಹು ಸಂತೋಷಬಡುವಂತೆ ಕಾಣುತ್ತಾರೆ. ಇಂಥವರನ್ನು ನೋಡಿ ನಮಗೆ ಶಿಟ್ಟು ಮತ್ತು ನಗಿಯು ಕೂಡಾ ಬರುತ್ತಾವೆ. ಆದರೆ ಸ್ವಂತ ಶ್ರಮದಿಂದ ತಮ್ಮ ಅಭ್ಯಾಸವಂನು ಹೆಚ್ಚಸುವವರಿಗೆ ಯೇನಾದರೂ ಪ್ರಯೋಜನವಾಗು ವದಲ್ಲದೇ ಇಂಥಾ ಹುಚ್ಚ ಆತ್ಮಸ್ತುತಿಗಳಿಂದ ನಾಶಮಾತ್ರವಾಗುವದು.

ತಾ।। ೨೬ ಮಾರ್ಚ
ಮುಕ್ಕಾಂ ಕೊಕಟನೂರು

Chanbussappa B. Dharwar
ಡಿ. ಇ. ಇ. ಜಿಲ್ಲಾ ಬೆಳಗಾವ.

(ಮಠಪತ್ರಿಕೆ : ೧-೧೩, ಪು. ೩೦೧-೩೦೨ - ಎಪ್ರೀಲ್ ೧೮೭೬)

## ೮

## ನೋಟಿಸು

ಬೆಳಗಾವಿ ಮತ್ತುತ್ತರಕಾನಡಾ ಯಿವೆರಡು ಜಿಲ್ಹೆಗಳಲ್ಲಿರುವ ಯಾವತ್ತು ಪಂತೋಜಿಗಳಿಗೆ ತಿಳಿಯಪಡಿಸುವದೇನಂದರೆ, ಹುಡುಗರ ಕಡಿಯಿಂದ ಸಾಲಿ ಫಿ ಯಿಸಕೊಂಡು ಮಾಫಿಯಂತೆ ಅವರ ಹೆಸರು ದಾಖಲ ಮಾಡಿ ತಂಮ ಬದಲಿ ಯರಡನೇ ಸ್ಥಳಕ್ಕೆ ಆಗಿ ಅಲ್ಲಿಗೆ ತಾವು ಹೋಗುವ ಮುಂದೆ ಆ ಹುಡುಗರಿಗೆ ನಾವು ಮಾಫಿ ಯಿದ್ದವರೆಂದು ಬರುವ ಪಂತೋಜಿಗಳಿಗೆ ಹೇಳರೆಂದು, ಹೇಳಿದ್ದೂ ನಮ್ಮ ನಜರಿಗೆ ಬಿತ್ತೂ. ಈ ವಹಿವಾಟು ಬಾಹಳಗ್ಯೆರು. ಇಂಥವರ ಮೇಲೆ ಸರಕಾರಿ ಖಟ್ಲೆ ತಯಾರ ಆಗುವದಕ್ಕೆ ಅಡಚಣೆಯಿಲ್ಲಾ. ಪರಂತು ಈಗ ನಮಗೆ ಸಬಲ ಸಾಕ್ಷಿಗಳು ಸಿಗದ ಕಾರಣ ನಾವು ಇದರ ಕಡಿಗೆ ದುರ್ಲಕ್ಷ ಮಾಡುತ್ತೇವೆ. ಆದರೆ ಯಿಂಥಾ ಅಪರಾಧಗಳಂನು ಮಾಡಿದವರು ನಂಮಗೆ ಸಿಕ್ಕರೆ ನಾವು ಅವರ ವಿಷಯಕ್ಕೆ ತಕ್ಕ ತಜವೀಜ ಮಾಡುವೆವು.

ತಾ॥ ೩೦ ಮಾರ್ಚ ಸನ ೧೮೬೬ ಯಿಸವಿ
ಮುಕ್ಕಾಮ ಮುಗೊಳಖೊಡ.

Chanbussappa B. Dharwar
ಡಿ. ಇ. ಇ. ಜಿಲ್ಹಾ ಬೆಳಗಾವ.

(ಮಠಪತ್ರಿಕೆ : ೧-೧೩, ಪು. ೩೦೨-೩೦೩ - ಎಪ್ರೀಲ್ ೧೮೬೬)

## ೯

## ನೋಟಿಸು

ಬೆಳಗಾವಿ ಮತ್ತು ಉತ್ತರಕಾನಡಾ ಯಿವೆರಡು ಜಿಲ್ಹೆಗಳಲ್ಲಿರುವ ಯಾವತ್ತೂ ಪಂತೋಜಿಗಳಿಗೆ ಈ ನೋಟಿಸಿನಿಂದ ತಿಳಿಯಪಡಿಸುವದೇನಂದರೆ, ಕೆಲವು ಪಂತೋಜಿಗಳು ತಂಮ ರಿಜಿಸ್ಟರ ಬುಕ್ಕಿನಲ್ಲಿ ೪೦ ಅಥವಾ ೫೦ ಹುಡುಗರ ಹೆಸರುಗಳನ್ನು ಬರದಿರುತ್ತಾರೆ. ಪರಂತು ಪರಿಕ್ಷಾ ತೆಗದುಕೊಳೊ ಸಮಯದಲ್ಲಿ ೧೦ ಅಥವಾ ೧೫ ಹುಡುಗರು ಹಾಜರು ಇರುತ್ತಾರೆ. ಹೀಗಿರುವ ಕಾರಣನ್ನು ಕೇಳಿದರೆ ಪಂತೋಜಿಗಳು ಅಗರಬಗ್ಯೆರೆ ಹೇಳುತ್ತಾರೆ. ಅದರಿಂದ ಯಿವರು ಬರದ ರಿಜಿಸ್ಟರ ಬುಕ್ಕಿಗೆ ಖರೇ ಅಂಬುವದಕ್ಕೆ ಸ್ವಲ್ಪ ಸಂಶಯ ಬರುತ್ತಾದೆ. ಅಂದರೆ ಪಂತೋಜಿಗಳು ಈ ಸಂಶಯ ದೂರು ಆಗುವ ಹಾಗೆ ಮುಂದೆ ನಡಕೊಳ್ಳಬೇಕು.

ತಾ॥ ೩೧ ಮಾರ್ಚ ೧೮೬೬ ಯ್ಸಿವಿ
ಮುಕ್ಕಾಮ ಯಾದವಾಡ.

Chanbussappa B. Dharwar
ಡಿ. ಇ. ಇ. ಜಿಲ್ಹಾ ಬೆಳಗಾವ.

(ಮಠಪತ್ರಿಕೆ : ೧-೧೩, ಪು. ೩೦೩-೩೦೪ - ಎಪ್ರೀಲ್ ೧೮೬೬)

## ೧೦

## ಸರಕ್ಯೂಲರ

ಬೆಳಗಾವಿ ಜಿಲ್ಹೇದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕಟರರು ತಂಮ ತಾಬೇದಲ್ಲಿರುವ ಯಾವತ್ತು ಕನ್ನಡ ಪಂತೋಜಿಗಳಿಗೆ ಮತ್ತು ಅಶಿಷ್ಟೆಂಟ ಪಂತೋಜಿಗಳಿಗೆ ತಿಳಿಸುವದೇನಂದರೆ-

ನಾವು ಈ ವರ್ಷ ಸಾಲಿಗಳ ಪರಿಕ್ಷಾ ತೆಗೆದುಕೊಳ್ಳುವಾಗ್ಗೆ ನಮ್ಮ ದೃಷ್ಟಿಗೆ ಈ ಕೆಳಗೆ ಬರದಿರುವ ತಪ್ಪುಗಳು ಬಿದ್ದವು. ಅಂದರೆ ಪಂತೋಜಿಗಳು ಮುಂದೆ ನೆಟ್ಟಗೆ ಕಲಿಸಲಿಕ್ಕೆ ಆರಂಭ ಮಾಡಬೇಕು. ಯಾವ ಪಂತೋಜಿಗಳಾದರೂ ಮೇಹನತಿನಿಂದ ಮನಸ್ಸು ಕೊಟ್ಟು ಕಲಿಸದ್ದು ಮುಂದಿನ ವರ್ಷ ಪರಿಕ್ಷದ ಸಮಯಕ್ಕೆ ಕಂಡು ಬಂದರೆ ಅದರ ವಿಷಯಕ್ಕೆ ಯೋಗ್ಯ ತಜವೀಜು ಮಾಡಲಾಗುವದು.

೧ ವ ಕ್ಕೆ ಸಂಣ ಏ ಮತ್ತು ಛಕ್ಕೆ ದೊಡ್ಡ ಏ ಎಂದು ಹುಡುಗರು ಅನ್ನುತ್ತಾರೆ. ಹಾಗೆ ಪಂತೋಜಿಗಳು ಕಲಿಸಬಾರದು. ಶಿಕ್ಷಕರು ಕಲಿಸುತ್ತಿದ್ದರೆ ಕಲಿಸಗೊಡಬಾರದು.

೨ ದ್ವಿತ್ತ್ವ ಅಕ್ಷರಗಳು ಅಂದರೆ ಕ್ವ, ತ್ವ, ನ್ವ ಇತ್ಯಾದಿ ಅಕ್ಷರಗಳನ್ನು ಕವ, ತವ, ಇನವು ಎಂತ ಉಚ್ಚಾರ ಮಾಡುತ್ತಾರೆ ಮತ್ತು ಬರಿಯುತ್ತಾರೆ. ಹೀಗೆ ಉಚ್ಚಾರ ಮಾಡಗೊಡಬಾರದು ಮತ್ತು ಬರಿಯಗೊಡಬಾರದು.

೩ ಶ ಬರಿಯೆಂದರೆ ಹುಡುಗರು ಸ ಆಗಲಿ ಅಥವಾ ಷ ಆಗಲಿ ಬರಿದು ತೋರಿಸುತ್ತಾರೆ ಹಾಗೆ ಬರಿಯಗೊಡಬಾರದು. ಶ, ಸ, ಮತ್ತು ಷ ಇವುಗಳಲ್ಲಿರುವ ಭೇದವನ್ನು ನೆಟ್ಟಗೆ ತಿಳಿಸಿಕೊಡಬೇಕು.

೪ ಹುಡುಗರು ಸಪ್ತಮಿ ಎಂಬುದನ್ನು ಸತ್ತಮಿ ಎನ್ನುತ್ತಾರೆ. ಬಹುವಚನವೆಂಬುವದನ್ನು ಬವುವಚನವೆನ್ನುತ್ತಾರೆ. ಈಶ್ವರ ಎಂಬುದನ್ನು ಈಸ್ವರ, ಈಷ್ವರ ಎಂತ ಅನ್ನುತ್ತಾರೆ. ಆದರೆ ಹೀಗೆ ಅನ್ನಗೊಡಬಾರದು.

೫ ಕನ್ನಡ ಮೊದಲನೇ, ಎರಡನೇ, ಮೂರನೇ ಮೊದಲಾದ ಪುಸ್ತಕಗಳನ್ನು ಸುಮ್ಮನೆ ಉದ್ದಕ ಓದಲಿಕ್ಕೆ ಕಲಿಸುತ್ತಾರೆ. ಹುಡುಗರುಗಳಿಗೆ ಓದಿದ ವಾಕ್ಯಗಳ ಅರ್ಥ ತಿಳಿಯುವದಿಲ್ಲಾ. ಅಂದರೆ, ಹೀಗೆ ಕಲಿಸದೆ ವಾಕ್ಯಗಳ ಅರ್ಥವನ್ನು ಕಲಿಸಬೇಕು. ಅಂದರೆ ಕಲಿಸಿದ ಹಾಗಾದೀತು.

೬ ಧೂಳಾಕ್ಷರಗಳ ಕಲಿಯುವ ಹುಡುಗರ ಕಡಿಗೆ ಮುಖ್ಯ ಪಂತೋಜಿಗಳು ಬಿಲ್‌ಕುಲ್ ಲಕ್ಷ ಕೊಡುವದಿಲ್ಲಾ ಇದು ಬಹಳ ಗೈರಶಿಸ್ತು. ಮುಂದೆ ಹೀಗೆ ಮಾಡಬಾರದು.

೭ ಕನ್ನಡಸಾಲಿಗಳಲ್ಲಿ ಯಾವತ್ತು ವಿಷಯಗಳನ್ನು ಕನ್ನಡಿನಲ್ಲಿ ಕಲಿಸುವದಿಲ್ಲಾ. ಇದು ಬಂದು ಮಾಡಿ ಯಾವತ್ತು ವಿಷಯಗಳನ್ನು ಕನ್ನಡದಲ್ಲಿ ಕಲಿಯಬೇಕು. ಲೆಖ್ಖ ಮಾಡುವಾಗ್ಗೆ ಕನ್ನಡ ಅಂಕಿಗಳನ್ನು ಹಾಕಬೇಕು. ಆರೆ ಅಂಕಿಗಳನ್ನು ಹಾಕಗೊಡಬಾರದು.

೮ ಕೆಲವು ಸಾಲಿಗಳಲ್ಲಿ ೩ ಅಥವಾ ೪ ಹುಡುಗರವೊಂದು ವರ್ಗ ಮಾಡುತ್ತಾರೆ. ಹೀಗೆ ಯಿರಬಾರದು. ಒಂದು ವರ್ಗದಲ್ಲಿ ೨೦ರ ಕಿಂತಲು ಕಡಿಮೆ ಹುಡಗರು ಇರಬಾರದು.

೯ ಒಂದೇ ವರ್ಗದಲ್ಲಿ ಬೇರೆ ಬೇರೆ ಅಭ್ಯಾಸ ಮಾಡುವ ಹುಡುಗರನ್ನು ಹಾಕಿರುತ್ತಾರೆ. ಹೀಗೆ ಮಾಡಬಾರದು. ಒಂದೇ ಪ್ರಕಾರದ ವಿಷಯಗಳನ್ನು ಕಲಿಯುವ ಹುಡಗರನ್ನು ಒಂದು ವರ್ಗದಲ್ಲಿ ಇಡಬೇಕು.

೧೦ ಕೆಲವು ಪಂತೋಜಿಗಳಿಗೆ ೧ನೇ ಎರಡನೇ ಪುಸ್ತಕಗಳೊಳಗಿನ ಶಬ್ದಗಳು ಬರುವದಿಲ್ಲಾ. ಅಂದರೆ ಯಾರಿಗೆ ಯಾವ ಶಬ್ದಗಳು ಬರುವದಿಲ್ಲಾ ಆವರು ಆ ಶಬ್ದಗಳನ್ನು ಬರದು ಇತ್ತ ಕಡೆ ಕಳುಹಿಶಿ ಕೊಟ್ಟರೆ ಅವುಗಳ ಅರ್ಥವನ್ನು ಬರೆದು ಕಳುಹಿಸುವೆವು.

೧೧ ಕೆಲವು ಪಂತೋಜಿಗಳು ತಮಗೆ ಶುದ್ಧ ಬರಿಯಲಿಕ್ಕೆ ಬರದ ಕಾರಣದಿಂದಾಗಲಿ ಅಥವಾ ಮನಸುಗೊಟ್ಟು ಬರಿಯುದ ಕಾರಣದಿಂದಾಗಲಿ ನಮ್ಮ ಕಡಿಗೆ ಕಳುಹಿಸುವ ಕನ್ನಡ ಕಾಗದಪತ್ರಗಳಲ್ಲಿ ನಾನಾಪ್ರಕಾರದ ತಪ್ಪುಗಳನ್ನು ಮಾಡುತ್ತಾರೆ. ಅಂದರೆ ಇಂಥವರು ನೆಟ್ಟಗೆ ಬರಿಯಲಿಕ್ಕೆ ಕಲಿಯಬೇಕು.

ತಾರೀಖು ೨೪ ಜೂನ ೧೮೬೭ ಯಿಸವಿ
ಮುಕ್ಕಾಂ ಬೆಳಗಾವಿ.

[Signed] Chanbussappa B. D.
ಡಿಪುಟಿ ಇಜ್ಯುಕೇಶನಲ್ ಇ. ಜಿಲ್ಹಾ ಬೆಳಗಾವ.

(ಶಾಲಾಪತ್ರಿಕೆ: ೩-೩, ಪುಟ. ೮೪-೮೭ - ಜ್ಯೂನ ೧೮೬೭)

## ೧೧

## ನೋಟಿಸು

ಬೆಳಗಾವಿ ಜಿಲ್ಹೇದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರ್ ಯಿವರು ಸದರ ಜಿಲ್ಹೇದೊಳಗಿನ ಯಾವತ್ತು ಕನ್ನಡ ಸಾಲಿಗಳ ಪಂತೋಜಿಗಳಿಗೆ ಈ ಸರಕ್ಯೂಲರ ನೋಟಿಸಿನಿಂದ ತಿಳಿಸುವದೇನಂದರೆ, - ಮಾರಿಸ ಸಾಹೇಬರು ಯಿಂಗ್ಲಿಷನಲ್ಲಿ ಮಾಡಿದ ಹಿಂದೂ ದೇಶದ ಚರಿತ್ರದ ಭಾಷಾಂತರ ಕನ್ನಡಿನಲ್ಲಿ ಆಗೆದೆ ಆ ಕನ್ನಡಿ ಭಾಷಾಂತರವನ್ನು ಕನ್ನಡ ಸಾಲಿಗಳಲ್ಲಿ ಕಲಿಸಬೇಕು. ಈ ಪುಸ್ತಕಗಳು ಬೆಳಗಾಂವಿ ಬುಕ್ಕ ಡಿಪೋದಲ್ಲಿ ಶಿಗುತ್ತವೆಂಬುದಕ್ಕ ಡಿಪೋ ಯಿದ್ದ ಪಂತೋಜಿಗಳು ತಂಮ ತಾಲೂಕಿಗೆ ಬೇಕಾದಷ್ಟು ಪುಸ್ತಕಗಳನ್ನು ತರಸಿಕೊಳ್ಳಬೇಕು. ಆವಾವ ವರ್ಷ ಪರಿಕ್ಷದ ಸಮಯದಲ್ಲಿ ಈ ಪುಸ್ತಕದೊಳಗಿನ ಪ್ರಶ್ನೆಗಳನ್ನು ಮಾಡುವೆವು. ಯಿದಲ್ಲದೆ ಕನ್ನಡ ವ್ಯಾಕರಣವನ್ನು ನೆಟ್ಟಗೆ ಕಲಿಸಬೇಕು.

ತಾರೀಖು ೨೪ ಜುಲಾಯಿ ೧೯೬ ಯಿ||
ಬೆಳಗಾವಿ

[Signed] Chanbassappa B. Dharwar
ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರ್
ಜಿಲ್ಹಾ ಬೆಳಗಾವ.

(ಶಾಲಾಪತ್ರಿಕೆ: ೩-೪, ಪುಟ. ೧೧೬ - ಜುಲೈ ೧೮೬೭)

## ೧೨

### ಸರಕ್ಯೂಲರ ನೋಟಿಸು

ಬೆಳಗಾವಿ ಜಿಲ್ಹೇದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರ್‌ರವರ ಕಡಿಯಿಂದ ಸದರ ಜಿಲ್ಹೇದೊಳಗಿನ ಯಾವತ್ತು ಸ್ಕೂಲ ಮಾಸ್ತರರಿಗೆ ತಿಳಿಸುವದೇನಂದರೆ - ಈ ಕೆಳಗೆ ಛಾಪಿಸಿದ ನಮೂನೆಯಂತೆ ಒಂದೊಂದು ನಮೂನೆ ತಯಾರು ಮಾಡಿ ಅವುಗಳಲ್ಲಿ ತಂಮ ತಂಮ ಸಾಲಿಗಳಲ್ಲಿ ೧೦ ರೂಪಾಯಕಿಂತ ಕಡಿಮೆ ಪಗಾರ ಯಿಲ್ಲದವರ ಹೆಸರು ಮುಂತಾದವುಗಳನ್ನು ತುಂಬಿ ಇತ್ತ ಕಡಿಗೆ ಕಳುಹಿಸಿಕೊಡಬೇಕು.

ತಾರೀಖು ೨೬ ಜುಲಾಯಿ ೧೮೬೭ ಯಿ||
ಬೆಳಗಾವಿ

[Signed] Chanbassappa B. Dharwar
ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರ್
ಜಿಲ್ಹಾ ಬೆಳಗಾವ.

(ಯಿಲ್ಲೆ ಊರ ಹೆಸರು ಬರಿಯರಿ) ಸಾಲಿಯಲ್ಲಿ ೧೦ ರೂಪಾಯಿಗಳಕಿಂತ ಕಡಿಮೆ ಪಗಾರ ದೊರೆಯದೆ ಯಿದ್ದವರ ರಿಜಷ್ಟರು

| ರಜಿಷ್ಟರ ನಂಬರು | ಈ ಸಾಲೆದಲ್ಲಿ ಕಲಿತ ತಾರೀಖು.... | ಹುದ್ದೆ | ಹೆಸರು, ತಂದಿ ಹೆಸರು ಅಡ ಹೆಸರು | ಜಾತಿ | ಕುಟುಂಬವು ಯಿರುವ ಸ್ಥಳ | | | ಹುಟ್ಟಿದ ತಾರೀಖು ಯಿಸವಿ | ಈ ಜಾಗಾ ಸಿಗುವದಕ್ಕಿಂತ ಮುಂಚೆಯಲ್ಲಿ ಯಾವ ಕೆಲಸದ ಮೇಲೆ | ಶೆರಾ |
|---|---|---|---|---|---|---|---|---|---|---|
| | | | | | ಊರು | ತಾಲೂಕ | ಜಿಲ್ಹೆ | | | |
| | | | | | | | | | | |

ಯಿಲ್ಲೆ ಪಂತೋಜಿಗಳು ತಂಮ ಸಹಿ ಹಾಕಬೇಕು.

[Signed] Chanbassappa B. Dharwar
ಡಿ. ಇ. ಇ. ಜಿಲ್ಹಾ ಬೆಳಗಾವ.

(ಶಾಲಾಪತ್ರಿಕೆ: ೩-೪, ಪುಟ. ೧೧೭-೧೧೮ - ಜುಲೈ ೧೮೬೭)

## ೧೩

### ನೋಟಿಸು

ಬೆಳಗಾವಿ ಜಿಲ್ಹೇದಲ್ಲಿರುವ ಯಾವತ್ತು ಕನ್ನಡ ಸಾಲಿಗಳ ಪಂತೋಜಿಯವರಿಗೆ ಕೆಳಗೆ ಸಹಿ ಮಾಡುವ ಕಡಿಯಿಂದ ತಿಳಿಯಪಡಿಸುವದೇನೆಂದರೆ - ಈಗ ಯೆರಡು ತಿಂಗಳ ಮುಂದೆ

ನಮ್ಮ ಕಡಿಗೆ ಕಳುಹಿಸುವ ಕಾಗದ ಪತ್ರಗಳನ್ನು ಕನ್ನಡಿನಲ್ಲಿ ಬರದು ಕಳುಹಿಸುತ್ತ ಹೋಗಬೇಕೆಂದು ನೋಟಿಸು ಕೊಟ್ಟರಲಿಕ್ಕಾಗಿ ನಿಂಮಲ್ಲಿಯ ಕೆಲವರ ಕಡಿಯಿಂದ ಕನ್ನಡಿನಲ್ಲಿ ಕಾಗದ ಪತ್ರಗಳು ಬರುವದಿಲ್ಲಾ. ಅಂದರೆ ಇನ್ನು ಮೇಲೆ ಹೀಗೆ ಮಾಡದೆ ಕನ್ನಡಿನಲ್ಲಿ ಬರದು ಕಳುಹಿಸುತ್ತ ಹೋಗಬೇಕು. ಯಾರಿಗೆ ಕನ್ನಡು ಬರಿಯಲಿಕ್ಕೆ ಬರುವದಿಲ್ಲ ಅವರು ಕನ್ನಡು ಬರಿಯಲಿಕ್ಕೆ ಕಲಿಯಬೇಕು.

ತಾರೀಖು ೧೨ ಆಗಸ್ಟ ೧೮೬೭ ಯಿಸವಿ.
ಬೆಳಗಾವಿ.

[Signed] Chanbasapa B. D.
ಡಿಪುಟಿ ಇಜ್ಯುಕೇಶನಲ್ ಇ. ಜಿ. ಬೆಳಗಾವ.

(ಶಾಲಾಪತ್ರಿಕೆ: ೩-೫, ಪುಟ. ೧೪೮ - ಆಗಸ್ಟ ೧೮೬೭)

## ೧೪

ಬೆಳಗಾವಿ ಜಿಲ್ಹೆದೊಳಗಿನ ಯಾವತ್ತು ಕನ್ನಡ ಸ್ಕೂಲಮಾಸ್ತರರಿಗೆ.

ಈ ನೋಟಿಸಿನಿಂದ ತಿಳಿಯುವದೇನಂದರೆ - ನಿಂಮ ಸಾಲಿಗಳಲ್ಲಿ ನೀವು ಹುಡುಗರಿಗೆ ಯಾವತ್ತು ವಿಷಯಗಳನ್ನು ಕನ್ನಡಿನಲ್ಲಿ ಕಲಿಸಬೇಕು. ಮತ್ತು ಕನ್ನಡ ಅಂಕಿಗಳಿಂದ ಲೆಖ್ಖ ಮಾಡಿಸಬೇಕು. ಯಿದರಂತೆ ಹಿಂದಕ್ಕೆ ನೋಟಿಸು ಕೊಟ್ಟಿದ್ದು ಕೆಲವು ಮಾಸ್ತರರು ಅದರಂತೆ ನಡಿಯುವದಿಲ್ಲವೆಂತ ಕೇಳುತ್ತೇವೆ. ಆದರಿಂದ ತಿರಿಗಿ ಈ ನೋಟಿಸು ಛಾಪಿಸಿದ್ದೇವೆ.

ತಾರೀಖು ೨೬ ಆಗಸ್ಟ ೧೮೬೭ ಯಿ||
ಮುಕ್ಕಾಮ ಬೆಳಗಾಂವಿ.

[Signed] Chanbasapa B. D.
ಡಿ. ಇ. ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೩-೫, ಪುಟ ೧೫೩ - ಆಗಸ್ಟ ೧೮೬೭)

## ೧೫

### ನೋಟಿಸು

ಬೆಳಗಾವಿ ಜಿಲ್ಹೇದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರರ ಕಡಿಯಿಂದ, ಗೋಕಾಂವಿ, ಪರಸಗಡ ಮತ್ತು ಸಂಪಗಾಂವಿ,ಈ ಮೂರು ತಾಲೂಕಗಳಲ್ಲಿರುವ ಯಾವತ್ತು ಸ್ಕೂಲ ಮಾಸ್ತರರಿಗೆ ತಿಳಿಸುವದೇನಂದರೆ - ಹಿಂದಕ್ಕೆ ನಾವು ನಿಂಮ ಸಾಲಿಗಳಲ್ಲೆಲ್ಲಾ ಬಾಳಬೊಧ ಪುಸ್ತಕಗಳನ್ನು ವೊದಲಿಕ್ಕೆ ಕಲಿಸದೆ ಕನ್ನಡು ಕಲಿಸಬೇಕೆಂದು ಹೇಳಿದ್ದಿವಿ. ಅದರಂತೆ ವಹಿವಾಟು ನಡಸಿದ್ದೀರಾಧೀತು. ಯಲ್ಲೆ ಇಂನು ವಹಿವಾಟು ನಡದಿರಲಿಕ್ಕಿಲಾ ಅಲ್ಲೆ ಈ ನೋಟಿಸ ಕಂಡ ದಿನದಿಂದ ಬಾಳಬೊಧ ವೊದಿಸುವದು ಬಂದು ಮಾಡಬೇಕು. ಮತ್ತು ಯಾವತ್ತು ವಿಷಯಗಳನ್ನು ಕನ್ನಡಿನಿಂದ ಕಲಿಸಬೇಕು. ಬೇಕಾದರೆ ಆರೆಚೀಟು ವೊದಲಿಕ್ಕೆ ಕಲಿಸಬೇಕು.

ತಾರೀಖು ೧೧ ಸಪಟಂಬರ ೧೮೬೭ ಯಿ||
ಬೆಳಗಾಂವಿ.

[Signed] Chanbassappa B. Dharwar.
ಡಿಪುಟಿ ಇ. ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೩-೬, ಪುಟ ೧೭೪-೧೭೫ - ಸೆಪ್ಟೆಂಬರ ೧೮೬೭)

## ೧೬

## ನೋಟಿಸು

ಗೋಕಾಂವಿ, ಸಂವದತ್ತಿ ಮತ್ತು ಸಂಪಗಾಂವಿ ತಾಲೂಊಕಿನಲ್ಲಿರುವ ಯಾವತ್ತು ಮಾಸ್ತರರಿಗೆ ತಿಳಿಸುವದೇನಂದರೆ - ನೀವು ನಿಂಮ ದಫ್ತರಗಳನ್ನು ಕನ್ನಡಿನಲ್ಲಿ ಯಿಡ್ರಿ. ಯಿತ್ತ ಕಡಿಯಿಂದಾಗಲಿ ಅಥವಾ ಮತ್ಯಾವ ಕಕಡಿಯಿಂದಾಗಲಿ ನಿಮಗೆ ಆರೆ ಬದರು ಬಂದರೂ ಸಹಾ ನೀವು ಕನ್ನಡಿನಲ್ಲಿ ಉತ್ತರ ಕೊಡುತ್ತ ಬರ್ರಿ. ಯಿನ್ನ ಮೇಲೆ ನಂಮ ಕಡಿಗೆ ಬರುವ ಕಾಗದಗಳು ಆರೇದಲ್ಲಿ ಬರಬಾರದು.

ತಾರೀಖ ೧೬ ಸಪಟಂಬರ ೧೮೬೭ ಯಿ||
ಬೆಳಗಾಂವಿ.

[Signed] Chanbassappa B. Dharwar
ಡಿಪುಟಿ ಇ. ಇ. ಬೆಳಗಾವಿ

(ಶಾಲಾಪತ್ರಿಕೆ : ೩-೭ ಪುಟ ೧೭೫ - ಸೆಪ್ಟೆಂಬರ ೧೮೬೭)

## ೧೭

## ನೋಟಿಸು

ಬೆಳಗಾಂವಿ ಜಿಲ್ಹೇದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರರ ಕಡಿಯಿಂದ ಆ ಜಿಲ್ಹೇದೊಳಗಿರುವ ಯಾವತ್ತು ಕನ್ನಡ ಸಾಲಿಗಳ ಮಾಸ್ತರರಿಗೆ ತಿಳಿಸುವದೇನಂದರೆ - ನಿಂಮಲ್ಲಿ ಕೆಲವರು ಯಿತ್ತ ಕಡಿಗೆ ಕಳುಹಿಸುವ ಕಾಗದ ಪತ್ರಗಳನ್ನು ನೆಟ್ಟಗೆ ಲಕ್ಷ ಕೊಟ್ಟು ಬರ್ರಿಯದ ಕಾರಣ ಅವುಗಳಲ್ಲಿ ನಾನಾ ಪ್ರಕಾರದ ತಪ್ಪುಗಳಿರುತ್ತವೆ. ಹೀಗೆ ತಪ್ಪು ಬರಿಯಬಾರದೆಂದು ನಾವು ಹಿಂದಕ್ಕೆ ಯೆರಡು ಸಾರೆ ನೋಟಿಸು ಕೊಟ್ಟಿದ್ದುಸಹ ಯಿನ್ನು ಕೆಲವು ಕಾಗದಪತ್ರಗಳು ಅಶುದ್ಧ ಬರದವು ಬರುತ್ತವೆ. ಆಂದರೆ ಇಂನ ಮುಂದೆ ನಮ್ಮ ಕಡಿಗೆ ಕಳುಹಿಸುವ ಯಾವತ್ತು ಪತ್ರಗಳನ್ನು ಕನ್ನಡಿನಲ್ಲಿ ಬರದು ತಿರಿಗಿ ವೊದಿನೋಡಿ ತಿದ್ದಿ ಯಿತ್ತ ಕಡಿಗೆ ಕಳುಹಿಸುತ್ತ ಹೋಗಬೇಕು.

ತಾರೀಖ ೧೬ ಸಪಟಂಬರ ೧೮೬೭

[Signed] Chanbassapp B. Dharwar
ಡಿ. ಇ. ಇ. ಬೆಳಗಾವಿ

(ಶಾಲಾಪತ್ರಿಕೆ : ೩-೭ ಪುಟ ೧೭೫-೧೭೬ - ಸೆಪ್ಟೆಂಬರ ೧೮೬೭)

## ೧೮

## ನೋಟಿಸು

ಮುಲಕೀ ಪರೀಕ್ಷಾ ಕೊಡಬೇಕೆಂಬ ಉಮೇದವಾರ ಜನರಿಗೆ ಬೆಳಗಾಂವಿ ಜಿಲ್ಹೇದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರರ ಕಡಿಯಿಂದ ಬರದು ತಿಳುಹಿಸುವದೇನಂದರೆ - ಸರಕಾರದವರು ಭೂಗೋಲು, ವ್ಯಾಕರಣ ಮತ್ತು ಇತಿಹಾಸಗಳಲ್ಲಿ ಉಮೇದವಾರ ಜನರ ಪರೀಕ್ಷಾ

ತೆಗದುಕೊಳ್ಳಬೇಕೆಂದು ಠರಾವು ಮಾಡಿದ್ದಾರೆ. ಆದ ಕಾರಣ ಪರೀಕ್ಷಾಕೊಡಬೇಕೆಂಬವರು ಈ ವಿಷಯಗಳನ್ನು ಸಹಾ ಕಲಿಯಬೇಕು. ಈ ಶಾಲಾಪತ್ರಕದಲ್ಲಿ ಸಾಲಿಗಳ ಪರೀಕ್ಷಾ ತೆಗದು ಕೊಳ್ಳುವದರ ದಶಿಯಿಂದ ಛಾಪಿಸಲ್ಪಟ್ಟ ೩ನೇ ಪ್ರತಿಪರೀಕ್ಷದಂತೆ ಮುಂದೆ ಮುಲಕೀ ಪರೀಕ್ಷಾ ಆಗುವದು.

ಸಾಲಿಮಾಸ್ತರರು ಯಾವ ವರ್ತಮಾನವನ್ನು ತಂಮ ತಂಮ ತಾಲೂಕನಲ್ಲಿ ತಿಳುಹಿಸಬೇಕು.

ತಾರೀಖ ೧೭ ಸಪಟಂಬರ ೧೮೬೭ ಯಿಸವಿ.

[Signed] Chanbassappa B. Dharwar.
ಡಿಪುಟಿ ಇಜ್ಯುಕೇಶನಲ್ ಇ. ಜಿ. ಬೆಳಗಾವಿ.

(ಶಾಲಾಪತ್ರಿಕೆ : ೩-೭ ಪುಟ ೧೭೭-೧೭೭ - ಸೆಪ್ಟೆಂಬರ ೧೮೬೭)

## ೧೯

## ನೋಟಿಸು

ಬೆಳಗಾಂವಿ ಜಿಲ್ಹೆದೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ ಈ ನೋಟಿಸಿನಿಂದ ತಿಳಿಯಪಡಿಸುವದೇನಂದರೆ - ಮೇಹರಬಾನ ಎಜ್ಯುಕೇಶನಲ್ ಇನಸ್ಪೆಕ್ಟರ ಸಾಹೇಬರ ಕಡಿಗೆ ಯೇನಾದರು ರಿಪೋರ್ಟ ವಗ್ಯೆರೆ ಮಾಡುವದಿದ್ದರೆ ಅವನ್ನ ನಂಮ ದ್ವಾರದಿಂದ ಕಳಸಬೇಕು. ಪರಭಾರೆ ಕಳಸಬಾರದು. ಇದರ ವಿಷಯಕ್ಕೆ ಮಾಸ್ತರರಿಗೆಲ್ಲಾ ತಿಳಿಸಬೇಕೆಂತಾ ಮೆ।। ಇ. ಇನಸ್ಪೆಕ್ಟರ ಸಾಹೇಬರು ಯಿತ್ತ ಕಡಿಗೆ ಬರದು ಕಳುಹಿಸಿಯಿದ್ದಾರೆ.

ತಾ।। ೨೭ನೇ ಸಪಟಂಬರ ೧೮೬೭.
ಬೆಳಗಾಂವಿ.

[Signed] Chanbassappa B.D.
ಡ.ಇ.ಇ. ಜಿಲ್ಹಾ ಬೆಳಗಾವಿ.

(ಶಾಲಾಪತ್ರಿಕೆ : ೩-೭ ಪುಟ ೧೮೫ - ಸೆಪ್ಟೆಂಬರ ೧೮೬೭)

## ೨೦

## ನೋಟಿಸು

ಬೆಳಗಾಂವಿ ಜಿಲ್ಹೆಯೊಳಗಿನ ಸ್ಕೂಲ ಮಾಸ್ತರರಿಗೆ ತಿಳಿಯಪಡಿಸುವದೇನಂದರೆ - ಶಾಲೆಯಲ್ಲಿ ಮೇಹರ್ಬಾನ ಇನಸ್ಪೆಕ್ಟರ್ ಧೊರೆಗಳಾಗಲಿ, ಬೇರೆ ಯಾರಾದರೂ ದೊಡ್ಡ ಮನುಷ್ಯರಾಗಲಿ ಬಂದರೆ ವಿದ್ಯಾರ್ಥಿಗಳೆಲ್ಲರು ಯೆದ್ದು ನಿಂತು ಅವರು ಕೂಡ್ರುವದಕ್ಕೆ ಹೇಳುವ ಮಟ್ಟಿಗೆ ಹಾಗೇ ನಿಂತಿರುವ ಬಗ್ಗೆ ನೀವು ನಿಮ್ಮ ನಿಮ್ಮ ವಿದ್ಯಾರ್ಥಿಗಳಿಗೆ ಚಂದಾಗಿ ಬೋಧಿಸತಕ್ಕದ್ದು. ತಿಳಿಯೋದು.

ತಾ।। ೨೭ ಮಾಹೆ ಸಪಟಂಬರ ಸಂನ ೧೮೬೭ ಯಿ।।

[Signed] Chanbassapa B.D.
ಜ.ಇ.ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೩-೭ ಪುಟ ೧೮೬ - ಸೆಪ್ಟೆಂಬರ ೧೮೬೭)

೨೧

## ನೋಟಿಸು

ಬೆಳಗಾಂವಿ ಜಿಲ್ಹೇದ ಡಿಪುಟಿ ಎಜ್ಯುಕೇಶನಲ್ ಇನಸ್ಪೆಕ್ಟರ್‌ರ ಕಡಿಯಿಂದ ನೋಟಿಸು ಕೊಡುವದೇನಂದರೆ - ನಂದಗಡ ಸಾಲಿಯ ಹೆಡ್ಡಮಾಸ್ತರರಾದ ವಿನಾಯಕ ಮೋರೇಶ್ವರ ಪಾಟಣಕರ ಯಿವರು ತಂಮ ಕೆಲಸವನ್ನು ಲಕ್ಷ ಕೊಟ್ಟು ಮಾಡದ್ದರಿಂದಲೂ, ಬೆಳಗಾಂವಿಗೆ ತಂಮ ಮನಸಿಗೆ ಬಂದು ಮನಸಿಗೆ ಬಂದಾಗ್ಗೆ ತಿರಿಗಿ ನಂದಗಡಕ್ಕೆ ಹೋಗಿದ್ದಾ ತಿಳಿದುಬಂದದರಿಂದಲೂ, ತಿಂಗಳ ಆಖ್ಯೆರಕ್ಕೆ ನಂಮ ಕಡಿಗೆ ಕಳುಹಿಸುವ ಲೆಖ್ಖವನ್ನೆಲ್ಲಾ ಮನಸ್ಸಿಗೆ ಬಂದಂತೆ ತಯಾರು ಮಾಡಿಕಳುಹಿಸಿದ್ದು ನಮಗೆ ತಿಳಿದದರಿಂದಲೂ, ಶೀಕ್ಷಕರ ಪಗಾರ ಕೊಡುವದರಲ್ಲಿ ಧಾಂದಲೇ ಮಾಡಿದರಿಂದಲೂ ಮತ್ತು ನಮಗೆ ಗೈರ ಶಿಸ್ತ ಜವಾಬ ಕೊಟ್ಟದರಿಂದಲೂ ನಾವು ಮೆಹರಬಾನ ಇಜ್ಯುಕೇಶನಲ್ ಇನಸ್ಪೆಕ್ಟರ ಸಾಹೇಬ ಬಾಹದ್ದೂರ ದಕ್ಷಿಣಭಾಗ ಇವರ ಕಡಿಗೆ ಯಿವರನ್ನು ಕೆಲಸದಿಂದ ದುರ ಮಾಡುವ ಬಗ್ಗೆ ರಿಪೋರ್ಟು ಮಾಡಲಾಗಿ ಮೇಹರಬಾನ ಸಾಹೇಬರವರು ಸದರಿ ಮಾಸ್ತರರಂನ ಕೆಲಸದಿಂದ ದೂರಮಾಡಿ ಯೀ ಪ್ರಕಾರದ ನೋಟಿಸು ಶಾಲಾಪತ್ರಿಕೆಯಲ್ಲಿ ಛಾಪಿಸುವ ಬಗ್ಗೆ ನಂಮ ಕಡಿಗೆ ಬರದುಕಳುಹಿಸಿದ್ದಾರೆ.

ತಾರೀಖು ೨೩ ಆಕ್ಟೋಬರ ೧೮೬೭ ಇಸವಿ.
ಮುಕ್ಕಾಂ ಬೆಳಗಾಂವಿ.

[Signed] Chanbassapa B.D.
ಡಿ.ಇ.ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೩-೭ ಪುಟ ೨೧೬-೨೧೭ - ಆಕ್ಟೋಬರ ೧೮೬೭)

೨೨

## Notice
## ನೋಟಿಸು

ಬೆಳಗಾಂವಿ ಜಿಲ್ಹೇದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರವರ ಕಡಿ ಇಂದ.

ಬೆಳಗಾಂವಿ ಜಿಲ್ಹೇದಲ್ಲಿರುವ ಯಾವತ್ತು ಸ್ಕೂಲಮಾಸ್ತರರಿಗೆ ತಿಳಿಯ ಪಡಿಸುವದೇನಂದರೆ - ನಿಮ್ಮ ಸಾಲಿಗಳಿಗೆ ಮುಂದಿನ ವರ್ಷಕ್ಕೆ ರಿಪೇರಿಯ ದಶಿಯಿಂದ ಯೆಷ್ಟೇಷ್ಟು ಖರ್ಚು ಹತ್ತುವದು. ಇದನ್ನು ಚೌಕಸಿ ಮಾಡಿ ಇತ್ತ ಕಡಿಗೆ ತಾರೀಖು ೧೫ನೇ ಫೆಬ್ರುಆರಿ ಸಂನ ೧೮೬೮ನೇ ಇಸವಿಯೊಳಗೆ ನಂಮ ಕಡಿಗೆ ಬಂದು ಮುಟ್ಟುವ ಹಾಗೆ ಬರೆದುಕಳುಹಿಸಬೇಕು. ದಾರಕಡಿಯಿಂದ ಬರೆದುಬರಲ್ಲಿಕ್ಕಿಲ್ಲಾ ಆವರಿಗೆ ರಿಪೇರಿ ಹಣ ಶಿಗಲಿಕ್ಕಿಲ್ಲಾ.

ತಾರೀಖು ೨೦ ಮಾಹೆ ನವಂಬರ ಸಂನ ೧೮೬೭ನೇ ಇಸವಿ.
ಮುಕಾಮ ಚಿಕ್ಕೋಡಿ.

[Signed] Chabasapa B. Dharwar
ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರ್ ಜಿಲ್ಹಾ
ಬೆಳಗಾಂವಿ.

(ಶಾಲಾಪತ್ರಿಕೆ : ೩-೮ ಪುಟ ೨೫೫ - ನವ್ಹೆಂಬರ ೧೮೬೭)

೨೩

## Notice
## ನೋಟಿಸು

ಬೆಳಗಾಂವಿ ಜಿಲ್ಹೇದೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ ಈ ನೋಟಿಸಿನಿಂದ ತಿಳಿಯಪಡಿಸುವದೆನಂದರೆ -

ವರ್ಷಕ್ಕೆ ಯೆರಡು ಸಾರೆ ಬುಕ್ಕಿನ ಯಿಂಡೆಂಟ ಕಳುಹಿಸಬೇಕಾಗುತ್ತದೆ. ಆದ ಕಾರಣ ಮಾಸ್ತರರು ತಂಮತಂಮ ಡಿಪೋದವರ ಕಡಿಗೆ ತಮಗೆ ಆರು ತಿಂಗಳ ತನಕ ಬೇಕಾಗುವ ಪುಸ್ತಕಗಳನ್ನು ಯಿಂಡೆಂಟು ಕಳಿಸಬೇಕು. ಪರಂತು ಮನಸ್ಸಿಗೆಬಂದ ಪುಸ್ತಕಗಳನ್ನು ಬರಿಯದೆ ಸಾಲಿಯಲ್ಲಿ ಖರ್ಚಾಗುವ ಪುಸ್ತಕಗಳನ್ನು ಬರಿಯಬೇಕು. ಒಂದು ವ್ಯಾಳ್ಯೆ ತಿಳಿಯದೆ ಯಾವ ಮಾಸ್ತರರಾದರು ಭಲತೆ ಪುಸ್ತಕಗಳನ್ನು ಯಿಂಡೆಂಟಿನಲ್ಲಿ ಕಾಣಿಸಿದರೆ ತಾಲೂಕ ಮಾಸ್ತರರು ಹಂತಾ ಪುಸ್ತಕಗಳನ್ನು ತಂಮ ಯಿಂಡೆಂಟಿನಲ್ಲಿ ಕಾಣಿಸಬಾರದು.

ತಾರೀಖ ೯ನೇ ಮಾಹೆ ಡಿಜಂಬರ ಸಂನ ೧೮೬೭ನೇ ಯಿಸವಿ
ಮುಕ್ಕಾಂ ಅಥಣಿ.

(Signed) Chanbasapa B.D.
ಡಿ.ಇ.ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೩-೯ ಪುಟ ೨೭೭ - ಡಿಸೆಂಬರ ೧೮೬೭)

೨೪

## ನೋಟಿಸು

ಬೆಳಗಾಂವಿ ಜಿಲ್ಹೇದೊಳಗಿನ ಯಾವತ್ತು ಮಾಸ್ತರರಿಗೆ ಈ ನೋಟಿಸಿನಿಂದ ತಿಳಿಯಪಡಿಸುವದೇನಂದರೆ, ನಾವು ಸಾಲಿಯಲ್ಲಿ ಪರೀಕ್ಷೆ ತೆಗೆದುಕೊಳ್ಳುವಾಗ್ಗೆ ಒಬ್ಬ ಹುಡುಗನಿಗೆ ಏನಾದರೊಂದು ಪ್ರಶ್ನ ಕೇಳಿದರೆ ಆ ಹುಡುಗನ ಹತ್ರ ಇದ್ದ ಹುಡುಗರು ಆ ಪ್ರಶ್ನದ ಉತ್ತರವನ್ನು ಹೇಳುತ್ತಾರೆ ಇಲ್ಲವೆ ಬಾಯಿಲೆ ಸುಂಮನೆ ವಟವಟ ಅನ್ನುತ್ತಾರೆ ಅಥವಾ ಮೇಲ್ಲಗೆ ಆ ಹುಡುಗನಿಗೆ ಹೇಳುತ್ತಾರೆ. ಅಂದರೆ ಮಾಸ್ತರರು ಹೀಗ ಆಗದಂತೆ ಮೊದಲಿನಿಂದಾ ಅಭ್ಯಾಸ ಮಾಡಿಸಬೇಕು. ಇದಲ್ಲದೆ ಹುಡುಗರು ಓದುವಾಗ್ಗೆ ಪುಸ್ತಕವನ್ನು ಬಾಯಿಹತ್ತರ ಹಿಡಿಯುತ್ತಾರೆ. ಅಥವಾ ಪುಸ್ತಕವನ್ನು ಮುಚ್ಚಿ ಅತ್ತ ಇತ್ತ ನೋಡುತ್ತಾ ಮನಸ್ಸಿಗೆ ಬಂದಂತೆ ನಿಂದರುತ್ತಾರೆ. ಹೀಗೆ ಆಗದ ಹಾಗೆ ಬಂದೋಬಸ್ತು ಇಡಬೇಕು.

ತಾರೀಖು ೨೦ನೇ ಡಿಸೆಂಬರ ೧೮೬೭.

(Signed) Chanbassappa B. Dharwar.
ಡಿ.ಇ.ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೩-೧೦, ಪುಟ ೩೧೦-೩೧೧ - ಜನೇವರಿ ೧೮೬೮)

೨೧

## ನೋಟಿಸು

ಬೆಳಗಾಂವಿ ಜಿಲ್ಹೇದ ಡಿಪುಟಿ ಎಜ್ಯುಕೇಶನಲ್ ಇನಸ್ಪೆಕ್ಟರ್‌ರ ಕಡಿಯಿಂದ ನೋಟಿಸು ಕೊಡುವದೇನಂದರೆ - ನಂದಗಡ ಸಾಲಿಯ ಹೆಡ್ಡಮಾಸ್ತರರಾದ ವಿನಾಯಕ ಮೋರೇಶ್ವರ ಪಾಟಣಕರ ಯಿವರು ತಂಮ ಕೆಲಸವನ್ನು ಲಕ್ಷ ಕೊಟ್ಟು ಮಾಡದ್ದರಿಂದಲೂ, ಬೆಳಗಾಂವಿಗೆ ತಂಮ ಮನಸಿಗೆ ಬಂದು ಮನಸಿಗೆ ಬಂದಾಗ್ಗೆ ತಿರಿಗಿ ನಂದಗಡಕ್ಕೆ ಹೋಗಿದ್ದಾ ತಿಳಿದುಬಂದದರಿಂದಲೂ, ತಿಂಗಳ ಅಖ್ಯೆರಕ್ಕೆ ನಂಮ ಕಡಿಗೆ ಕಳುಹಿಸುವ ಲೆಖ್ಖವನ್ನೆಲ್ಲಾ ಮನಸ್ಸಿಗೆ ಬಂದಂತೆ ತಯಾರು ಮಾಡಿಕಳುಹಿಸಿದ್ದು ನಮಗೆ ತಿಳಿದದರಿಂದಲೂ, ಶೀಕ್ಷಕರ ಪಗಾರ ಕೊಡುವದರಲ್ಲಿ ಧಾಂದಲೇ ಮಾಡಿದರಿಂದಲೂ ಮತ್ತು ನಮಗೆ ಗ್ಯೆರ ಶಿಸ್ತ ಜವಾಬ ಕೊಟ್ಟದರಿಂದಲೂ ನಾವು ಮೆಹರಬಾನ ಇಜ್ಯುಕೇಶನಲ್ ಇನಸ್ಪೆಕ್ಟರ ಸಾಹೇಬ ಬಾಹದ್ದೂರ ದಕ್ಷಿಣಭಾಗ ಇವರ ಕಡಿಗೆ ಯಿವರನ್ನು ಕೆಲಸದಿಂದ ದುರ ಮಾಡುವ ಬಗ್ಗೆ ರಿಪೋರ್ಟು ಮಾಡಲಾಗಿ ಮೇಹರಬಾನ ಸಾಹೇಬರವರು ಸದರಿ ಮಾಸ್ತರರಂನ ಕೆಲಸದಿಂದ ದೂರಮಾಡಿ ಯೀ ಪ್ರಕಾರದ ನೋಟಿಸು ಶಾಲಾಪತ್ರಿಕೆಯಲ್ಲಿ ಛಾಪಿಸುವ ಬಗ್ಗೆ ನಂಮ ಕಡಿಗೆ ಬರದುಕಳುಹಿಸಿದ್ದಾರೆ.

ತಾರೀಖು ೨೩ ಆಕ್ಟೊಬರ ೧೮೬೭ ಇಸವಿ.
ಮುಕ್ಕಾಂ ಬೆಳಗಾಂವಿ.

[Signed] Chanbassapa B.D.
ಡಿ.ಇ.ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೩-೭ ಪುಟ ೨೧೬-೨೧೭ - ಆಕ್ಟೋಬರ ೧೮೬೭)

೨೨

## Notice
## ನೋಟಿಸು

ಬೆಳಗಾಂವಿ ಜಿಲ್ಹೇದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರವರ ಕಡಿ ಇಂದ.

ಬೆಳಗಾಂವಿ ಜಿಲ್ಹೇದಲ್ಲಿರುವ ಯಾವತ್ತು ಸ್ಕೂಲಮಾಸ್ತರರಿಗೆ ತಿಳಿಯ ಪಡಿಸುವದೇನಂದರೆ - ನಿಮ್ಮ ಸಾಲಿಗಳಿಗೆ ಮುಂದಿನ ವರ್ಷಕ್ಕೆ ರಿಪೇರಿಯ ದಶಿಯಿಂದ ಯೆಷ್ಟೇಷ್ಟು ಖರ್ಚು ಹತ್ತುವದು. ಇದನ್ನು ಚೌಕಸಿ ಮಾಡಿ ಇತ್ತ ಕಡಿಗೆ ತಾರೀಖು ೧೫ನೇ ಫೆಬ್ರುಆರಿ ಸಂನ ೧೮೬೮ನೇ ಇಸವಿಯೊಳಗೆ ನಂಮ ಕಡಿಗೆ ಬಂದು ಮುಟ್ಟುವ ಹಾಗೆ ಬರೆದುಕಳುಹಿಸಬೇಕು. ದಾರಕಡಿಯಿಂದ ಬರೆದುಬರಲ್ಲಿಕ್ಕಿಲ್ಲಾ ಆವರಿಗೆ ರಿಪೇರಿ ಹಣ ಶಿಗಲಿಕ್ಕಿಲ್ಲಾ.

ತಾರೀಖು ೨೦ ಮಾಹೆ ನವಂಬರ ಸಂನ ೧೮೬೭ನೇ ಇಸವಿ.
ಮುಕಾಮ ಚಿಕ್ಕೋಡಿ.

[Signed] Chabasapa B. Dharwar
ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರ್ ಜಿಲ್ಹಾ
ಬೆಳಗಾಂವಿ.

(ಶಾಲಾಪತ್ರಿಕೆ : ೩-೮ ಪುಟ ೨೫೫ - ನವ್ಹೆಂಬರ ೧೮೬೭)

೨೩

## Notice
## ನೋಟಿಸು

ಬೆಳಗಾಂವಿ ಜಿಲ್ಹೇದೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ ಈ ನೋಟಿಸಿನಿಂದ ತಿಳಿಯಪಡಿಸುವದೆನಂದರೆ -

ವರ್ಷಕ್ಕೆ ಯೆರಡು ಸಾರೆ ಬುಕ್ಕಿನ ಯಿಂಡೆಂಟ ಕಳುಹಿಸಬೇಕಾಗುತ್ತದೆ. ಆದ ಕಾರಣ ಮಾಸ್ತರರು ತಂಮತಂಮ ಡಿಪೋದವರ ಕಡಿಗೆ ತಮಗೆ ಆರು ತಿಂಗಳ ತನಕ ಬೇಕಾಗುವ ಪುಸ್ತಕಗಳನ್ನು ಯಿಂಡೆಂಟು ಕಳಿಸಬೇಕು. ಪರಂತು ಮನಸ್ಸಿಗೆಬಂದ ಪುಸ್ತಕಗಳನ್ನು ಬರಿಯದೆ ಸಾಲಿಯಲ್ಲಿ ಖರ್ಚಾಗುವ ಪುಸ್ತಕಗಳನ್ನು ಬರಿಯಬೇಕು. ಒಂದು ವ್ಯಾಳ್ಯೆ ತಿಳಿಯದೆ ಯಾವ ಮಾಸ್ತರರಾದರು ಭಲತೆ ಪುಸ್ತಕಗಳನ್ನು ಯಿಂಡೆಂಟಿನಲ್ಲಿ ಕಾಣಿಸಿದರೆ ತಾಲೂಕ ಮಾಸ್ತರರು ಹಂತಾ ಪುಸ್ತಕಗಳನ್ನು ತಂಮ ಯಿಂಡೆಂಟಿನಲ್ಲಿ ಕಾಣಿಸಬಾರದು.

ತಾರೀಖ ೯ನೇ ಮಾಹೆ ಡಿಜಂಬರ ಸಂನ ೧೮೭೭ನೇ ಯಿಸವಿ
ಮುಕ್ಕಾಂ ಅಥಣಿ.

(Signed) Chanbasapa B.D.
ಡಿ.ಇ.ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೩-೯ ಪುಟ ೨೭೭ - ಡಿಸೆಂಬರ ೧೮೭೭)

೨೪

## ನೋಟಿಸು

ಬೆಳಗಾಂವಿ ಜಿಲ್ಹೇದೊಳಗಿನ ಯಾವತ್ತು ಮಾಸ್ತರರಿಗೆ ಈ ನೋಟಿಸಿನಿಂದ ತಿಳಿಯಪಡಿಸುವದೇನಂದರೆ, ನಾವು ಸಾಲಿಯಲ್ಲಿ ಪರೀಕ್ಷೆ ತೆಗೆದುಕೊಳ್ಳುವಾಗ್ಗೆ ಒಬ್ಬ ಹುಡುಗನಿಗೆ ಏನಾದರೊಂದು ಪ್ರಶ್ನ ಕೇಳಿದರೆ ಆ ಹುಡುಗನ ಹತ್ರ ಇದ್ದ ಹುಡುಗರು ಆ ಪ್ರಶ್ನದ ಉತ್ತರವನ್ನು ಹೇಳುತ್ತಾರೆ ಇಲ್ಲವೆ ಬಾಯಿಲೆ ಸುಂಮನೆ ವಟವಟ ಅನ್ನುತ್ತಾರೆ ಅಥವಾ ಮೇಲ್ಲಗೆ ಆ ಹುಡುಗನಿಗೆ ಹೇಳುತ್ತಾರೆ. ಅಂದರೆ ಮಾಸ್ತರರು ಹೀಗ ಆಗದಂತೆ ಮೊದಲಿನಿಂದಾ ಅಭ್ಯಾಸ ಮಾಡಿಸಬೇಕು. ಇದಲ್ಲದೆ ಹುಡುಗರು ಓದುವಾಗ್ಗೆ ಪುಸ್ತಕವನ್ನು ಬಾಯಿಹತ್ತರ ಹಿಡಿಯುತ್ತಾರೆ. ಅಥವಾ ಪುಸ್ತಕವನ್ನು ಮುಚ್ಚಿ ಅತ್ತ ಇತ್ತ ನೋಡುತ್ತಾ ಮನಸ್ಸಿಗೆ ಬಂದಂತೆ ನಿಂದರುತ್ತಾರೆ. ಹೀಗೆ ಆಗದ ಹಾಗೆ ಬಂದೋಬಸ್ತು ಇಡಬೇಕು.

ತಾರೀಖ ೨೦ನೇ ಡಿಸೆಂಬರ ೧೮೭೭.

(Signed) Chanbassappa B. Dharwar.
ಡಿ.ಇ.ಇ. ಜಿಲ್ಹಾ ಬೆಳಗಾಂವೀ.

(ಶಾಲಾಪತ್ರಿಕೆ : ೩-೧೦, ಪುಟ ೩೧೦-೩೧೧ - ಜನೇವರಿ ೧೮೭೮)

೨೫

## ನೋಟಿಸು

ಬೆಳಗಾವಿ ಜಿಲ್ಹೇದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರರ ಕಡಿಯಿಂದಾ ಬೆಳಗಾಂವಿ ಜಿಲ್ಹೆದೊಳಗಿನ ಯಾವತ್ತು ಸ್ಕೂಲ ಮಾಸ್ತರರಿಗೆ ಈ ನೋಟಿಸಿನಿಂದಾ ತಿಳಿಯ ಪಡಿಸುವದೇನಂದರೆ -

ನಾವು ಸಾಲಿಗಳ ಪರಿಕ್ಷಾ ತೆಗೆದುಕೊಳ್ಳಲಿಕ್ಕೆ ಹೋದ ಸಮಯದಲ್ಲಿ ಕೆಲವು ಸಾಲಿಗಳ ರಿಜಿಷ್ಟರನಲ್ಲಿ ೫೦ ಹುಡುಗರು ಯಿದ್ದು ಸರಾಸರಿ ಹಾಜರಿ ೪೦ ಅಥವಾ ೪೫ ಯಿರುತ್ತದೆ. ಪರಂತು ಸಾಲಿಯ ಪರಿಕ್ಷಾ ನೆಟ್ಟಗೆ ಯಿಳಿಯದಿದ್ದರೆ ಮಾಸ್ತರರು "ಈ ಊರು ಹಳ್ಳೀ ಊರು ಹುಡುಗರು ನೇಮದಿಂದ ಸಾಲಿಗೆ ಬರುವದಿಲ್ಲಾ. ಒಂದು ದಿನ ಬಂದರೆ ನಾಲ್ಕು ದಿವಸ ಬರುವದಿಲ್ಲ. ಆದರಿಂದ ಅಭ್ಯಾಸ ನೆಟ್ಟಗೆ ನಡೆಯುವದಿಲ್ಲವೆಂದು" ಹೇಳುತ್ತಾರೆ. ಇದರ ಮೇಲಿಂದ ಸಾಲಿಗೆ ಹುಡುಗರು ನಿತ್ಯನೇಮದಿಂದ ಬಾರದೆ ಯಿದ್ದರೆ ಸರಾಸರಿ ಹಾಜರಿ ಕಡಿಮೆ ಯಿರಬೇಕು. ಸರಾಸರಿ ಹಾಜರಿ ಖರೆ ಯಿದ್ದರೆ ದಿನಂ ಪ್ರತಿಯಲ್ಲಿ ಹುಡುಗರು ಬರುವದಿಲ್ಲವೆಂಬುವದು ಸುಳ್ಳು. ಆದ ಕಾರಣ ಹೀಗೆ ಹೇಳುವ ಮಾಸ್ತರರು ಯಿಲ್ಲಾ ಸುಳ್ಳ ಹೇಳುತ್ತಾರೆ, ಯಿಲ್ಲಾ ಹಾಜರಿ ಖೊಟ್ಟಿ ಯಿಡುತ್ತಾರೆಂಬುವದರಲ್ಲಿ ಏನೇನು ಸಂಶಯವಿಲ್ಲಾ. ಇದಲ್ಲದೆ ಮಾಸ್ತರರು ನಿತ್ಯ ಹಾಜರಿ ತೆಗದುಕೊಳ್ಳದೆ ಮನಸಿಗೆ ಬಂದಾಗೊಮ್ಮೆ ಮನಸಿಗೆ ಬಂದತೆ ಹಾಜರಿ ತೆಗೆದುಕೊಂಡು ನಂಮ ಕಡಿಗೆ ಸುಳ್ಳ ಲೆಖ್ಖಾ ಕಳುಹಿಸುತ್ತಾರೆಂಬುವದರಲ್ಲೇನೇನು ಸಂಶಯವಿಲ್ಲಾ. ಇದರ ಹೊರ್ತು ಕೆಲವು ರಿಜಿಷ್ಟರಗಳನ್ನು ತಪಾಸ ಮಾಡಿನೋಡಿದರೆ ಈ ಮೇಲಿನ ಸಂಶಯಕ್ಕೆ ಕಾರಣಗಳು ಕಾಣಬರುತ್ತವೆ. ಅಂದರೆ ಮುಂದಿನ ವರ್ಷ ಪರೀಕ್ಷೆದ ಸಮಯದಲ್ಲಿ ಯಿಂಥಾ ಅಪರಾಧಗಳು ನಂಮ ದೃಷ್ಟಿಗೆ ಬಿದ್ದರೆ ನಾವು ಅವುಗಳ ವಿಷಯಕ್ಕೆ ನೆಟ್ಟಗೆ ಬಂದೋಬಸ್ತ ಮಾಡುವೆವು.

ತಾರೀಖು ೮ನೇ ಫೆಬರವರಿ ಸನ ೧೮೬೬ನೇ ಯಿಸವಿ
ಮುಕ್ಕಾಮ ಮುಧೋಳ.

(Signed) Chanbassappa B. Dharwar.
ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರ
ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೩-೧೧, ಪುಟ ೩೪೨-೩೪೪ - ಜನವರಿ ೧೮೬೮)

೨೬

## Departmental Notices

## ನೋಟಿಸು

ಧಾರವಾಡ ಜಿಲ್ಹೆಯೊಳಗಿನ ಮಾಸ್ತರರಿಗೆ ತಿಳುಹಿಸುವದರ ದಶಿಂದ -

(೧) ಸೂಡಿ ಮಾಸ್ತರರಾದ ಯೋಗೇಶ್ವರ ಧೋಂಡದೇವ ಇವರು ತಮ್ಮ ಸಾಲಿಯಲ್ಲಿ ರಜಿಷ್ಟರಕ್ಕೆ ದಾಖಲ ಮಾಡದೇ ನಾಲ್ಕಾರು ಹುಡುಗರನ್ನು ಸಾಲಿಗೆ ಬರುಗೊಡುತ್ತಿದ್ದರು. ಅದರ ದಶಿಂದ ಅವರ ಪಗಾರ ೩ ರೂಪಾಯಿ ಕಡಿಮೆಯಾಯಿತು.

(೨) ಹಾಂವೇರಿಪೇಠಿ ಸಾಲಿಯ ಇಂಚಾರ್ಜ ಮಾಸ್ತರರಾದ ಕೇಶವ ನರಸಿಂಹ್ವ ಧಾರವಾಡಕರ ಇವರು ಒಪ್ಪತ್ತಿನ ಹಾಜರಿ ತುಂಬದ ಕಾರಣ ಅವರಿಗೆ ಒಂದು ರೂಪಾಯಿ ದಂಡವಾಯಿತು. ಇವರು ಒಂದು ವೇಳೆ ಇನ್ನೊಮ್ಮೆ ಈ ಪ್ರಕಾರದ ತಪ್ಪು ಮಾಡಿದರೆ ಕೆಲಸದಿಂದ ದೂರಾಗುವರು.

(೩) ಜೆಕ್ಕಲಿ ಮಾಸ್ತರರಾದ ನೂರಂದಪ್ಪಾ ಶಿವಲಿಂಗಪ್ಪಾ ಇವರು ನೆಟ್ಟಗೆ ಕೆಲಸ ಮಾಡದ ಕಾರಣ ಇವರ ಪಗಾರವನ್ನು (೧೨ ರೂಪಾಯಿಯಿಂದ ೮ ರೂಪಾಯಿ ಮಾಡಿ) ಇವರನ್ನು ಗದಗ ಸಾಲಿ ಶಿಕ್ಷಕೀ ಕೆಲಸಕ್ಕೆ ನೇಮಿಸಿದೆವು.

(೪) ಹುಲ್ಲೂರ ಸಾಲಿಯ ಮಾಸ್ತರರಾದ ಬಾಳಕೃಷ್ಣ ಬಾಪೂಜಿ ಇವರು ರಜೇದ ಮೇಲೆ ಹೋದವರು ಮುದ್ದತಶಿರ ಕೆಲಸದ ಮೇಲೆ ಹಾಜರಾಗಲಿಲ್ಲ. ಇದಲ್ಲದೇ ಹಾಜರಾದ ಕ್ಷಣವೇ ಕೆಲಸದ ಚಾರ್ಜ ತೆಗೆದುಕೊಂಡಿದ್ದಿಲ್ಲ. ಇದರಿಂದ ಇವರಿಗೆ ಅರ್ಧತಿಂಗಳದ ಪಗಾರ ದಂಡವಾಯಿತು.

(೫) ಕರಮಡಿ ಮಾಸ್ತರರಾದ ಅಡಿವೆಪ್ಪಾ ರಾಚಪ್ಪಾ ಇವರು ತಮ್ಮ ಹುಕುಮಿನ ಹೊರ್ತುಸಾಲಿಯನ್ನು ಬಂದ ಮಾಡಿದ್ದರು. ಆದ ಕಾರಣ ಇವರ ಪಗಾರವನ್ನು (೧೫ ರೂಪಾಯಿಯಿಂದ ೧೧ ರೂಪಾಯಿ) ಮಾಡಿ ಇವರನ್ನು ಶಲವಡಿ ಸಾಲಿಯ ಶೀಕ್ಷಕೀ ಕೆಲಸಕ್ಕೆ ನೇಮಿಸಿತು.

(೬) ಇಂಗಳಿಗಿ ಸಾಲಿಯ ಮಾಸ್ತರರಾದ ಪೀರಸಾ, ವಲ್ಲದ ಮೋಹದೀನಸಾ. ಇವರು ಅಪ್ಪಣೆ ಇಲ್ಲದೇ ಸಾಲಿಯನ್ನು ಬಿಟ್ಟುಗೊಟ್ಟು ವೂರಿಗೆ ಹೋಗಿದ್ದರು. ಆದ ಕಾರಣ ಇವರ ಪಗಾರವನ್ನು (೯ ರೂಪಾಯಿಯಿಂದ ೬ ರೂಪಾಯಿ) ಮಾಡಿ ಬಂಕಾಪೂರ ಸಾಲಿಯ ಶೀಕ್ಷಕೀ ಕೆಲಸಕ್ಕೆ ನೇಮಿಸಿತು.

(೭) ತಿರ್ಲಾಪೂರಸಾಲಿಯ ಮಾಸ್ತರರಾದ ಅಡಿವೆಯ್ಯಾ ರುದ್ರಯ್ಯಾ ಇವರು ಉತ್ಕೃಷ್ಟ ಕೆಲಸಮಾಡಿದ್ದರಿಂದ ಇವರ ಪಗಾರವನ್ನು (೧೭ ರೂಪಾಯಿಯಿಂದ ೨೦ ರೂಪಾಯಿ) ಮಾಡಿ ಇವರನ್ನು ಕರ್ಜಿಗಿ ಸಾಲಿಯ ಹೆಡ್ಡಮಾಸ್ತರ ಕೆಲಸಕ್ಕೆ ನೇಮಿಸಿತು.

(೮) ಹುಬ್ಬಳ್ಳಿ ಮಾಸ್ತರರಾದ ವೆಂಕಾಜಿ ಭಗವಂತ ಇವರು ಒಪ್ಪತ್ತಿನ ಹಾಜರೀ ತೆಗೆದುಕೊಳ್ಳದ ಕಾರಣ ಇವರಿಗೆ ಅರ್ಧರೂಪಾಯಿ ದಂಡವಾಯಿತು.

Chanabasappa B. Dharwar.

ಡಿ. ಎ. ಇ. ಜಿ. ಧಾರವಾಡ.

(ಶಾಲಾಪತ್ರಿಕೆ : ೧೨-೧೩, ಪುಟ ೭೫-೭೭ - ಫೆಬ್ರುವರಿ ೧೮೭೮)

## ೨೭

## ನೋಟೀಸು

೨೨೪೯

ಧಾರವಾಡ ಜಿಲ್ಹೆಯೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ ತಿಳಿಸುವದೇನಂದರೆ - ಯಾವ ತಿಂಗಳ ಫೀ ಅದೇ ತಿಂಗಳಲ್ಲಿ ತಿಜೋರಿಗೆ ಭರಣಾಮಾಡುತ್ತಿರಬೇಕೆಂದು ಮಾಸ್ತರರಿಗೆ

ಅನೇಕಾವರ್ತಿ ಸರಕ್ಯೂಲರ ಹುಕುಮುಗಳನ್ನು ಕೊಟ್ಟಾಗ್ಯೂ ಇನ್ನು ಕೆಲವು ಮಾಸ್ತರರು ಅವುಗಳಿಗೆ ದುರ್ಲಕ್ಷ್ಯ ಮಾಡಿ ವೇಳೆ ವೇಳೆಕ್ಕೆ ಫೀ ಭರಣಾಮಾಡುವದಿಲ್ಲ. ಆದರೆ ಇನ್ನು ಈ ಪ್ರಕಾರ ದುರ್ಲಕ್ಷ್ಯಮಾಡಿದವರಿಗೆ ಶಿಕ್ಷೆಯಾಗುವದು.

ಯಾವ ಮಾಸ್ತರರು ಫೀ ಹಣಾ ಮೇಲಿನ ನಿಯಮದಂತೆ ಭರಣಾ ಮಾಡದೆ ಶಿಲ್ಕು ಇಟ್ಟು ಕೊಳ್ಳುವರೋ ಅವರ ಕಡಿಂದ ಆ ಬಗ್ಗೆ ಆಗಿಂದಾಗಲೆ ಜವಾಬ ತರಸಿ ತಾಲೂಕ ಮಾಸ್ತರರು ನಮ್ಮ ಕಡಿಗೆ ಕಳಿಸುತ್ತಿರಬೇಕು.

ಫೀ ಬಾಕಿ ನಿಯಮದ ವಿರುದ್ಧವಾಗಿ ಮಾಸ್ತರರ ಕಡಿಗೆ ಶಿಲ್ಕು ವುಳೀಬಾರದು ಈ ವಿಷಯದಲ್ಲಿ ತಾಲೂಕ ಮಾಸ್ತರರು ಚನ್ನಾಗಿ ಲಕ್ಷ್ಯ ಕೊಡುತ್ತಿರಬೇಕು. ತಿಳಿಯುವವದು.

ತಾ. ೧೩ ಫೆಬ್ರುವಾರಿ ೧೮೭೮ ಇಸವಿ

Chanabassappa B. Dharwar.
ಡಿ. ಇ. ಇ. ಜಿ. ಧಾರವಾಡ.

(ಶಾಲಾಪತ್ರಿಕೆ : ೧೨-೩, ಪುಟ ೬೭-೬೮ - ಫೆಬ್ರುವರಿ ೧೮೭೮)

## ೨೮

ಸರಕ್ಯೂಲರ ನಂಬರು. ೨೩೧೮

ಧಾರವಾಡ ಜಿಲ್ಹೆಯೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ ತಿಳಿಸುವದೇನಂದರೆ, - ಕನ್ನಡ ಶಾಲಾಪತ್ರಿಕೆಯ ಕಿಂಮತ್ತು ಸನ್ ೧೮೭೭ ಇಸವಿಯ ಬಾಬತು ೮ ಅಣೆ ಮತ್ತು ಸನ್ ೧೮೭೮ ಇಸವಿಯ ಬಾಬತು ೧॥ ಅಂತು ೨ ಯೆರಡುರೂಪಾಯಿ ಈ ಹುಕುಮು ಕಂಡಕೂಡ್ಲೆ ತಮ್ಮ ತಮ್ಮ ತಾಲೂಕ ಸಾಲಿಯ ಮಾಸ್ತರರ ಕಡಿಗೆ ಕಳುಹಿಸಬೇಕು. ತಾಲೂಕ ಸಾಲಿಯ ಮಾಸ್ತರರು ತಮ್ಮ ಸಾಲಿಯ ಬಾ॥ ಹಣ ಸಹ ಕೂಡಸಿ ನಮ್ಮ ಕಡಿಗೆ ಯೇಕದಂ ಕಳುಹಿಸಬೇಕು.

ತಾ॥ ೨೦ನೇ ಮಾಹೆ ಫೆಬ್ರುವರಿ ಸನ್ ೧೮೭೮ ಇ॥
ಮು॥ ಧಾರವಾಡ.

Chanabassappa B. Dharwar.
ಡಿಪುಟಿ ಇ. ಇ. ಜಿಲ್ಲಾ ಧಾರವಾಡ.

(ಶಾಲಾಪತ್ರಿಕೆ : ೧೨-೩, ಪುಟ ೬೯-೭೮ - ಫೆಬ್ರುವರಿ ೧೮೭೮)

## ೨೯

ಬೆಳಗಾವಿ ಜಿಲ್ಹೆಯೊಳಗಿನ ಯಾವತ್ತೂ ಸ್ಕೂಲ ಮಾಸ್ತರರಿಗೆ ಬೆಳಗಾವಿ ಜಿಲ್ಹೇದ ಡೆಪ್ಯುಟಿ ಎ.ಇ. ಯವರ ಕಡೆಯಿಂದ ತಿಳಿಸುವದೇನಂದರೆ - ನಾವು ವಾರ್ಷಿಕ ಪರೀಕ್ಷೆ ತೆಗೆದುಕೊಂಬುವದಕ್ಕೆ ಕೆಲವು ಸ್ಥಳಗಳಲ್ಲಿ ಹೋದಾಗ್ಗೆ ಸಾಲಿಯ ಹತ್ತರ ಅತಿಶಯ ಹೊಲಸು ಇರುವದರಿಂದ ಸಾಲಿಯಲ್ಲಿ ದುರ್ಗಂಧವಾಸ ಬರುತ್ತಿದ್ದರೂ ಆ ಮಾಸ್ತರರು ನಮ್ಮ ಕಡಿಗೆ ರಿಪೋರ್ಟ ಮಾಡಿ ತಜವಿಜ ಮಾಡಲಿಲ್ಲ. ಇದು ಬಹಳ ಮುಗ್ಗಲಗೇಡಿತನವು. ಇನ್ನು ಮುಂದೆ ಈ ಪ್ರಕಾರ ಆಗದಂತೆ ಮಾಸ್ತರರು ಎಚ್ಚರಿಕೆಯನ್ನು ಇಡಬೇಕು.

ತಾರೀಖು ೨೨ ಫೆಬ್ರುವರಿ ೧೮೭೮.

(Signed) Chanbassappa B.D.
ಡಿ. ಎ. ಇ. ಜಿಲ್ಲಾ ಬೆಳಗಾವಿ.

(ಶಾಲಾಪತ್ರಿಕೆ : ಫೆಬ್ರುವರಿ ೧೮೭೮.)*

---

*ಆಕರ : 'ಕನ್ನಡದ ದೀಪ' ಪುಟ. ೭೪.

## ೩೦

### ನೋಟಿಸು

ಕಾಲಕುಂದ್ರಿ, ಸತ್ತಿಗೇರಿ, ಶಾಡಬಾಳ, ಮತ್ತು ಅಂಕಲಗಿ ಇಲ್ಲಿಯ ಮಾಸ್ತರರು ರಿಜಿಷ್ಟರ ಬುಕ್ಕುಗಳನ್ನು ತಿಳಿದು ತಿಳಿದು ತಪ್ಪು ಯಿಟ್ಟದ್ದು ವಾರ್ಷಿಕ ಪರೀಕ್ಷದ ಸಮಯದಲ್ಲಿ ಕಂಡು ಬಂದದರಿಂದ ಈ ಮಾಸ್ತರರನ್ನು ಕಡಿಮಿ ಪಗಾರದ ಮೇಲೆ ಶಿಕ್ಷಕರನ್ನು ನೇಮಿಸಬೇಕೆಂದು ಮೇಹರಬಾನ ಯಿನಸ್ಪೆಕ್ಟರ ಸಾಹೇಬರ ಕಡಿಗೆ ನಂಮ ಕಡಿಯಿಂದ ಬರದು ಹೋಗಲಾಗಿ ಸಾಹೇಬರವರು ನಾವು ಬರಿದದ್ದನ್ನು ಮಾನ್ಯಮಾಡಿದರು. ಅದರಿಂದ ಅವರಂನೆಲ್ಲಾ ಆರಾರ ರೂಪಾಯಿದ ಶಿಕ್ಷಕ ಕೆಲಸದ ಮೇಲೆ ನೇಮಿಸುವದರಲ್ಲಿ ಬಂದದೆ.

ಯಿದನ್ನು ಯಾವತ್ತು ಮಾಸ್ತರರು ಲಕ್ಷಪೂರ್ವಕವಾಗಿ ಓದಿ ನೋಡಿ ಬಹು ಹುಷಾರಿಯಿಂದ ಕೆಲಸ ನಡಿಸಬೇಕು.

ತಾರೀಖ ೨೨ ಮಾರ್ಚ ಸಂನ ೧೮೬೮ ಯಿ||

(Signed) Chanabassappa B. D.

ಡಿ.ಎ. ಇ. ಜಿಲ್ಲಾ ಬೆಳಗಾವಿ.

(ಶಾಲಾಪತ್ರಿಕೆ : ೩-೧೨, ಪುಟ ೩೭೫-೩೭೭ - ಮಾರ್ಚ ೧೮೬೮)

## ೩೧

### ನೋಟಿಸ

ಯಮಕನಮರ್ಡಿಯ ಪಂತೋಜಿ ಮನಸಿಗೆ ಬಂದಾಗ್ಗೆ ಸಾಲಿಯ ಕೆಲಸ ಬಂದಮಾಡಿ ಯರಡನೇ ಕಡಿಗೆ ಹೋದದ್ದು ತಿಳಿಯ ಬಂದದರಿಂದ ಆತನ ಪಗಾರ ೧೫ ರಿಂದ ೧೨ ಮಾಡುವ ಬಗ್ಗೆ ಮೇಹರಬಾನ ಯಿನಸ್ಪೆಕ್ಟರ್ ಸಾಹೇಬರ ಕಡಿಗೆ ಬರದು ಕಳುಹಿಸಲಾಗಿ ಸಾಹೇಬರು ನಂಮ ಬರಿಯೋಣ ಮಾನ್ಯ ಮಾಡಿದರಿಂದ ಸದರ ಮಾಸ್ತರನ ಪಗಾರ ೧೨ ಮಾಡಿಧೆ.

ತಾರೀಖ ೨೨ ಮಾರ್ಚ ಸಂನ ೧೮೬೮.

ಡಿ. ಇ. ಇ. ಜಿಲ್ಲಾ ಬೆಳಗಾವಿ.

(ಶಾಲಾಪತ್ರಿಕೆ : ೩-೧೨, ಪುಟ ೩೭೭-೭೭ - ಮಾರ್ಚ ೧೮೬೮)

## ೩೨

### Notice
### ನೋಟಿಸು

ಬೆಳಗಾಂವಿ ಜಿಲ್ಹೇದಲ್ಲಿರುವ ಯಾವತ್ತು ಸ್ಕೂಲಮಾಸ್ತರರಿಗೆ -

ಬೆಳಗಾಂವಿ ಜಿಲ್ಹೇದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರವರ ಕಡಿಂದಾ ತಿಳುಹಿಸುವದೇನಂದರೆ, ಬರುವ ವಾರ್ಷಿಕ ಲೆಖ್ಖಕ್ಕೆ ಫಕ್ತ ಹೊಲ ಮಾಡುವವರ ಹುಡುಗರ ಸಂಖ್ಯೆ ಬೇಕಾಗುವದು. ಅದನ್ನು ತಗದುಯಿಡಬೇಕು. ಕೆಲವರು ಲೋಕಲ್ ಫಂಡ ಕೊಡತಿದ್ದು ಸ್ವತಃ ಹೊಲ ಮಾಡುವದಿಲ್ಲ. ಯಿಂಥವರನ್ನು ಅದರಲ್ಲಿ ಶೇರಿಸಬಾರದು. ಲೋಕಲ್ ಫಂಡ ಕೊಡಲಿ ಅಥವಾ ಕೊಡದೆ ಯಿರಲಿ ಸ್ವತಃ ಹೊಲವನ್ನು ಮಾಡುವವರ ಹುಡುಗರು ನಿಮ್ಮ

ಸಾಲಿಯಲ್ಲಿ ಎಷ್ಟು ಬರುತ್ತವೆ. ಅವರ ಸಂಖ್ಯೆ ಬೇಕಾಗುವದು. ಯಿದರಂತೆ ತಿಂಗಳಿಗೊಮ್ಮೆ ಲೆಖ್ಖ ತಯಾರ ಮಾಡಬೇಕೂ ತಿಳಿಯುವದು.

ತಾರೀಖ ೧೩ನೇ ಮಾಹೆ ಜುಲಾಯಿ ಸಂನ ೧೮೬೮ನೇ ಯಿಸವಿ.
ಮುಕ್ಕಾಂ ಬೆಳಗಾಂವಿ.

(Signed) Chanabassappa B. D.
ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರ
ಜಿಲ್ಹಾ ಬೆಳಗಾವಿ.

(ಶಾಲಾಪತ್ರಿಕೆ : ೪-೪, ಪುಟ. ೧೧೯-೧೨೦ - ಜುಲೈ ೧೮೬೮)

೩೩

## ನೋಟಿಸು

ಬೆಳಗಾಂವಿ ಜಿಲ್ಹೆದಲ್ಲಿರುವ ಯಾವತ್ತು ಸ್ಕೂಲಮಾಸ್ತರರಿಗೆ - ಬೆಳಗಾವಿ ಜಿಲ್ಹೇದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರವರ ಕಡಿಂದ ತಿಳಿಸುವದೇನಂದರೆ - ನಮ್ಮ ಕಡಿಂದಾ ಹೋಗುವ ಲಖೋಟಿಗಳು ವ್ಯಾಳ್ಯಕ್ಕೆ ಮುಟ್ಟದೆ, ತಿಂಗತಿಂಗಳಾದರೂ ಮುಟ್ಟುವದಿಲ್ಲವೆಂದು ಕೇಳುತ್ತೇವೆ. ಆದರೆ ಇನ್ನು ಮುಂದೆ ನಮ್ಮ ಕಡಿಂದಾ ಲಖೋಟಿಗಳು ರವಾನೆ ಆದ ನಂತರಾ ೧೦ ದಿವಸದ ಮೇಲೆ ಬಂದು ಮುಟ್ಟಿದರೆ ಲಖೋಟಿಗಳನ್ನು ಸಾಕ್ಷಿಗಳಿಂದ ತಗೊಂಡು, ಮೇಲಿನ ಕವರ ಯಿಟ್ಟುಕೊಂಡು ಯಿತ್ತ ಕಡಿಗೆ ರಪೋರ್ಟು ಮಾಡಬೇಕು. ತಿಳಿಯುವದು.

ತಾರೀಖ ೨೩ನೇ ಮಾಹೆ ಜುಲಾಯ ಸಂನ ೧೮೬೮ ಯಿಸವಿ.
ಮುಕ್ಕಾಂ ಬೆಳಗಾಂವಿ.

(Signed) Chanabassappa B. D.
ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರ
ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೪-೪, ಪುಟ. ೧೨೦-೧೨೧ - ಜುಲೈ ೧೮೬೮)

೩೪

## ನೋಟಿಸು

ಬೆಳಗಾಂವಿ ಜಿಲ್ಹೆದೊಳಗಿನ ಯಾವತ್ತೂ ಮಾಸ್ತರರಿಗೆ ತಿಳಿಸುವದೇನಂದರೆ - ಮಾಹೆ ಸಪಟಂಬರ ತಿಂಗಳದ ಸಂಬಳದಗೂಡಾ ಅಪ್ರೇಲದ ಹಣಾ ಶಿಗುವದು. ಅದರ ಲೆಖ್ಖಾ ನಾವು ಸಮಕ್ಷಮ ಪರಿಕ್ಷೆಕ್ಕೆ ಬಂದಾಗ್ಗೆ ತೋರಿಸಬೇಕು. ಮತ್ತು ಆಗ್ಗೆಯೇನೇನು ರಿಪೇರಿ ಮಾಡಿಶಿದಿರೆಂಬುವ ವಿಷಯವಾಗಿ ವಿಚ್ಯಾರ ಮಾಡುವೆವು. ರಿಪೇರಿ ಸಮಂಧ ಪಾವತಿಗಳನ್ನು ಜಾನೇವಾರಿ ೧ನೇ ತಾರೀಖಿನೊಳಗೆ ನಮಗೆ ಮುಟ್ಟುವಂತೆ ಕಳುಹಿಸಬೇಕು. ಹಣಾಶಿಲಕು ಉಳಿದರೆ - ಆ ಕ್ಷಣವೇ ಮಾಮಲೇದಾರರ ತಿಜೋರಿಗೆ ಜಮಾ ಮಾಡಿ ಪಾವತಿ ನಮ್ಮ ಕಡಿಗೆ ಕಳುಹಿಸಬೇಕು. ಪಾವತಿಗಳು ತಡವಾಗಿ ಬಂದರೆ ನಿಮ್ಮ ಹೆಸರಲೆ ಹಣ ಖರ್ಚು ಬರಿಯುವೆವೂ. ತಿಳಿಯುವದು.

ತಾರೀಖ ೧೧ನೇ ಸಪಟಂಬರ ಸಂನ ೧೮೬೮ನೆ ಯಿಸವಿ.
ಮುಕ್ಕಾಂ ಬೆಳಗಾಂವಿ.

(Signed) Chanabassappa B. D.
ಡಿ.ಇ.ಇ. ಜಿಲ್ಹಾ ಬೆಳಗಾಂವಿ

(ಶಾಲಾಪತ್ರಿಕೆ : ೪-೬, ಪುಟ. ೧೭೯ - ಸಪ್ಟೆಂಬರ ೧೮೬೮)

## ೩೫

### ನೋಟಿಸು

ಬೆಳಗಾಂವಿ ಜಿಲ್ಹೆದೊಳಗಿನ ಯಾವತ್ತೂ ಸ್ಕೂಲಮಾಸ್ತರರಿಗೆ ತಿಳುಹಿಸುವದೇನಂದರೆ - ಕೆಲವು ಮಾಸ್ತರರು ಕನ್ನಡ ಪತ್ರಗಳನ್ನು ನಮ್ಮ ಕಡಿಗೆ ಬರದು, ಅವುಗಳಲ್ಲಿ ಕಡಿಗೆ शेवेसी श्रुत होय हे विनंती * (ಸೇವೆಯಲ್ಲಿ ಶ್ರುತವಿರಲಿ ಅಂತಾ ವಿನಂತಿ) ಅಥವಾ ಹೀಗೆ ಮತ್ತೇನಾದರೂ ಬರೆಯುತ್ತಿರುತ್ತಾರೆ. ಆದರೆ ಈ ವಹಿವಾಟು ಬಂದ ಮಾಡಬೇಕು. ಕನ್ನಡ ಪತ್ರಗಳಲ್ಲಿ ಯಾವತ್ತೂ ಕನ್ನಡ ಬರಿಯಬೇಕು. ಆರೇ ಪತ್ರಗಳಲ್ಲಿ ಯಾವತ್ತೂ ಆರೇ ಬರಿಯಬೇಕು.

ತಾ|| ೧೨ನೇ ಸಪಟಂಬರ ಸಂನ ೧೮೭೮ ಯಿ||
ಮುಕ್ಕಾಂ ಬೆಳಗಾಂವಿ.

(Signed) Chanabassappa B. D.
ಡಿ.ಇ.ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೪-೬, ಪುಟ. ೧೭೯-೧೮೦ - ಸಪ್ಟೆಂಬರ ೧೮೭೮)

## ೩೬

### Notice
### ನೋಟಿಸು

ಚಿತ್ರಕಲ್ಲದುರ್ಗದ ಮಾಹಾಸ್ವಾಮಿಗಳು.

ಯಾವತ್ತು ಲಿಂಗಾಯತ ಜನರಿಗೆ ತಿಳಿಯುವದರ ದಶಿಯಿಂದ ಪ್ರಕಟ ಮಾಡುವುದೇನಂದರೆ - ಲಿಂಗಾಯತರ ಹುಡುಗರು ಇಂಗ್ರೆಜಿ ಕಲಿತು ಶ್ಯಾಹಣೆರಾಗಿ ಸರಕಾರ ಕೆಲಸಗಳಲ್ಲಿ ಶೇರಬೇಕೆಂಬುವ ಉದ್ದೇಶದಿಂದ ಬೆಳಗಾವಿಯಲ್ಲಿ ೫೦ ಲಿಂಗಾಯತರ ಹುಡುಗರಂನು ಇಟ್ಟು ಆ ಹುಡುಗರಿಗೆ ಅಂನ ವಸ್ತ್ರ ಮೊದಲಾದವುಗಳನ್ನು ತಾಂವು ತಮ್ಮ ಸ್ವಂತ ಖರ್ಚಿನಿಂದ ಪೂರೈಸುವ ನಿಶ್ಚಯ ಶ್ರೀ ||..............................|| ಮಾಡಿದ್ದಾರೆ.

೨ ಈ ಹುಡುಗರ ಊಟ ಉಪಚಾರ ದಶಿಯಿಂದ ಒಂದು ದೊಡ್ಡಮನಿಯನ್ನು ಬಾಡಗಿಲೇ ತೆಗೆದುಕೊಂಡದೆ. ಈ ಹುಡುಗರೆಲ್ಲಾ ಆ ಮನಿಯಲ್ಲಿ ಇರಬೇಕಾಗುವದು. ಊಟ ಉಪಚಾರಗಳು ನೆಟ್ಟಗೆ ಆಗುವದರ ದಶಿಯಿಂದ ಒಬ್ಬ ಸಂಭಾವಿತ ಲಿಂಗಾಯತನಂನು ಇದರ ಮೇಲೆ ನೇಮಿಸಿಥೆ. ಇವರು ಹುಡುಗರ ಮೇಲೆ ಯೆಲ್ಲಾ ಪ್ರಕಾರದ ಬಂದೊಬಸ್ತೆ ಇಡುವರು. ಹೈಸ್ಕೂಲಿಗೆ ಹೋಗಲಿಕ್ಕೆ ಯೋಗ್ಯರಿದ್ದವರಂನ ಹೈಸ್ಕೂಲಿಗೆ ಕಳುಹಿಸುವೆವು. ಮತ್ತು ಸಂಣ ಸಾಲಿಗೆ ಹೋಗಲಿಕ್ಕೆ ತಕ್ಕವರಿದ್ದರೆ ಅವರಂನ ಮೊದಲು ಅಲ್ಲಿಗೆ ಕಳುಹಿಸಿ ಬಳಿಕ ಹೈಸ್ಕೂಲಿಗೆ ಕಳುಹಿಸುವೆವು. ಈ ಹುಡುಗರಿಗೆ ಕಲಿಯುವದರ ಹೊರ್ತು ಮತ್ತಿನ್ನೇನು ಯರಡನೆ ಕೆಲಸಾ ಮಾಡುವದು ಬೀಳಲಿಕ್ಕಿಲ್ಲಾ. ಅಡಗಿ, ಮಾಡುವದರ ದಶಿಯಿಂದ ಮತ್ತು ನೀರು ತರುವದರ ದಶಿಯಿಂದ ಬೇರೆ ಮನುಶ್ಯರಂನ ಇಡುವೆವು.

---

* ಸರ್‌ಕ್ಯೂಲರದಲ್ಲಿ ಇದರ ಮೂಲರೂಪವು ಮೋಡಿ ಲಿಪಿಯಲ್ಲಿದ್ದು ಅದನ್ನು ಇಲ್ಲಿ ದೇವನಾಗರೀ ಲಿಪಿಗೆ ಪರಿವರ್ತಿಸಿಕೊಳ್ಳಲಾಗಿದೆ.

೩ ಯಾವ ಹುಡುಗರ ಮನಸ್ಸಿನಲ್ಲಿ ಇಂಗ್ರೇಜಿ ಕಲಿತು ಸರಕಾರದ ಕೆಲಸಗಳಲ್ಲಿ ಶೇರಬೇಕೆಂಬುವದದೆ ಅವರು ತಾರೀಖು ೨ ನವಂಬರ ೧೮೬೮ ದಿವಸಾ ೧೦ ಘಂಟಕ್ಕೆ ಕೆಳಗೆ ಸಹಿ ಮಾಡಿದವರ ಕಡಿಗೆ ಬೆಳಗಾಂವಿಯಲ್ಲಿ ಹಾಜರಾಗಬೇಕು.

೪ ಹಂನೆರಡು ವರ್ಷದೊಳಗಿನವರು ಮತ್ತು ಹದಿನೆಂಟು ವರುಷ ಮೀರಿದವರು ಬರಬಾರದು. ಮತ್ತು ತಂಮ ನಡತಿ ನೆಟ್ಟಗಿರುವ ಬಗ್ಗೆ ಸಂಭಾವಿತ ಜನರ ಕಡಿಯಿಂದ ಸರಟಿಫಿಕಿಟು ತರಬೇಕು. ಸರಕಾರದ ಸಾಲಿಗಳಲ್ಲಿ ಕಲಿಯುತ್ತಿರುವ ಹುಡುಗರು ತಮ್ಮ ತಮ್ಮ ಪಂತೋಜಿಗಳ ಕಡಿಯಿಂದ ಸರಟಿಫಿಕಿಟು ತರಬೇಕು. ಆ ಸರಟಿಫಿಕಿಟುಗಳಲ್ಲಿ ಈ ಹುಡುಗನಿಗೆ ಪರಿಕ್ಷೆದಲ್ಲಿ ಪಾಸಾಗುವಷ್ಟು ಬರುತ್ತದೆಂದು ಬರದಿರಬೇಕು. ಕೆಳಗೆ ಬರದ ವಿಷಯಗಳಲ್ಲಿ ಪರೀಕ್ಷಾ ಆಗುವದು. ಪರೀಕ್ಷೆದಲ್ಲಿ ಇಳಿದವರ ಹೊರ್ತು ಯೆರಡನೆಯವರಂನ ತೆಗಿದುಕೊಳ್ಳಲಿಕ್ಕಿಲ್ಲಾ. ಇಂಗ್ರೇಜಿ ಕಲಿತವರಿದ್ದರೆ ಮುಂಚೆ ಅವರನ್ನ ತೆಗಿದುಕೊಂಡ ಬಳಿಕ ಇಂಗ್ರೇಜಿ ಬಾರದವರಂನ ತೆಗಿದುಕೊಳ್ಳುವೆವು. ತಮ್ಮ ಹತ್ರ ಈಗಿರುವ ಅಭ್ಯಾಸದ ಪುಸ್ತಕಗಳನ್ನು ಮತ್ತು ಸ್ಲೇಟ ಪಾಟಿಯನ್ನು ತೆಗದುಕೊಂಡುಬರಬೇಕು.

ಪರೀಕ್ಷದ ವಿಷಯಗಳು

| | |
|---|---|
| ೧ ಪೂರ್ಣಾಂಕ ತ್ರೈರಾ | ೩ ಮೂರನೇಯ ಪುಸ್ತಕದೊಳ |
| ಶಿಕವೆಲ್ಲಾ....... | ೫ ಗಿನ ಪಂಗ್ತಿಗಳನ್ನು ಶುದ್ಧ |
| ೨ ಕಥಾಸಂಗ್ರಹದ ಮೊ | ವಾಗಿ ಬರಿಯೋಣ ಮತ್ತು |
| ದಲನೇ ಭಾಗವನ್ನು ಓದಿ | ಪತ್ರಗಳ ಮೇಲಿನ ಪತ್ತೆ |
| ಅರ್ಥವನ್ನು ಹೇಳೋಣ | ಬರಿಯೋಣ.......... |
| ಮತ್ತು ಸಂಣ ಸಂಣ ಸು | ೪ ಮಹಾರಾಷ್ಟ್ರದೇಶದ ವರ್ಣನೆ |
| ಲಭ ವಾಕ್ಯಗಳ ವ್ಯಾಕರಣ | ಮತ್ತು ಏಶಿಯಾಖಂಡದ |
| ಮಾಡೋಣ......... | ನಕಾಶ. |

೨೮/೯/೬೮

(Signed) Chanbasapa B.
ಡಿ.ಇ.ಇ.ಬೆಳಗಾಂವಿ

(ಶಾಲಾಪತ್ರಿಕೆ : ೪-೬, ಪುಟ. ೧೯೦-೧೯೨ - ಸಪ್ಟೆಂಬರ ೧೮೬೮)

೩೭

## ನೋಟಿಸು

ಬೆಳಗಾಂವಿ ಜಿಲ್ಹೆದೊಳಗಿನ ಯಾವತ್ತೂ ಸ್ಕೂಲಮಾಸ್ತರರಿಗೆ ತಿಳಿಸುವದೇನಂದರೆ - ಯಿತ್ತ ಕಡಿಯ ನೋಟಿಸುಗಳಂನು ಮತ್ತು ಸರಕ್ಯೂಲರಗಳನ್ನು ಕೆಲವು ಮಾಸ್ತರರು ತಾಂವು ಓದುವದಿಲ್ಲಾ. ಮತ್ತು ಕೆಲವರು ತಂಮ ಕೈಕೆಳಗಿರುವ ಶೀಕ್ಷಕರಿಗೆ ಈ ನೋಟಿಸುಗಳನ್ನು ಮತ್ತು ಸರಕ್ಯೂಲರಗಳನ್ನು ತಿಳಿಹಿಸುವದಿಲ್ಲಾ. ಇದರಿಂದ ಸಾಲಿಗಳ ಕೆಲಸ ನೆಟ್ಟಗೆ ನಡಿಯುವದಿಲ್ಲಾ. ಆದಕಾರಣ ಯಾವತ್ತೂ ಮಾಸ್ತರರು ಇತ್ತ ಕಡಿಯ ಸರಕ್ಯೂಲರಗಳಂನು ನೆಟ್ಟಗೆ ಓದಿ ನೆನಪಿನಲ್ಲಿಡಬೇಕು. ಮತ್ತು ಮೇಲಿಂದ ಮೇಲೆ ಶಿಕ್ಷಕರಿಗೆ ತಿಳುಹಿಸುತ್ತಿರಬೇಕು. ಈ ಪ್ರಕಾರಾ

ವಹಿವಾಟ ನಡೆದದೆಯೋ ಇಲ್ಲವೋ ಎಂಬುವದಂನು ಪರಿಕ್ಷದ ಸಮಯದಲ್ಲಿ ಚೌಕಸಿ ಮಾಡುವೆವು.

ತಾರೀಖು ೫/೧೦/೬೮.

(Signed) Chanabassappa B. D.
ಡಿ. ಇ. ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೮-೭, ಪುಟ. ೨೧೬-೨೧೭ - ಆಕ್ಟೋಬರ ೧೮೬೮)

## ೩೮

## ನೋಟಿಸು

ಬೆಳಗಾಂವಿ ಜಿಲ್ಹೇದೊಳಗಿನ ಯಾವತ್ತೂ ಮಾಸ್ತರರಿಗೆ ತಿಳಿಹಿಸುವದೇನಂದರೆ - ಕೆಲವು ಸಾಲಿಗಳ ಮಾಸ್ತರರು (ಯಾವ ಸಾಲಿಯಲ್ಲಿ ಆರೇ ಕಲಿಸುವದು ಅವಶ್ಯವದೆ ಅಲ್ಲಿಯ ಮಾಸ್ತರರು) ದಿನಂಪ್ರತಿಯಲ್ಲಿ ಒಂದು ತಾಸು ಆರೇ ಕಲಿಸಬೇಕೆಂದು ಸಂನ ೧೮೬೬ ಇಸವಿ ಜೂನ ತಿಂಗಳದ ಮಠಪತ್ರಿಕೆಯಲ್ಲಿ ಮೆಹರಬಾನ ಇಜ್ಯುಕೇಶನಲ್ ಇನಸ್ಪೆಕ್ಟರ ಸಾಹೇಬರವರು ನೋಟಿಸು ಕೊಟ್ಟಿದ್ದು, ಕೆಲವು ಮಾಸ್ತರರು ಕಲಿಸುವದಿಲ್ಲವೆಂದು ಬೋಬಾಟ ಕೇಳುತ್ತೇವೆ. ಅಂದರೆ ಇಂನು ಮುಂದೆ ನಿತ್ಯ ಒಂದು ತಾಸು ಆರೇ ಕಲಿಸಬೇಕು. ಈ ಬಗ್ಗೆ ನಾವು ಸಮಕ್ಷ ಪರಿಕ್ಷಕ್ಕೆ ಬಂದಾಗ್ಗೆ ಚೌಕಸಿ ಮಾಡುವೆವು.

ತಾರೀಖು ೬ ನೇ ಆಕ್ಟೊಬರ ಸಂನ ೧೮೬೮ನೇ ಇಸವಿ.
ಮುಕ್ಕಾಂ ಸಂಪಗಾಂವಿ.

(Signed) Chanabassappa B. D.
ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರ
ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೮-೭, ಪುಟ. ೨೧೭-೨೧೮ - ಆಕ್ಟೋಬರ ೧೮೬೮)

## ೩೯

## ಪ್ರಸಿದ್ಧಿ ಪತ್ರಿಕೆಯು

ಮುಲಕೀ ಪರಿಕ್ಷೆಯಂನು ಕೊಡಲು ಅಪೇಕ್ಷಿಸುವ ಯಾವತ್ತೂ ಉಮೇದವಾರ ಜನರಿಗೆ ಬೆಳಗಾಂವೀ ಜಿಲ್ಹೇದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರವರು ತಿಳಿಯಪಡಿಸುವದೇನಂದರೆ - ಬರುವ ನೊವಂಬರ ತಿಂಗಳಿನ ೨೦ನೇ ತಾರೀಖಿನ ದಿವಸ ಪರೀಕ್ಷೆಯಂನು ತೆಗಿದುಕೊಳ್ಳುವೆವು. ಉಮೇದವಾರ ಜನರು ೧೯ನೇ ತಾರೀಖಿನ ದಿವಸ ೮ ಎಂಟು ಆಣೆ ಫೀ ತೆಗಿದುಕೊಂಡು, ನಂಮ ಕಡಿಗೆ ಹಾಜರಾಗಿ, ತಂಮ ತಂಮ ಹೆಸರುಗಳಂನು ಬರಸಬೇಕು. ವ್ಹರ್ನ್ಯಾಕ್ಯೂಲರ ನಾಲ್ಕನೇ ಷ್ಟಾಂಡರ್ಡಿನಂತೆ ಅಂದರೆ, ಕೆಳಗೆ ಬರದ ವಿಷಯಗಳಲ್ಲಿ ಪರೀಕ್ಷೆ ಇಳಿದವರಿಗೆ ಸರಟಿಫಿಕೀಟಗಳಂನು ಕೊಡುವೆವು.

೧ನೇ ಹೆದ್ದು - ಪೂರ್ಣಾಂಕಿಗಳ ತ್ರೈರಾಶಿ, ಬಹುರಾಶಿ, ಸರಳಬಡ್ಡಿ, ಮತ್ತು ವ್ಯವಹಾರೀ ಹಾಂಗೂ ದಶಾಂಶ ಅಪೂರ್ಣಾಂಕದವರಿಗೆ.

೨ನೇ ಹೆದ್ದು - ಕಥಾಸಂಗ್ರಹದ ಎರಡನೇ ಭಾಗವಂನು ಓದಿ ಅರ್ಥ ಹೇಳೋಣ ಮತ್ತು ವ್ಯಾಕರಣ ಮಾಡೋಣ (ಕನ್ನಡ ಶಾಲಾ ವ್ಯಾಕರಣ)

೩ನೇ ಹೆಡ್ಡು - ಕಥಾಸಂಗ್ರಹ ೨ನೇ ಭಾಗದೊಳಗಿನ ೫ ಪಂಕ್ತಿಗಳಂನು ಶುದ್ಧವಾಗಿ ಬರಿಯೋಣ

೪ನೇ ಹೆಡ್ಡು - (ಅ) ಮಾರಿಸ್ ಸಾಹೇಬರು ಕನ್ನಡಿಸಿದ ಹಿಂದು ದೇಶದ ಚರಿತ್ರೆ
(ಬ) ಪೃಥ್ವಿ, ಯುರೋಪ, ಮತ್ತು ಹಿಂದುಸ್ಥಾನದ ನಕಾಶಗಳ ಸಾಧಾರಣ ಮಾಹಿತಿ.

ತಾರೀಖು ೨೩ನೇ ಅಕ್ಟೊಬರ ಸಂನ ೧೮೭೪ನೇ ಯಿ||
ಮು|| ಬೆಳಗಾಂವಿ.

(Signed) Chanabassappa B. D.
ಡಿ.ಇ.ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೪-೭, ಪುಟ. ೨೧೮-೨೧೯ - ಅಕ್ಟೋಬರ ೧೮೭೪)

## ೪೦

ಬೆಳಗಾಂವಿ ಜಿಲ್ಹೆದೊಳಗಿನ ಯಾವತ್ತು ಮಾಸ್ತರರಿಗೆ - ಬೆಳಗಾಂವಿ ಜಿಲ್ಲೇದ ಡಿಪುಟಿ ಇನಸ್ಪೆಕ್ಟರವರ ಕಡಿಯಿಂದ ತಿಳಿಸುವದೇನಂದರೆ - ಕೆಲವು ಮಾಸ್ತರರು ನಂಮ ಕಡಿಗೆ ಕಳುಹಿಸಿಕೊಡುವ ಕಾಗದ ಪತ್ರಗಳನ್ನು ಹೊಲಸು ಆಕರ್ಷಣೆಗಳಿಂದ ಬರೆದು ಕಳುಹಿಸುತ್ತಾರೆ. ಆದರೆ ಇನ್ನು ಮುಂದೆ ಯಾವತ್ತು ಮಾಸ್ತರರು ಛಾಪಿಸಿದ ಅಕ್ಷರಗಳಂತೆ ವಿರಲವಾಗಿಯೂ, ಶುದ್ಧವಾಗಿಯೂ ಬರದು ಕಳುಹಿಸುವದಕ್ಕೆ ತಮ್ಮ ಕೈಲಾದ ಮಟ್ಟಿಗೆ ಶ್ರಮ ತತೆಗೆದುಕೊಳ್ಳಬೇಕು. ತಿಳಿಯುವದು.*

ತಾ || ೧೨ ನವ್ವಂಬರ ೧೮೭೪ ಇಸವಿ.
ಬೆಳಗಾವಿ

(Signed) Chanabassappa B. D.
ಡಿ.ಇ.ಇ. ಜಿಲ್ಹಾ ಬೆಳಗಾಂವಿ.

## ೪೧

### Notice
### ನೋಟಿಸು

ಬೆಳಗಾಂವೀ ಜಿಲ್ಹೆದೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ ಈ ನೋಟಿಸಿನಿಂದಾ ತಿಳಿಸುವದೇನಂದರೆ - ಹುಡುಗರು ಮೂರನೇ ಸ್ಟ್ಯಾಂಡರಡಿನ ಪ್ರಕಾರ ಅಭ್ಯಾಸ ಮಾಡಲಿಕ್ಕೆ ಹತ್ತಿದಾಕ್ಷಣವೆ ಅವರಿಗೆ ಕನ್ನಡು ಮತ್ತು ಆರೆ ಕಾಗದಗಳಂನು ಒಂದು ತಾಸು ಓದಲಿಕ್ಕೆ ಕಲಿಸಬೇಕು.

ತಾರೀಖು ೧೭ ಮಾರ್ಚ ೧೮೭೯ ಯಿಸವಿ
ಮುಕ್ಕಾಂ ಸಂವದತ್ತಿ.

(Signed) Chanabassappa B. D.
ಡಿ.ಇ.ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೫-೧, ಪುಟ. ೨೭-೨೭ - ? ೧೮೭೯)

* ಆಕರ : 'ಕನ್ನಡದ ದೀಪ', ಪುಟ. ೭೮.

## ೪೨

## ನೋಟಿಸು

ಬೆಳಗಾಂವಿ ಜಿಲ್ಹೆದೊಳಗಿನ ಯಾವತ್ತೂ ಮಾಸ್ತರರಿಗೆ -

ಬೆಳಗಾಂವಿ ಜಿಲ್ಹೆದ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರರವರು ತಿಳಿಹಿಸುವದೇನಂದರೆ- ಸವದತ್ತೀ ತಾಲೂಕಿನಲ್ಲಿರುವ ಎಕ್ಕುಂಡಿ ಊರಲ್ಲಿ ಸಾಲಿಯಾಗಿ ಈವತ್ತಿಗೆ ಒಂದು ವರ್ಷವಾಯಿತು. ಅಂದರೆ ನಾವು ತಿಂಗಳ ಮುಂದೆ ಅಲ್ಲಿಗೆ ಹೋದಾಗ್ಯೆ ಸಾಲಿಯ ಪರೀಕ್ಷಾ ತೆಗಿದುಕೊಳ್ಳಲಾಗಿ ಬಹಳ ಚನ್ನಾಗಿ ಆದ್ದರಿಂದ ಆ ಸಾಲಿಯ ಮಾಸ್ತರರಿಂದ ಕ್ರಿಷ್ಣಾಜೀ ನರಸೋ ಇವರಿಗೆ ೨ ರುಪಾಯಿ ಸಂಬಳ ಹೆಚ್ಚು ಮಾಡಬೇಕೆಂದು ನಾವು ಮೆಹರಬಾನ ಇನಸ್ಪೆಕ್ಟರ ಸಾಹೇಬರ ಕಡಿಗೆ ಶಿಫಾರಸ ಮಾಡಲಾಗಿ ಸಾಹೇಬರವರು ಮಂಜೂರಿ ಕೊಟ್ಟು ಈ ಮಜಕೂರು ಕನ್ನಡಮಠ ಪತ್ರಿಕೆಯಲ್ಲಿ ಛಾಪಿಸಬೇಕೆಂದು ಬರದು ಕಳುಹಿಸಿದ್ದಾರೆ. ತಿಳಿಯುವದು.

ತಾ|| ೨೩ನೇ ಮಾಹೆ ಎಪ್ರೇಲ ಸಂನ ೧೮೬೯ನೇ ಇಸವಿ.
ಬೆಳಗಾಂವಿ.

(Signed) Chanabassappa B. D.
ಡಿ.ಇ.ಇ. ಜಿಲ್ಹಾ ಬೆಳಗಾಂವಿ.

(ಶಾಲಾಪತ್ರಿಕೆ : ೫-೨, ಪುಟ. ೫೭ - ಮೇ ೧೮೬೯)

## ೪೩

## ನೋಟಿಸು

ಧಾರವಾಡ ಜಿಲ್ಹೆಯೊಳಗಿನ ಯಾವತ್ತು ಸ್ಕೂಲಮಾಸ್ತರರು ಮತ್ತು ಅಶಿಷ್ಟಂಟ ಮಾಸ್ತರರು ಈ ಕೆಳಗೆ ಬರದಿರುವದಂನೆಲ್ಲಾ ಮನಸುಗೊಟ್ಟು ಓದಿನೋಡಿ ತಾವು ಇತ್ತ ಕಡಿಗೆ ಕಳುಹಿಸುವ ಕಾಗದ ಪತ್ರಗಳಂನು ಎಚ್ಚರದಿಂದ ಬರದುಕಳುಹಿಸುತ್ತ ಹೋಗಬೇಕು.

೧ ಓದಲಿಕ್ಕೆ ಬರುವ ಹಾಗೆ ಅಕ್ಷರಗಳಂನು ಸ್ಪಷ್ಟವಾಗಿ ಬರಿಯಬೇಕು.

೨ ಅಶುದ್ಧ ಬರಿಯಬಾರದು.

೩ ತಂಮ ಕೈಲಾದಮಟ್ಟಿಗೆ ಶ್ರಮ ಪಟ್ಟು ಛಾಪಿಸಿದ ಅಕ್ಷರಗಳಂತೆ ಅಕ್ಷರಗಳಂನು ಬರಿಯಲಿಕ್ಕೆ ಕಲಿಯಬೇಕು. ಕಚೇರಿ ತರದ ಅಕ್ಷರಗಳಂನು ಅಗದಿ ಬರಿಯಬಾರದು.

೪ ಬರದದ್ದೆಲ್ಲಾ ವ್ಯಾಕರಣದ ನೇಮಕ್ಕೆ ತಪ್ಪದ ಹಾಗೆ ಬರಿಯುವದಕ್ಕೆ ಕಲಿಯಬೇಕು.

ನಮ್ಮ ಕಡಿಗೆ ಕೆಲವು ಕನ್ನಡ ಕಾಗದಗಳು ಬಂದಿದ್ದಾವೆ. ಅವುಗಳನ್ನು ಓದಿನೋಡಲಾಗಿ ಅವುಗಳಲ್ಲಿ ಕೆಲವು ತಪ್ಪುಗಳು ನಂಮ ದೃಷ್ಟಿಗೆ ಬಿದ್ದಿಥಾವೆ. ಆ ತಪ್ಪುಗಳಲ್ಲಿ ಕೆಲವಂನು ನಾವು ಕೆಳಗೆ ಬರಿದಿದ್ದೇವೆ.

| ಅಶುದ್ಧ | ಶುದ್ಧ |
|---|---|
| ರಾಜಪೂಜೀತ . . . . . . . | ರಾಜಪೂಜಿತ |
| ತಾಲ್ಕು . . . . . . . . . | ತಾಲೂಕು |
| ಕ್ಸಬಾ . . . . . . . . . | ಕಸಬಾ |
| ಶಾಳೇದ . . . . . . . . . | ಸಾಲಿಯ |
| ಕೆಲ್ಸ . . . . . . . . . . | ಕೆಲಸ |
| ತ್ತಾಲ್ಕು . . . . . . . . . | ತಾಲೂಕ |
| ಯನಂದ್ರೆ . . . . . . . . | ಯೇನಂದರೆ |
| ಯ್ಸಿವಿಗೆ . . . . . . . . . | ಇಸವಿಗೆ |
| ಯಿರುತ್ತೆನೆ . . . . . . . | ಇರುತ್ತೇನೆ |
| ಯಿತನ . . . . . . . . . | ಈತನ |
| ತಮ್ಮಾಕಡೆ . . . . . . . . | ತಮ್ಮಕಡೆ |
| ಮೂರುದಿವ್ಸ . . . . . . . | ಮೂರುದಿವಸ |
| ತ್ತಾರಿಖ . . . . . . . . . | ತಾರೀಖು |
| ಅಂಲ್ತಾ . . . . . . . . . | ಅಂತಾ |
| ಬೇಕ್ಕು . . . . . . . . . | ಬೇಕು |
| ಹೊಗು . . . . . . . . . | ಹೋಗು |
| ನಿತು . . . . . . . . . . | ನಿಂತು |

(Signed) Chanabasappa B. D.
ಡಿ.ಇ.ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೫-೩, ಪುಟ.೯೨-೯೪ - ಜ್ಯೂನ ೧೮೭೬)

## ೪೪

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಮಾಸ್ತರರಿಗೆ ಈ ನೋಟೀಸಿನಿಂದ ತಿಳಿಯಪಡಿಸುವದೇನಂದರೆ - ಸಾಲಿಗಳಲ್ಲಿ ಮಾಫೀ ಹುಡುಗರು ನೂರಕ್ಕೆ ಇಪ್ಪತ್ತರಂತೆ ಇರಬೇಕು. ಹೆಚ್ಚಿಗೆ ಆಗದಿ ಇರಬಾರದು. ಒಂದು ವೇಳೆ ಈಗ ಹೆಚ್ಚಿಗೆ ಇದ್ದದ್ದೆ ಉಂಟಾದರೆ ಈಗ ಅವರನ್ನು ತೆಗದ ಹಾಕಬಾರದು. ಮಾಫಿ ಯಿದ್ದ ಹುಡುಗರು ಬಡವರಿರಬೇಕು. ಸಾಲಿಗೆ ನಿತ್ಯ ಬರಬೇಕು. ಮತ್ತು ಅಭ್ಯಾಸವನ್ನು ಚನ್ನಾಗಿ ಮಾಡುತ್ತಿರಬೇಕು. ಹೀಗೆ ಇಲ್ಲದೆ ಹುಡುಗರನ್ನು ಮಾಫಿ ಮಾಡದೆ ಅವರ ಕಡಿಯಿಂದ ಫೀ ತೆಗದುಕೊಳ್ಳಬೇಕು. ಎಂದು

ಮೆಹರಬಾನ ಡೈರೆಕ್ಟರ ಸಾಹೇಬರವರ ಕಡಿಯಿಂದ ಹುಕುಮು ಬಂದದೆ. ಆದರೆ ಮಾಸ್ತರರು ಈ ಹುಕುಮಿಗೆ ಆಗದಿ ಅನುಸರಿಸಿ ನಡಿಯಬೇಕು. ತಿಳಿಯುವದು.

ತಾ|| ೧೬ ಮಾಹೆ ಜುಲಾಯಿ ೧೮೬೯ ಯಿಸವಿ
ಮುಕ್ಕಾಮ ಧಾರವಾಡ.

(Signed) Chanabassappa B. Dharwar.
ಡಿ.ಇ.ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೫-೫, ಪುಟ. ೧೬೩-೧೬೪ - ಅಗಸ್ಟ ೧೮೬೯)

೪೫

## ಸರಕ್ಯೂಲರ ನಂಬರು ೫೨೧

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ ಈ ಸರಕ್ಯೂಲರಿನಿಂದ ತಿಳಿಯಪಡಿಸುವದೇನಂದರೆ - ಕೆಲವು ಮಾಸ್ತರರು ತಿಂಗಳ ಲೆಖ್ಖಗಳನ್ನು ತಮ್ಮ ತಮ್ಮ ಮನಸಿಗೆ ಬಂದಾಗೆ ಕಳುಹಿಸುತ್ತಾರೆ. ಇದರಿಂದ ಕೆಲಸಕ್ಕೆ ಅಡ್ಡಿಯಾಗುತ್ತದೆ. ಅಂದರೆ ಈ ನೋಟಿಸು ತಿಳಿದಂದಿನಿಂದ ೨ನೇ ಅಥವಾ ೩ನೇ ತಾರೀಖಿನ ದಿವಸ ಹಿಂದಿನ ತಿಂಗಳದ ಲೆಖ್ಖವನ್ನು ತಯಾರು ಮಾಡಿ ಅವತ್ತಿನ ದಿವಸ ಟಪಾಲಿಗೆ ಹಾಕಬೇಕು. ಈ ಪ್ರಕಾರ ನಡುಕೊಳ್ಳದವರಿಗೆ ದಂಡ ಮಾಡಬೇಕಾಗುವದು.

(Signed) Chanabassappa B. D.
ಡಿ.ಇ.ಇ. ಜಿಲ್ಹಾ ಧಾರವಾಡ.

ಕೆಳಗೆ ಬರದ ಮಾಸ್ತರರು ಇದರ ನಕಲು ತೆಗಿದುಕೊಂಡು ತಮ್ಮ ತಮ್ಮ ತಾಲೂಕಿನಲ್ಲಿರುವ ಪಂತೋಜಿಗಳಿಗೆ ಕಳುಹಿಸಬೇಕು. ಮತ್ತು ಇದನ್ನ ತಮ್ಮ ಹೆಸರಿನ ಕೆಳಗಿರುವ ಮಾಸ್ತರರಿಗೆ ಕಳುಹಿಸಬೇಕು. ಕಟ್ಟಕಡಿಯ ಮಾಸ್ತರರು ಇತ್ತಕಡಿಗೆ ಕಳುಹಿಸಬೇಕು.

| | |
|---|---|
| ೧ ಧಾರವಾಡ ಕನ್ನಡು | ೭ ಶಿಗ್ಗಾಂವಿ |
| ೨ ಹುಬ್ಬಳ್ಳಿ ಆಂಗ್ಲೋ ಹೊ|| | ೮ ಹಿರೆಕೆರುರ |
| ೩ ರೋಣ ಆಂಗ್ಲೋ ಹೊ|| | ೯ ಅಂಗ್ಲೋ ಹೊ||ಹಾವೇರಿ |
| ೪ ಗದಗ " " | ೧೦ ರಾಣೆಬಿನ್ನೂರ |
| ೫ ನವಲಗುಂದ " " | ೧೧ ಹಾನಗಲ |
| ೬ ಮಿಶ್ರಿಕೋಟಿ " " | |

Signed Chanabassappa B. D.
ಡಿ.ಇ.ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೫-೬, ಪುಟ.೨೧೪-೨೧೫ - ಅಕ್ಟೋಬರ ೧೮೬೯)

## ೪೬

## ನೋಟಿಸು

ಧುಂಡಸಿ ಸಾಲಿಯ ಮಾಸ್ತರರಾದ ಗುರುಬಸಯ್ಯಾ ಮಾಹಾಗುಂಡಯ್ಯಾ ಇವರು ನಮ್ಮ ಅಪ್ಪಣೆಯನ್ನು ತೆಗೆದುಕೊಳ್ಳದೆ ಧಾರವಾಡಕ್ಕೆ ಬಂದು ತಿರಗಿ ದುಂಡಸಿಗೆ ಹೋದರು. ೫ ದಿವಸಗಳ ತನಕಾ ಸಾಲಿಯ ಕೆಲಸದಿಂದ ಅಪ್ಪಣೆಯ ಹೊರ್ತು ಗೈರ ಹಾಜರು ಇದ್ದರು. ಮತ್ತು ಇದರ ವಿಷಯವಾಗಿ ಬರದು ಅವರಂನು ಕೇಳಲಾಗಿ ಅವರು ಸುಳ್ಳು ರಿಪೋರ್ಟ ಬರದು ಕಳುಹಿಸಿದರು. ಈ ಮಜಕೂರನ್ನು ನಾವು ಮೇಹರ್ಬಾನ ಇನಸ್ಪೆಕ್ಟರ ಸಾಹೇಬರವರಿಗೆ ಬರದು ತಿಳುಹಿಸಿದವಿ. ಮತ್ತು ಈ ಅಪರಾಧ ದಶಿಯಿಂದ ಅರ್ಧಾ ತಿಂಗಳದ ಪಗಾರವನ್ನು ದಂಡ ಮಾಡಬೇಕು. ಮತ್ತು ಒಂದು ರುಪಾಯಿ ಪಗಾರವನ್ನು ಕಡಿಮೆ ಮಾಡಬೇಕು. ಮಜಕೂರನ್ನೆಲ್ಲಾ ಮಠಪತ್ರಿಕೆಯಲ್ಲಿ ಛ್ಯಾಪಿಸಬೇಕೆಂದು ಮೆಹರ್ಬಾನ ಇನಸ್ಪೆಕ್ಟರಸಾಹೇಬರವರ ಕಡಿಗೆ ಬರದು ಕಳುಹಿಸಲಾಗಿ ಸಾಹೇಬರವರು ನಾವು ಬರದದ್ದನ್ನು ಮಂಜೂರು ಮಾಡಿದರು. ಮುಂದೆ ಮಾಸ್ತರರು ಈ ಪ್ರಕಾರಗೈರ ಸಿಸ್ತ ನಡಿಯಬಾರದು ನಡದರೆ, ಈ ಪ್ರಕಾರ ಶಿಕ್ಷಾ ಮಾಡಬೇಕಾಗುವದು.

ತಾರೀಖು ೨೭ನೇ ಮಾಹೆ ಸಪಟಂಬರ ೧೮೭೯ ನೇ ಇಸವಿ
ಹುಬ್ಬಳ್ಳಿ.

Signed Chanabassappa B. D.
ಡಿ.ಇ.ಇ.ಜಿ. ಧಾರವಾಡ.

(ಶಾಲಾಪತ್ರಿಕೆ : ೫-೬, ಪುಟ. ೨೧೫-೨೧೬ - ಅಕ್ಟೋಬರ ೧೮೭೯)

## ೪೭

## ಸರಕ್ಯೂಲರ

ಧಾರವಾಡ ಜಿಲ್ಹೇದ ಡಿಪೂಟಿ ಇಜ್ಯುಕೇಶನಲ್ ಇನಸ್ಪೆಕ್ಟರವರ ಕಡಿಯಿಂದ ಬರದು ಹೋಗುವದೇನಂದರೆ - ಯಾವ ಮರ್ಯಾದೆ ಪ್ರಕಾರ ಹುಡುಗರು ಪರೀಕ್ಷಾ ಕೊಡುವರು ಆ ಮರ್ಯಾದೆಯಲ್ಲಿ ಬೇರೊಂದು ವಿಷಯದಲ್ಲಿ ಹುಡುಗರ ಪರೀಕ್ಷಾ ಇಳಿದರೆ ಆ ಮರ್ಯಾದೆಯಲ್ಲಿ ಅವರ ಪರೀಕ್ಷಾ ಇಳಿದಂತೆ ಆಯಿತು. ಪರೀಕ್ಷಾ ಇಳಿಯಬೇಕಾದರೆ ಆ ವಿಷಯಕ್ಕೆಲ್ಲಾ ಇರುವ ಗುಣಗಳ ೧/೩ ಒಂದು ತ್ರುತಿಯಾಂಶ ಗುಣವಿಳಿಯಬೇಕು. ಮತ್ತು ಎರಡು ವಿಷಯಗಳು ಒಂದು ವಿಷಯದಲ್ಲಿದ್ದರೆ ಈ ಬೇರೊಂದು ವಿಷಯಗಳಲ್ಲಿ ೧/೪ ಗುಣಗಳಿಳಿರು ಎಲ್ಲಾ ಕೂಡಿ ಒಂದು ತ್ರುತಿಯಾಂಶ ಇಳಿಯಬೇಕು.

(Signed) Chanabassappa B. D.
ಡಿ. ಇಜ್ಯುಕೇಶನಲ್ ಇನಸ್ಪೆಕ್ಟರ
ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೫-೭, ಪುಟ.೨೫೪-೨೫೫ - ನವ್ಹೆಂಬರ ೧೮೭೯)

## ೪೮

### ನೋಟಿಸು

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಮಾಸ್ತರರಿಗೆ ಈ ನೋಟಿಸಿನಿಂದ ತಿಳಿಯಪಡಿಸುವದೇನಂದರೆ - ಮೆಹರಬಾನ ಇಜ್ಯುಕೇಶನಲ್ ಇನಸ್ಪೆಕ್ಟರ ಸಾಹೇಬರು ಇಂದೆಗೆರಡು ವರ್ಷಗಳ ಮುಂದೆ ಸಾಲಿಯಲ್ಲಿರುವ ಯಾವತ್ತು ಹುಡುಗರ ಹತ್ತರ ಸ್ಲೇಟಪಾಟಿಗಳು ಮತ್ತು ಅವರು ಕಲಿಯುವ ಪುಸ್ತಕಗಳು ಇರಲಿಕ್ಕೆ ಬೇಕು ಎಂದು ನೋಟಿಸು ಕೊಟ್ಟದ್ದು ಅದರಂತೆ ಕೆಲವು ಸಾಲಿಗಳಲ್ಲಿ ವಹಿವಾಟು ಇಲ್ಲದ್ದನ್ನು ನಾವು ನೋಡಿದಿವಿ. ಆದರೆ ಇಂದಿನಿಂದ ಯಾರು ಇನಸ್ಪೆಕ್ಟರ ಸಾಹೇಬರ ನೋಟಿಸಿನಂತೆ ನಡಿಯಲಿಕ್ಕಿಲ್ಲಾ. ಅವರಿಗೆ ಏನೇನು ಕಾರಣ ಕೇಳದೆ ದಂಡ ಮಾಡುವೆವು. ಯಾವತ್ತು ಹುಡುಗರ ಹತ್ರ ಸ್ಲೇಟುಗಳು ಇರಬೇಕು. ಮತ್ತು ಓದುವ ಪುಸ್ತಕಗಳು ಇರಬೇಕು. ಈ ನೋಟಿಸಿನಂತೆ ನಡಿಯದೆ ಇದ್ದರೆ ಮಾಸ್ತರರಿಗೂ ಮತ್ತು ಆ ವರ್ಗದ ಶೀಕ್ಷಕನಿಗೂ ದಂಡವಾಗುವದು.

ತಾ॥ ೯ ಮಾಹೆ ನವಂಬರ ೧೮೬೯ ನೇ ಇ॥
ಮು॥ ಹುಬ್ಬಳ್ಳಿ.

(Signed) Chanabassappa B. D.
ಡಿ.ಇ.ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೫-೮, ಪುಟ.೨೯೦-೨೯೧ - ಡಿಸೆಂಬರ ೧೮೬೯)

## ೪೯

### Notice
### ನೋಟಿಸು

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ -

ಈ ನೋಟಿಸಿನಿಂದ ತಿಳಿಯಪಡಿಸುವದೇನಂದರೆ - ಸಾಲಿಯ ಹುಡುಗರು ಅಂಕೆಗಳನ್ನು ಕಂಡ ಕಂಡಂತೆ ಬರಿಯುತ್ತವೆ. ಅಂದರೆ ಅವರನ್ನು ಆ ಪ್ರಕಾರ ಬರಿಯಗೊಡದೆ ನೆಟ್ಟಗೆ ಅಂಕಿಗಳನ್ನು ಬರಿಯಲಿಕ್ಕೆ ಕಲಿಸಬೇಕು -

ಎರಡನೇ ಸ್ಟ್ಯಾಂಡರಡಿನಂತೆ ಕಲಿಯುವ ಹುಡುಗರು ತಾವು ಓದುವ ಪುಸ್ತಕಗಳೋಳಗಿನ ಕಠೀಣ ಶಬ್ದಗಳ ಅರ್ಥಗಳನ್ನು ಬರೆದು ಬಾಯಿಪಾಠ ಮಾಡುವದರ ದಶಿಯಿಂದಾ ಕಾಗದ ವಹಿಗಳನ್ನು ಕಟ್ಟಿರಬೇಕು. ಮತ್ತು ಮಾಸ್ತರರು ಈ ವಹಿಗಳನ್ನು ಯೆಂಟು ದಿವಸಕ್ಕೊಮ್ಮೆ ತಪಾಸ ಮಾಡಬೇಕು. ಈಗ ಈ ಪ್ರಕಾರದಂತೆ ವಹಿವಾಟು ಇಲ್ಲದ ಕಾರಣ ಹುಡುಗರಿಗೆ ಶಬ್ದದ ಅರ್ಥಗಳು ಗೊತ್ತಿರುವದಿಲ್ಲಾ.

ತಾರೀಖು ೨೨ ಮಾಹೆ ದಶಂಬರ ೧೮೬೯.

(Signed) Chanabassappa B. D.
ಡಿ.ಇ.ಜಿ. ಧಾರವಾಡ.

(ಶಾಲಾಪತ್ರಿಕೆ : ೫-೯, ಪುಟ. ೩೧೭ - ಜನೇವರಿ ೧೮೭೦)

೫೦

## ನೋಟಿಸು

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಮಾಸ್ತರರಿಗೆ ತಿಳಿಹಿಸುವದೇನಂದರೆ, ಮಠಪತ್ರಿಕೆಗಳಲ್ಲಿ ಬರೆದು ಬರುವ ನೋಟಿಸು ಮುಂತಾದವುಗಳಂನು, ಕೆಲವು ಮಾಸ್ತರರು ತಂಮ ಅಶಿಷ್ಟಂಟರಿಗೆ ತಿಳಿಹಿಸುವದಿಲ್ಲಾ, ಆದರೆ ನೋಟಿಸು, ಸರಕ್ಯೂಲರು, ಮಠಪತ್ರಿಕೆ, ಮುಂತಾದವುಗಳಂನು, ಮಾಸ್ತರರು ತಾಂವು ಚನ್ನಾಗಿ ಓದಿಕೊಂಡು ತಮ್ಮ ಅಶಿಷ್ಟಂಟರಿಗೆ ಓದಲು ಕೊಟ್ಟು, ಅದರಲ್ಲಿದ್ದ ಮಜಕೂರು ಚಂದಾಗಿ ತಿಳುಹಿಸಿಕೊಡಬೇಕು. ಇದರಂತೆ ವಹಿವಾಟು ಇಲ್ಲದ್ದರಿಂದ ಕೆಲವು ಅಶಿಷ್ಟಂಟರು ತಪ್ಪುಗಳಂನು ಮಾಡುತ್ತಾರೆ.

ತಾರೀಖು ೧೬ನೇ ಫೆಬ್ರುವಾರಿ ೧೮೭೧ ಇ||
ಕರ್ಜಗಿ

(Signed) Chanabassappa B. D.
ಡಿ.ಇ.ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೭-೧೧, ಪುಟ. ೩೫೦-೩೫೧ - ಫೆಬ್ರುವರಿ ೧೮೭೧)

೫೧

## Notice
## ನೋಟಿಸು

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಮಾಸ್ತರರಿಗೆ ತಿಳಿಸುವದೇನಂದರೆ - ಸಾಲೀ ಇದ್ದ ಸ್ಥಳಗಳನ್ನು ಬಿಟ್ಟು ಎರಡನೇ ಊರಿಗೆ ಹೋಗುವದಕ್ಕೆ ಮಾಸ್ತರರಿಗೆ ಕ್ಯಾಜುಅಲ್ ಲೀವ ಕೊಡಬಾರದೆಂದು ಸರಕಾರದವರು ಗೊತ್ತು ಮಾಡಿದ್ದಾರೆ. ಆದರೆ ಮಾಸ್ತರರು ತಂಮ ಸ್ಥಳಗಳನ್ನು ಬಿಟ್ಟು ಎರಡನೇ ಸ್ಥಳಗಳಿಗೆ ಹೋಗುವದರ ದಶಿಂದ ರಜಾ ಬೇಡ ಬೇಕಾದರೆ ಕ್ಯಾಜುಅಲ್ ಲೀವ ಬೇಡದೆ ಎರಡನೇ ಪ್ರಕಾರದ ರಜಾ ಬೇಡಬೇಕು.

ತಾರೀಖು ೧೮ನೇ ಮಾಹೆ ಅಗಷ್ಟ ೧೯೭೧ ಯಿಸವಿ.

(Signed) C.B.Dharwar
ಡಿಪೂಟಿ ಇಜ್ಯುಕೇಶನಲ್ ಇನಸ್ಪೆಕ್ಟರ
ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೭-೫, ಪುಟ. ೧೪೬ - ಅಗಸ್ಟ ೧೮೭೧)

೫೨

## Notice
## ನೋಟಿಸು

ಧಾರವಾಡ ಜಿಲ್ಹೆದೊಳಗಿನ ಯಾವತ್ತೂ ಸ್ಕೂಲಮಾಸ್ತರರಿಗೆ ತಿಳಿಸುವದೇನಂದರೆ - ಬರುವ ದಿಶಂಬರ ತಿಂಗಳಲ್ಲಿ ಖಾನೆಸುಮಾರಿ ಯಾಗುವದದೆ. ಆಗ್ಗೆ ನಿವೇಲ್ಲರು ನಿಂಮ ನಿಂಮ ತಾಲೂಕಿನ ಮಾಮಲೇದಾರರು ನಿಮಗೆ ಹುಕುಮು ಮಾಡುವಂತೆ ನಡಕೊಳ್ಳಬೇಕು. ಮತ್ತು ಅವರಿಗೆ ನಿಂಮಿಂದಾದಷ್ಟು ಆ ಕೆಲಸದಲ್ಲಿ ನೀವು ಸಹಾಯ ಮಾಡಬೇಕು. ಈ ಖಾನೆ ಸುಮಾರಿ

ಬಹಳ ಮಾಡಿ ತಾರೀಖು ೧೩ನೇ ದಿಶಂಬರದಿಂದ ತಾರೀಖು ೧೭ ಅಥವಾ ೧೮ನೇ ದಿಶಂಬರ ತನಕಾ(೫) ದಿವಸದ ತನಕಾ ಆಗುವದು.

(Signed) C.B.Dharwar.
ಡಿಪೂಟಿ ಇಜ್ಯುಕೇಶನಲ್ ಇನಸ್ಪೆಕ್ಟರ
ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೭-೭, ಪುಟ. ೧೯೦ - ಸಪ್ಟೆಂಬರ ೧೮೭೧)

೫೩

ಜೆನರಿಗೆ ತಿಳಿಯದ ಶಬ್ದಗಳನ್ನು ಹಾಕಿ ಬರಿಯುವ ದೊಂದು ಶಾಹಣೆತನವೆಂದು ತಿಳಕೊಂಡು ಕೆಲವರು ಸಾಧಾರಣ ಶಬ್ದಗಳನ್ನು ಬಿಟ್ಟಕೊಟ್ಟು ಜನರಿಗೆ ತಿಳಿಯದ ಶಬ್ದಗಳ ಉಪಯೋಗವನ್ನು ಮಾಡುತ್ತಾರೆ.

ಈ ಕೆಳಗೆ ಬರದಿರುವ ಪತ್ರವು ಈ ಮಾಸಲೇದ್ದು ಇದನ್ನು ಓದಿದಾಕ್ಷಣವೆ ನಮಗೆ ನಗಿಬಂತು, ಮತ್ತು ಪರೀಕ್ಷಕ್ಕೆ ಹೋದ ಸಮಯದಲ್ಲಿ ಈ ಮಾಸ್ತರರಿಗೆ ನಾವು ಛೀ ಹಾಕುವವರಿದ್ದೇವೆ.

ಮಹಾರಾಜ ರಾಜೆಶ್ರಿ ಮಾಮಲೇ ತಾಲೂಕ.........

ಇವರ ಸನ್ನಿಧಾನಕ್ಕೆ

ಶೇವಕ............................ ಹೇಡ್ಡಮಾಸ್ತರ......................................

ಇವರ ವಿಜ್ಞಾಪನಾ ತಾರೀಖು ೧೧ನೇ ಅಕಟಂಬರ ಸನ್ನ ೧೮೭೧ ಇಸವಿ ತರುವಾಯಾ. ಒಟುಗಳಿಂದ ಕಟ್ಟಳೆಯ ಪ್ರಕಾರಕ್ಕೆ ಬರುವ ಹಣ ಈ ತಿಂಗಳಲ್ಲಿ ವಸೂಲ ಬಂದ ಮುದ್ರಿಕೆಗಳು (೧೦-೭) ತಮ್ಮ ಬೊಕ್ಕಸಕ್ಕೆ ಸಲ್ಲಿಸುವದಕ್ಕಾಗಿ ಭ್ರುತಕನಾದ ಇವನ ಕೂಡಾ ಕಳುಹಿಸಿ ಇದ್ದೇನೆ. ಕೋಶಕ್ಕೆ ಶೇರಿಸುವದಕ್ಕೆ ಆಜ್ಞೆಯಾಗಿ ತಲ್ಪಿದ್ದಕ್ಕೆ ಉತ್ತರಭಾಗ ದೊರಿಯಬೇಕೆಂದು ಅಪೇಕ್ಷಿಸುತ್ತೇನೆ. ಸದರ ರುಪಾಯಿಗಳ ಪೈಕಿ ರೋಖ ರುಪಾಯಿ ಹಾಗೂ ರೊಕ್ಕಾ ಕೂಡಿ ಹತ್ತು ರುಪಾಯಿ ೧೦-೭ ಅಣೆಗಳು ಇರುತ್ತವೆ. ಇಂತಿ ವಿಜ್ಞಾಪನಾ.

(ಮಾಸ್ತರನ ಸಹಿ)

(Signed) Chanabussappa B. Dharwar.
ಡಿ. ಎ. ಯಿ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೭-೭, ಪುಟ. ೧೭-೧೭ - ಅಕ್ಟೋಬರ ೧೮೭೧)

೫೪

## ನೋಟಿಸು

ಧಾರವಾಡ ಜಿಲ್ಹೆದೊಳಗಿನ ಮಾಸ್ತರರಿಗೆ ತಿಳಿಸುವದೆನಂದರೆ - ಖಾನೆ ಸುಮಾರಿ ದಿಶಂಬರ ತಿಂಗಳದಲ್ಲಿ ಆಗುವದಿಲ್ಲ. ಆದರೆ ೧೮೭೨ನೇ ಇಸವಿ ಫೆಬರವಾರಿ ತಿಂಗಳದಲ್ಲಿ ಆಗುವದು.

ತಾರೀಖ ೩೧ನೇ ಅಗಟಂಬರ ೧೮೭೧
ಧಾರವಾಡ.

(Signed) Chanabussappa B. Dharwar.
ಡಿ. ಎ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೭-೭, ಪುಟ. ೧೮ - ಅಕ್ಟೋಬರ ೧೮೭೧)

೫೫

## ನೋಟೀಸು

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ ಈ ನೋಟೀಸಿನಿಂದ ತಿಳಿಯ ಪಡಿಸುವದೇನಂದರೆ - ಮಾಸ್ತರ ಜನರು ತಂಮ ಸಾಲಿಯ ಹುಡುಗರ ಕಡಿಂದಾ ತಂಮ ಮನಿಯ ಕೆಲಸಗಳಂನು ಮಾಡಿಸುತ್ತಿರುತ್ತಾರೆ. ಹುಡುಗರಂನ ಪ್ಯಾಟಿಗೆ ಕರಕೊಂಡು ಹೋಗಿ ಅವರ ಮೇಲೆ ಕಾಳು ಕಡಿ ಹೊರಸಿಕೊಂಡು ಬರುತ್ತಾರೆ; ಮನಿಯಲ್ಲಿ ನೀರು ತರಿಸುತ್ತಾರೆ; ಹಾಗು ಧೋತ್ರ ಮುಂತಾದವುಗಳಂನು ವೊಗಿಸುತ್ತಾರೆ; ಇದು ಬಹಾಳ ಕೆಟ್ಟದ್ದು. ಇಂಥಾ ತಪ್ಪನ್ನು ಯಾವ ಮಾಸ್ತರನು ಮಾಡಿದ್ದು ನಾವು ಕೇಳಿದರೆ ಅವರಿಗೆ ಶೀಕ್ಷೆ ಮಾಡುವೆವು. ತಿಳಿಯುವದು.

ತಾರೀಖ ೧೩ನೇ ಡಿಶೆಂಬರ ೧೮೭೧ ಇ.
ಧಾರವಾಡ.

ಡಿ.ಎ. ಇನಸ್ಪೆಕ್ಟರ ಜಿಲ್ಹಾ ಧಾರವಾಡ.
(Signed) Chanabussappa B. Dharwar.
(ಶಾಲಾಪತ್ರಿಕೆ : ೭-೯, ಪುಟ. ೭೮-೭೯ - ಅಕ್ಟೋಬರ ೧೮೭೧)

೫೬

## Notice

ಜಾವಕ ನಂಬರು ೮೦೬
ಧಾರವಾಡ ಜಿಲ್ಹೆದೊಳಗಿನ
ನೇಮಣೂಕಗಳು

೧ ಧಾರವಾಡ ಕನ್ನಡಸಾಲಿಯ ಮಾಸ್ತರರಾದ ಗುರಪ್ಪಾ ಅಪ್ಪಾ ಮುರತಲೆ ಇವರನ್ನು ಹಾಂವೇರಿಸಾಲಿಯ ಹೆಡ್ ಮಾಸ್ತರ ಜಾಗದ ಮೇಲೆ ನೇಮಿಸಿದ್ದೇವೆ - ಪಗಾರ ರೂ. (೪೦).

೨ ಹಾಂವೇರಿಸಾಲಿಯ ಆಕ್ಟಿಂಗ ಹೆಡ್ಡಮಾಸ್ತರ ಜಾಗದ ಶ್ರೀನಿವಾಸ ರಾಮಚಂದ್ರ ಜಾಲಿಹಾಳಕರ ಇವರಿಗೆ ಧಾರವಾಡ ಕನ್ನಡಸಾಲಿಯ ಹೆಡ್ಡಮಾಸ್ತರ ಕೆಲಸಕ್ಕೆ ಆಕ್ಟಿಂಗ ನೇಮಿಸಿದ್ದೇವೆ - ಪಗಾರ ರೂ. (೩೦).

೩. ಗದಗಸಾಲಿಯ ಮಾಸ್ತರರಾದ ಶಿವಬಸಪ್ಪಾ ಚನಬಸಪ್ಪಾ ಇವರನ್ನು ಪುನಃ ಬೇಟಗೇರಿ ಸಾಲಿಯ ಹೆಡ್ಡಮಾಸ್ತರ ಕೆಲಸಕ್ಕೆ ನೇಮಿಸಿದ್ಧೇವೆ - ಪಗಾರ ರೂ. (೩೦).

೪ ಹುಬ್ಬಳ್ಳಿ ೧ನೇ ನಂಬರದ ಕನ್ನಡಸಾಲಿಯ ಹೆಡ್ಡಮಾಸ್ತರರಾದ ಎಜ್ಞೇಶ್ವರ ವೆಂಕಾಜಿ ಜ್ಯೋಸಿ ಇವರನ್ನು ಗದಗ ಸಾಲಿಯ ಹೆಡ್ಡಮಾಸ್ತರ ಕೆಲಸಕ್ಕೆ ನೇಮಿಸಿದ್ಧೇವೆ - ಪಗಾರ ರೂ.(೩೦).

೫ ಧಾರವಾಡ ತಾ|| ಬೆಟಗೇರಿ ಸಾಲಿಯ ಮಾಸ್ತರರಾದ ರಾವಜೀ ಬಾಳಕೃಷ್ಣ ಯಮಕನಮರ್ಡಿ ಇವರನ್ನು ಕಲಘಟಗಿ ತಾ|| ಮಿಶ್ರಿಕೋಟಿಸಾಲಿಯ ಹೆಡ್ಡಮಾಸ್ತರ ಕೆಲಸಕ್ಕ ಅಷ್ಟೇ ಪಗಾರದ ಮೇಲೆ (ರೂ.೨೫) ನೇಮಿಸಿ - ಮಿಶ್ರಿಕೋಟಿ ಸಾಲಿಯ ಮಾಸ್ತರರಾದ ಭೀಮಾಜಿ ಧೋಂಡೋ ಪ್ರಭು ಇವರನ್ನು ಹುಬ್ಬಳ್ಳಿ ೧ನೇ ನಂಬರದ ಕನ್ನಡಸಾಲಿಯ ಮಾಸ್ತರ ಕೆಲಸಕ್ಕೆ ನೇಮಿಸಿದ್ಧೇವೆ. ಪಗಾರ ರೂ. (೨೫).

೬ ಮಿಶ್ರಿಕೋಟಿಯ ಅ|| ಮಾಸ್ತರರಾದ ಬಾಳಪ್ಪಾ ದಾನಪ್ಪಾ ಬೆಟಗೇರಿ ಇವರು ನಾವು ಪರೀಕ್ಷೆಕ್ಕೆ ಹೋದ ಸಮಯದಲ್ಲಿ ಸಾಲಿಯಲ್ಲಿರದೇ ಏರಡನೇ ಊರಿಗೆ ಬಗರ ರಜೇದಿಂದ ಹೋದಕಾರಣಾ ಮೆಹರ್ಬಾನ ಇ. ಇನಸ್ಪೇಕ್ಟರ ಸಾಹೇಬರವರ ಮಂಜೂರಿಯಿಂದ ೫ ರೂಪಾಯಿ ದಂಡ ಮಾಡಿರುತ್ತೇವೆ.

ತಾ|| ೧೯ನೇ ಮಾಹೆ ಜ್ಯಾನೆಅರಿ ೧೮೬೨ ಇ.
(Signed) Chanabussappa B. Dharwar.
ಡಿ. ಎ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೬-೧೧, ಪುಟ. ೧೧೨-೧೧೩ - ಫೆಬ್ರುವರಿ ೧೮೬೨)

೫೬

## ನೋಟೀಸು

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ -

ಈ ನೋಟೀಸಿನಿಂದ ತಿಳುಹಿಸುವದೇನಂದರೆ - ಕಸಬಾ ಗುತ್ತಲ ತಾಲೂಕ ಕರ್ಜಿಗಿ ಇಲ್ಲಿಯ ಮಾಸ್ತರರಾದ ಮೋರೋ ವಿನಾಯಕ ಜೋಸಿ ಇವರು ತಂಮ ರಾಜೀನಾಮೆಯಂನು ಮಂಜೂರು ಮಾಡುವದಕ್ಕಿಂತ ಮುಂಚೆ ತಂಮ ಕೆಲಸದ ಚ್ಯಾರ್ಜವಂನು ಶೀಕ್ಷಕನಿಗೆ ಕೊಟ್ಟು ಹೋದಕಾರಣ ಮೆಹರ್ಬಾನ ಇಜ್ಯೂಕೇಶನಲ್ ಇನಸ್ಪೆಕಟರ ಪ್ರಾಂತ ದಕ್ಷಿಣಭಾಗ ಇವರು ಸದರ ಮಾಸ್ತರರ ರಾಜೀನಾಮೆಯಂನು ಮಂಜೂರು ಮಾಡದೇ ಅವರಂನು ಈ ಖಾತೇದಿಂದ ತೆಗಿದು ಹಾಕಿದ್ದಾರೆ. ಆದ ಕಾರಣ ಯಾವತ್ತು ಮಾಸ್ತರರು ಈ ಪ್ರಕಾರ ಮಾಡದೇ ಹುಷಾರಿಯಿಂದ ಕೆಲಸ ಮಾಡಬೇಕು. ಮತ್ತು ಯಾವ ಮಾಸ್ತರರಾದರೂ ಇದರಂತೆ ವರ್ತಿಸಿದರೆ ಇದೇ ಶೀಕ್ಷೆಕ್ಕೆ ಪಾತ್ರರಾಗುವರು.

ತಾ|| ೨೧ ಜೆನವರಿ ಸಂನ ೧೮೬೨ ಇ.

(Signed) Chanabussappa B. Dharwar.
ಡಿ. ಇ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೬-೧೧, ಪುಟ. ೧೧೪ - ಫೆಬ್ರುವರಿ ೧೮೬೨)

೫೮

## Notices
## ನೋಟಿಸು

ಕಸಬೇ ಅತ್ತಿಗೇರಿ ತಾಲೂಕ ಬಂಕಾಪುರ ಇಲ್ಲಿ ಸಾಲಿಯ ಹೆಡ್ಡಮಾಸ್ತರರಾದ ಪರಪ್ಪಾ ಮೂಕಬಸಪ್ಪಾ ಯೆಂಬವರ ರಾಜಿನಾಮೆಯು ಮಂಜೂರ ಆಗದಕ್ಕಿಂತ ಮುಂಚೆ ಇವರು ತಮ್ಮ ಕೆಲಸದ ಚಾರ್ಜಕೊಟ್ಟು ಹೊರಟು ಹೋದ ಕಾರಣ - ಮೆಹೆರಬಾನ ಎಜೂಕೇಶನಲ್ ಇನಸ್ಪೇಕಟರ ಇವರ ಹುಕುಮಿನ ಮೇಲಿಂದ ಸದರ ಮಾಸ್ತರನನ್ನು ಶಾಲಾ ಖಾತೆಯಿಂದ ತೆಗೆದಿದ್ಧೇವೆ.

ತಾ|| ೭ನೇ ಮಾಹೆ ಮಾರ್ಚ ೧೮೭೨ ಇ.
ಮುಕ್ಕಾಮ ಸವನುರ

(Signed) Chanabussappa B. Dharwar.
ಡಿ. ಇ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೭-೧೨, ಪುಟ. ೧೩೦ - ಮಾರ್ಚ ೧೮೭೨)

೫೯

## Notice
## ನೋಟೀಸು

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಅಂನ್‌ಟ್ರೆಂಡ ಅಂದರೆ ಟ್ರೇನಿಂಗ ಕಾಲೇಜದಲ್ಲಿ ಕಲಿಯದೇ ಇದ್ದ ಮಾಸ್ತರ ಮತ್ತು ಅಶಿಷ್ಟಂಟರಿಗೆ - ಮೆಹರ್ಬಾನ ಎಜ್ಯೂಕೇಶನಲ್ ಇನಸ್ಪೆಕ್ಟರ ಸಾಹೇಬ ಬಹದ್ದೂರ ಪ್ರಾಂತ ದಕ್ಷಿಣಭಾಗ ಇವರ ಕಡಿಂದ ಬರೆದು ಬಂದುದರ ಮೇಲಿಂದ ತಿಳುಹಿಸುವದೇನಂದರೆ. ಟ್ರೇನಿಂಗ ಕಾಲೇಜಕ್ಕೆ ಕಲಿಯುವದಕ್ಕೆ ಹೋಗತಕ್ಕ ಮಾಸ್ತರರು ನಮ್ಮ ಹುಕುಮಿನ ಪ್ರಕಾರ ತೀವ್ರವಾಗಿ ಟ್ರೇನಿಂಗ ಕಾಲೇಜದ ಪ್ರಿನ್ಸಿಪಾಲರ ಕಡಿಗೆ ಹಾಜರಾಗದೇ ತಡಮಾಡಿ ಹೋಗುವದರಿಂದ ಕಾಲೇಜದ ಕೆಲಸಕ್ಕೆ ಬಹು ತೊಂದರೆಯಾಗುತ್ತದೆ. ಆದರೆ ಈ ವರುಷದಲ್ಲಿ ಕಲಿಯುವದಕ್ಕೆ ಹೋಗತಕ್ಕ ಮಾಸ್ತರರು ಕಾಲೇಜದ ಪ್ರಿನ್ಸಿಪಾಲರ ಕಡಿಂದ ಹುಕುಂ ಬಂದಕೂಡಲೇ ತಮ್ಮ ಸಾಲಿಯ ಅಷಿಷ್ಟಂಟನ ಕಡಿಗಾಗಲಿ ಅಥವಾ ನಾವು ನೇಮಿಸಿದ ಮನುಷ್ಯನ ಕಡಿಗಾಗಲಿ ಚ್ಯಾರ್ಜ ಕೊಟ್ಟು ಅತಿತೀವ್ರ ಹೊರಟು ಸದರ ಕಾಲೇಜದ ಪ್ರಿನ್ಸಿಪಾಲರ ಕಡಿಗೆ ಹಾಜರಾಗಬೇಕು. ಸಂನ ೧೮೭೩ನೇ ಇಸವಿಯ ಜನವರಿ ತಿಂಗಳಿನ ೧ನೇ ತಾರೀಖಿನವಳಗಾಗಿ ಯಾವ ಮಾಸ್ತರರು ಕಾಲೇಜಕ್ಕೆ ಹೋಗಿ ಹಾಜರಾಗಲಿಕ್ಕಿಲ್ಲವೋ ಅವರನ್ನು ಮೆಹರ್ಬಾನ ಇನಸ್ಪೆಕ್ಟರ ಧೊರೆಗಳವರು ತಮಗೆ ಯೋಗ್ಯಕಂಡಂತೆ ಶೀಕ್ಷಿಸುವರು. ತಿಳಿಯುವದು.

ತಾ. ೧೩ನೇ ಮಾಹೆ ಸಪಟಂಬರ ೧೮೭೨ ಇ.

(Signed) Chanabussappa B. Dharwar.
ಡಿಪೂಟಿ. ಇ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೮-೬, ಪುಟ. ೧೩೩ - ಸಪ್ಟೆಂಬರ ೧೮೭೨)

## ೬೦

ಧಾರವಾಡ ಜಿಲ್ಹೇದಲ್ಲಿರುವ ಯಾವತ್ತು ಸ್ಕೂಲ ಮಾಸ್ತರರಿಗೆ - ಧಾರವಾಡ ಜಿಲ್ಹೇದ ಡಿಪೂಟಿ ಇಜ್ಯೂಕೇಶನಲ್ ಇನಸ್ಪೆಕ್ಟರವರ ಕಡಿಂದ ಬರೆದು ತಿಳುಹಿಸುವದೇನಂದರೆ - ನಾವು ಸಾಲಿಗಳ ಪರೀಕ್ಷೆಕ್ಕೆ ಹೋದ ಸಮಯದಲ್ಲಿ ಸಾಲಿಯಸ್ಥಾಪನವಾದ ತಾರೀಖು, ಹೋದವರ್ಷ ಪರೀಕ್ಷೆಯಾದ ತಾರೀಖು ಇತ್ಯಾದಿ ಮಾಹೀತಿಯನ್ನು ಮಾಸ್ತರರಿಗೆ ಕೇಳಿದರೆ - ಅವರಿಗೆ ಗೊತ್ತಿಲ್ಲದೇ ಇರುವದರಿಂದ - ಆದೇ ಕಾಲಕ್ಕೆ ಹಿಂದಿನ ಕಾಗದಪತ್ರಗಳನ್ನು ಹುಡುಕುತ್ತಾ ಕೂಡ್ರುತ್ತಾರೆ - ಇದರಿಂದ ನಂಮ ವೇಳೆ ವ್ಯರ್ಥವಾಗಿ ಖರ್ಚು ಆಗುತ್ತದೆ - ಆದರೆ ಎಲ್ಲಾ ಮಾಸ್ತರರು ತಂಮ ತಂಮ ಸಾಲಿಗಳ ಎಲ್ಲ ಇತಿಹಾಸವನ್ನು ಗೊತ್ತು ಮಾಡಿಕೊಂಡು ಇರಬೇಕು - ಸಾಲಿಯು ಸ್ಥಾಪನವಾದ ತಾರೀಖು, ಹೋದವರ್ಷ ಪರೀಕ್ಷೆಯಾದ ತಾರೀಖು - ಸಾಲಿಯು ಸ್ಥಾಪನವಾದಂದಿನಿಂದ ಎಷ್ಟು ಮಂದಿ ಮಾಸ್ತರರಾಗಿ ಹೋದರು. ಯಾವ್ಯಾವ ಮಾಸ್ತರರ ಕಾಲದಲ್ಲಿ ಸಾಲಿಯ ಸ್ಥಿತಿಯು ಹ್ಯಾಗ್ಯಾಗೆ ಇತ್ತು ಈ ಬಗ್ಗೆ ಎಲ್ಲ ಮಾಹಿತಿಯನ್ನು ಪಾಠ ಮಾಡಿ ಇಟ್ಟಿದ್ದರೆ ಬಹಳ ಉಪಯೋಗವಾಗುತ್ತದೆ.

ತಾ|| ೧೩ ನವಂಬರ ೧೮೭೨
ಮುಕ್ಕಾಮ ನರೇಂದ್ರ.

(Signed) Chanabussappa B. Dharwar.
ಡಿಪೂಟ ಇ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೮-೯, ಪುಟ. ೨೦೪-೨೦೫ - ಡಿಸೆಂಬರ ೧೮೭೨)

## ೬೧

### ಸರಕ್ಯೂಲರ ನೋಟೀಸು

ಧಾರವಾಡ ಜಿಲ್ಹೇಯೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ-

ತಿಳುಹಿಸುವದೇನಂದರೆ - ೧ನೇ ಮತ್ತು ೨ನೇ ಸ್ಟ್ಯಾಂಡರ್ಡ ಕಲಿಯುವ ಹುಡುಗರನ್ನು ಬಿಟ್ಟು ೩ನೇ, ೪ನೇ, ೫ನೇ, ಸ್ಟ್ಯಾಂಡರ್ಡ ಕಲಿಯುವ ಹುಡುಗರಿಗೆ ಇಂಗ್ಲಿಷ ಅಂಕಿಗಳಿಂದೆ ಮತ್ತು ಕನ್ನಡ ಅಂಕಿಗಳಿಂದೆ ಲೆಕ್ಕಗಳನ್ನು ಮಾಡಲಿಕ್ಕೆ ಬರಬೇಕು.

ಮುಂದಿನ ವರ್ಷ ಪರೀಕ್ಷೆದ ವೇಳಕ್ಕೆ ಕೆಲವು ಲೆಕ್ಕಗಳನ್ನು ಇಂಗ್ರೇಜಿ ಅಂಕಿಗಳಿಂದೆ ಮತ್ತು ಕೆಲವು ಲೆಕ್ಕಗಳನ್ನು ಕನ್ನಡ ಅಂಕಿಗಳಿಂದೆ ಮಾಡಿಸುವೆವು. ತಿಳಿಯುವದು.

ತಾರೀಖು ೧೯ನೇ ಮಾಹೆ ಮಾರ್ಚ ಸನ್ನ ೧೮೭೩ನೇ ಇಸ್ವಿ.

(Signed) Chanabussappa B. Dharwar.
ಡಿ. ಯ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೯-೧, ಪುಟ.೩೦೭ - ? ೧೮೭೩)

## ೬೨

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಸ್ಕೂಲ ಮಾಸ್ತರರಿಗು ಮತ್ತು ಅಶಿಷ್ಟಾಂಟ ಮಾಸ್ತರರಿಗು ಈ ಸರಕ್ಯೂಲರದಿಂದೆ ತಿಳಿಹಿಸುವದೇನಂದರೆ -

ಸಂಬಳ ಹೆಚ್ಚಾಗಬೇಕೆಂತೆ ನಮ್ಮ ಕಡಿಗೆ ಮಾಸ್ತರ ಜನರು ಆಸಿಸ್ಟಾಂಟಿ ಮಾಸ್ತರ ಜನರು ರಿಪೋರ್ಟಗಳನ್ನು ಮಾಡುತ್ತಾರೆ. ಈ ರಿಪೋರ್ಟಗಳಿಂದೆ ನಮ್ಮ ಕಚೇರಿಯಲ್ಲಿ ನಿರರ್ಥಕ ಕೆಲಸವು ಮಾತ್ರ ಬೆಳಿಯುತ್ತದೆ. ಸಂಬಳ ಹೆಚ್ಚಾಗಬೇಕೆಎಂತೆ ಯೆಷ್ಟು ಬರಕೊಂಡರು ನಾವು ಅವರ ಸಂಬಳವನ್ನು ಹೆಚ್ಚು ಮಾಡುವದಿಲ್ಲಾ ಅವರವರ ಯೋಗ್ಯತೆಯಂತೆ ಸಂಬಳವನ್ನು ಹೆಚ್ಚು ಮಾಡುತ್ತೇವೆ ಅಥವಾ ಕಡಿಮೆ ಮಾಡುತ್ತೇವೆ. ಅದರಿಂದೆ ಈ ಸರಕ್ಯುಲರ ಮುಟ್ಟಿದ ಬಳಿಕ ಇಂಥಾ ರಿಪೋರ್ಟಗಳನ್ನು ನಮ್ಮ ಕಡಿಗೆ ಕಳುಹಿಸಬಾರದು.

ತಾರೀಖು ೨೬ನೇ ಯೆಪ್ರೇಲ ಸನ್ನ ೧೮೭೩ ಇಸವಿ
ಯೆಲ್ಲಾಪೂರ.

(Signed) Chanabussappa B. Dharwar.
ಡಿ. ಯ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೯-೨, ಪುಟ.೩೨೨ - ಮೇ ೧೮೭೩)

೬೩

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಸ್ಕೂಲ ಮಾಸ್ತರರಿಗೆ ತಿಳಿಯಪಡಿಸುವದೇನಂದರೆ - ಕೆಲವು ಮಾಸ್ತರರು ನಂಮಕಡಿಗೆ ವಿನಹಕಾರಣ ರಿಪೋರ್ಟುಗಳನ್ನು ಮಾಡುತ್ತಾರೆ. ಇದರಿಂದೆ ನಂಮ ಕಚೇರಿಯಲ್ಲಿ ವ್ಯರ್ಥ ಕೆಲಸವು ಬೆಳಿಯುತ್ತದೆ. ಇಂನ ಮುಂದೆ ವಿನಹಕಾರಣ ರಿಪೋರ್ಟು ಮಾಡಿದವರ ವಿಷಯವಾಗಿ ತಜವೀಜ ಮಾಡುವೆವು. ತಿಳಿಯುವದು. ತಾರೀಖು ೧೯ ಮಾಹೆ ಮೇ ಸನ್ನ ೧೮೭೩ ಇಸವಿ. ಧಾರವಾಡ.

(Signed) Chanabussappa B. Dharwar.
ಡಿ. ಯ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೯-೩, ಪುಟ.೩೫೨-೩೫೩ - ಜ್ಯೂನ ೧೮೭೩)

೬೪

ಬೆಳಗಾವಿ ಜಿಲ್ಹೆದೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ -

ಕೆಲವು ಮಾಸ್ತರರ ಕಡೆಯಿಂದ ಬರುವ ಯಾವತ್ತು ಕಾಗದ ಪತ್ರಗಳು ಅಗದೀ ತೆಳ್ಳಾನ ಕಾಗದದ ಮೇಲೆ ಬರೆಯುವದರಿಂದ ಹಿಂದೆ ಮುಂದೆ ಒಡೆದು ಬಹಳ ಹೊಲಸಾಗಿ ಅಕ್ಷರಗಳು ಕಾಣುವದಿಲ್ಲ. ಇಂನ ಮೇಲೆ ಯಾವತ್ತು ಕಾಗದ ಪತ್ರಗಳು ಒಡಿಯದಂಥ ಕಾಗದದ ಮೇಲೆ ಬರೆದು ಕಳುಹಿಸುತ್ತಾ ಬರಬೇಕು. ತಿಳಿಯುವದು. ತಾರಿಖು ೨೨ ಸಪ್ಟಂಬರ ೧೮೭೩ ಇಸವಿ.

(Signed) Chanabussappa B. Dharwar.
ಡಿ. ಇ. ಇನಸ್ಪೆಕ್ಟರ ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೯-೭, ಪುಟ.೪೪೭ - ಆಕ್ಟೋಬರ ೧೮೭೩)

೬೫

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ - ಭಾಗಾನುಬಂಧ ಪೂರ್ಣ ಅಂಕೆಗಳ ಬೇರೀಜವನ್ನು ಮಾಡುವಾಗ್ಗೆ ಪೂರ್ಣ ಅಂಕಿಗಳ ಬೇರೀಜವಂನು ಬೇರೆ ಮತ್ತು

ಅಪೂರ್ಣ ಅಂಕೆಗಳ ಬೇರೀಜವಂನು ಬೇರೆ ಮಾಡಿ ಆಮೇಲೆ ಇವೆರಡು ಬೇರೀಜಗಳನ್ನು ಕೂಡಿಸ ಬೇಕಂತೆ ಕಲಿಸಬೇಕು. ಈಗ ಹೀಗೆ ಕಲಿಸದೆ ಅಡ್ನಾಡಿ ಹಾದಿಯಿಂದೆ ಕಲಿಸುತ್ತಾರೆ. -

## ಉದಾಹರಣವು

(೧) ೧೩ ೭/೮, ೩೦೫ ೧೩/೨೦, ೪೦೮ ೨೩/೩೦, ಈ ಮೂರು ಅಪೂರ್ಣ ಅಂಕೆಗಳ ಬೇರೀಜು ಮಾಡಬೇಕಾದರೆ ಕೆಳಗೆ ಮಾಡಿ ತೋರಿಸಿದಂತೆ ಮಾಡಬೇಕು.

## ಸರಳ ರೀತಿಯು

೧೩ + ೩೦೫ + ೪೦೮ = ೭೨೬

$\frac{೭}{೮} + \frac{೧೩}{೨೦} + \frac{೨೩}{೩೦}$ ೮,೨೦,೩೦ ಈ ಅಂಕೆಗಳ ಲಘುತ್ತಮ ಸಾಧಾರಣ ಭಾಜ್ಯವು (೧೨೦)ಆದರಿಂದೆ;-

$\frac{೭X೧೫}{೮X೧೫} + \frac{೧೩X೬}{೨೦X೬} + \frac{೨೩X೪}{೩೦X೪} = \frac{೧೦೫ + ೭೮ + ೯೨}{೧೨೦} =$

$\frac{೨೭೫}{೧೨೦} = ೨ \ \frac{೩೫}{೧೨೦} = ೨ \ \frac{೭}{೨೪}$ ಆದರಿಂದ ೭೨೬ = $\frac{೨೭}{೨೪}$

೭೨೮ $\frac{೭}{೨೪}$ ಉತ್ತರವು.

## ಅಡ್ನಾಡಿ ರೀತಿಯು.

೧೩ X ೮+ ೧೭ = $\frac{೧೧೧}{೮}$

೩೦೫ X ೨೦+ ೧೩ = $\frac{೬೧೧೩}{೨೦}$

೪೦೮ X ೩೦ + ೨೩ = $\frac{೧೨೨೬೩}{೩೦}$

$\frac{೧೧೧}{೮} + \frac{೬೧೧೩}{೨೦} + \frac{೧೨೨೬೩}{೩೦}$

೧೧೧ X ೨೦ X ೩೦ = ೬೬೬೦೦

೬೧೧೩ X ೮ X ೩೦ = ೧೪೬೭೧೨೦

೧೨೨೬೩ X ೨೦ X ೮ = ೧೯೬೨೦೮೦

೮X೨೦X೩೦ = ೪೮೦೦. ಒಟ್ಟು ೩೪೯೫೮೦೦

ಆದರಿಂದೆ $\frac{೩೪೯೫೮೦೦}{೪೮೦೦} = ೭೨ \ \frac{೮೭}{೨೪}$ ಉತ್ತರವು. ತಿಳಿಯುವದು.

ತಾರೀಖು ೨೧ನೇ ಮಾಹೆ ಜೂನ ಸನ್ನ ೧೮೭೪ ಇಸವಿ.

(Signed) Chanabussappa B. Dharwar.
ಡಿಪುಟಿ ಇ. ಇನಸ್ಪೆಕ್ಟರ ಜಿಲ್ಲಾ ಧಾರವಾಡ.

(ಶಾಲಾಪತ್ರಿಕೆ : ೧೦-೪, ಪುಟ.೮೪-೮೫ - ಜುಲೈ ೧೮೭೪)

## ೬೬

## ಧಾರವಾಡ ಜಿಲ್ಹೇದೊಳಗೆ ಸನ್ನ ೧೮೭೪ ಇ. ಜುಲೈ ತಿಂಗಳಲ್ಲಿ ಆದ. ನೇಮಣೂಕುಗಳು

೧ ನವಲಗುಂದ ಬ್ರೆಂಚ - ಈ ಹೊಸ ಸಾಲಿಯ ಹೆಡ್ಡ ಮಾಸ್ತರ ಕೆಲಸಕ್ಕೆ ಧಾರವಾಡ ೨ನೇ ನಂಬರದ ಸಾಲಿಯ ಅ. ಮಾಸ್ತರರಾದ ಮರೆಯ್ಯಾ ರಾಚಯ್ಯಾ ಇವರನ್ನು ನೇಮಿಸಿರುತ್ತದೆ. ಸಂಬಳ ರೂಪಾಯಿ ೮.

೨ ನವಲಗುಂದ ಗರ್ಲ - (ಹೊಸ ಸಾಲಿ) ಇಲ್ಲಿಯ ಹೆಡ್ಡ ಮಾಸ್ತರ ಕೆಲಸಕ್ಕೆ ಅಂಣಿಗೇರಿ ಸಾಲಿಯ ಅ. ನಾದ ಸಾತಯ್ಯಾ ಶಂಕರಯ್ಯಾ ಇವರನ್ನು ನೇಮಿಸಿರುತ್ತದೆ. ಸಂಬಳ ರೂಪಾಯಿ ೧೨.

೩ ನರಗುಂದ ಗರ್ಲ - (ಹೊಸ ಸಾಲಿ) ಈ ಜಾಗಾದ ಮೇಲೆ ನರಗುಂದ ಕನ್ನಡ ಸಾಲಿಯ ೨ನೇ, ಅ. ನಾದ ನೀಲಕಂಠಯ್ಯಾ ಶಂಕರಯ್ಯಾ ಇವರನ್ನು ನೇಮಿಸಿರುತ್ತದೆ. ಸಂಬಳ ರೂಪಾಯಿ ೧೨.

೪ ಗುಡೀಸಾಗರ - (ಹೊಸ ಸಾಲಿ) ಇಲ್ಲಿಯ ಹೆಡ್ಡ ಮಾಸ್ತರ ಜಾಗಾದ ಮೇಲೆ ನವಲಗುಂದ ಸಾಲಿಯ ೧ನೇ ಅ.ನಾದ ಬಸಪ್ಪಾ ಶಿವಲಿಂಗಪ್ಪಾ ಹೊಂನೀದಿಬ್ಬ ಇವನನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೧೨.

೫ ಚಿಕ್ಕ ನರಗುಂದ - (ಹೊಸ ಸಾಲಿ) ಇಲ್ಲಿಯ ಹೆಡ್ಡ ಮಾಸ್ತರ ಜಾಗಾದ ಮೇಲೆ ಗದಗ ಬೆಟಗೇರೀ ೧ನೇ ಅ.ನಾದ ವೀರಪ್ಪಾ ಬಸೆಟ್ಟೆಪ್ಪಾ ವಾಲೀ ಇವನನ್ನು ನೇಮಿಸಿರುತ್ತದೆ. ಸಂಬಳ ರೂಪಾಯಿ. ೧೨.

೬ ತುಪ್ಪದ ಕುರಹಟ್ಟಿ - (ಹೊಸ ಸಾಲಿ) ಈ ಸಾಲಿಯ ಹೆಡ್ಡ ಮಾಸ್ತರ ಕೆಲಸಕ್ಕೆ ಧಾರವಾಡ ೨ನೇ ನಂಬರದ ಕನ್ನಡ ಸಾಲಿಯ ಅ. ಮಾಸ್ತರರಾದ ಗವುಸಖಾನ ವಲ್ಲದ ಸರದಾರಖಾನ ಇವರನ್ನು ನೇಮಿಸುತ್ತದೆ. ಸಂಬಳ ರೂಪಾಯಿ ೧೨.

೭ ರೋಣ ಬ್ರೆಂಚ - (ಹೊಸ ಸಾಲಿ) ಇಲ್ಲಿಯ ಹೆಡ್ಡ ಮಾಸ್ತರ ಜಾಗಾದ ಮೇಲೆ ನೇಮಪ್ಪಾ ಪಾರೆಪ್ಪಾ ಇವರನ್ನು ನೇಮಿಸಿರುತ್ತದೆ. ಸಂಬಳ ರೂಪಾಯಿ ೮.

೮ ಹುಲ್ಲೂರ - (ಹೊಸ ಸಾಲಿ) ಇಲ್ಲಿಯ ಹೆಡ್ಡಮಾಸ್ತರ ಜಾಗಾದ ಮೇಲೆ ಬಾಳಕೃಷ್ಣ ಬಾಪೂಜಿ ಟ್ರೇನಿಂಗ ಕಾಲೇಜದ ವಿದ್ಯಾರ್ಥಿ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೧೨.

೯ ಹೊಳಿಆಲೂರ - (ಹೊಸ ಸಾಲಿ) ಇಲ್ಲಿಯ ಹೆಡ್ಡಮಾಸ್ತರ ಜಾಗಾದ ಮೇಲೆ ಟ್ರೇನಿಂಗ ಕಾಲೇಜದ ವಿದ್ಯಾರ್ಥಿಯಾದ ಸ್ವಾಮೀ ಶ್ರೀಪತ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೧೨.

೧೦ ಧುಂಮವಾಡ - (ಹೊಸ ಸಾಲಿ) ಇಲ್ಲಿಯ ಹೆಡ್ಡ ಮಾಸ್ತರ ಕೆಲಸಕ್ಕೆ ಕಲಘಟಗೀ ತಾಲೂಕ ಹಿರೇಹೊಂನೀಹಳ್ಳಿ ಸಾಲಿಯ ಮಾಜೀ ಮಾಸ್ತರನಾದ ಹಣಮಂತ ದೇವಜೀ ಸವಣೂರಕರ ಇವರನ್ನು ನೇಮಿಸಿರುತ್ತದೆ. ಸಂಬಳ ರೂಪಾಯಿ ೮.

೧೧ ದೇವೀಕೊಪ್ಪ - (ಹೊಸ ಸಾಲಿ) ಹೆಡ್ಡ ಮಾಸ್ತರ ಜಾಗಾದ ಮೇಲೆ ಹಾವೇರೀ ಸಾಲಿಯ ಅ. ಮಾಸ್ತರರಾದ ವೀರಭದ್ರಯ್ಯಾ ವಿರಬಸಯ್ಯಾ ಇವರನ್ನು ನೇಮಿಸಿರುತ್ತದೆ. ಸಂಬಳ ರೂಪಾಯಿ ೮.

೧೨ ಹುರಳೀಕೊಪ್ಪ - (ಹೊಸ ಸಾಲಿ) ಇಲ್ಲಿಯ ಮಾಸ್ತರ ಜಾಗಾಕ್ಕೆ ಅಮರಗೊಳ್ಳ ಸಾಲಿಯ ಶೀಕ್ಷಕನಾದ ಶಾಮಾಜೀ ಕೃಷ್ಣ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೮.

೧೩ ಕಳಸ - (ಹೊಸ ಸಾಲಿ) ಇಲ್ಲಿಯ ಹೆಡ್ಡ ಮಾಸ್ತರ ಜಾಗಾದ ಮೇಲೆ ಟ್ರೇನಿಂಗ ಕಾಲೇಜದ ವಿದ್ಯಾರ್ಥಿಯಾದ ಶೇಷಗೀರ ಶ್ರೀನಿವಾಸ ಹುಡೇದ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೧೨.

(Signed) Chanabussappa B. Dharwar.
ಡಿಪುಟಿ ಇ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೧೦-೬, ಪುಟ.೧೩೪-೧೩೬ - ಸೆಪ್ಟೆಂಬರ ೧೮೭೪)

## ೬೭

## ಧಾರವಾಡ ಜಿಲ್ಹೆಯಲ್ಲಿ ಆದ ನೇಮಣೂಕುಗಳು

೧ ಮುಗದ - ಈ ಸಾಲಿಯನ್ನು ಹುಡುಗರ ಸಂಖ್ಯೆ ಕಡಿಮೆಯಾದದರಿಂದ ತಗದಿತ್ತು. ಪರಂತೂ ಪುನಃ ಇದನ್ನು ಹಾಕಬೇಕೆಂದು ಗೊತ್ತಾದ ಕಾರಣ ಸದರೀ ಸಾಲಿಯ ಹೆಡ್ಡಮಾಸ್ತರ ಕೆಲಸಕ್ಕೆ, ಫಕೀರಪ್ಪಾ ರಾಣಪ್ಪಾ ಅ. ಮಾಸ್ತರ ತೇಗೂರ ಇವರನ್ನು ನೇಮಿಸಿರುತ್ತದೆ. ಸಂಬಳ ರೂಪಾಯಿ ೮.

೨ ಶಿಲವಡಿ - ಈ ಸಾಲಿಯಲ್ಲಿ ಹೊಸದಾಗಿ ಆಗಿರುವ ೧ನೇ ಅ. ಜಾಗಾದ ಮೇಲೆ ಟ್ರೆಂಡ ವಿದ್ಯಾರ್ಥಿಯಾದ ಭೀಮಾಜೀ ರಾಮಾಚಾರ್ಯ ಇವರನ್ನು ನೇಮಿಸಿರುತ್ತದೆ. ಸಂಬಳ ರೂಪಾಯಿ ೧೨.

೩ ಅಮರಗೋಳ - ಇಲ್ಲಿಯ ಹೆಡ್ಡಮಾಸ್ತರ ಜಾಗಾದ ಮೇಲೆ ಧಾರವಾಡ ೩ನೇ ನಂಬರದ ಸಾಲಿಯ ೧ನೇ ಅ.ನಾದ ಹಣಮಂತಶಿಂಗ ಭೀಮಶಿಂಗ ಇವರನ್ನು ನೇಮಿಸಿರುತ್ತದೆ. ಇವರ ಪಗಾರ ೧೦ ರೂಪಾಯಿ ಇದ್ದು ಸದರ ಜಾಗಾವೂ ೧೨ ರೂಪಾಯಿದ್ದು ಇರುತ್ತದೆ.

೪ ಭದ್ರಾಪೂರ - (ಹೊಸ ಸಾಲಿ) ಈ ಸಾಲಿಯ ಹೆಡ್ಡಮಾಸ್ತರ ಜಾಗಾಕ್ಕೆ ರೋಣ ತಾ. ಬೆಳವಣಿಕೀ ಸಾಲಿಯ ಮಾಸ್ತರರಾದ ಷಣ್ಮುಖಯ್ಯಾ ಬಸಲಿಂಗಯ್ಯಾ ಇವರನ್ನು ನೇಮಿಸಿರುತ್ತದೆ. ಇವರಿಗೆ ಬೆಳವಣಿಕಿಯಲ್ಲಿ ೧೧ ರೂಪಾಯಿ ಶಿಗತಿದ್ದು ಭದ್ರಾಪೂರದ ಜಾಗಾ ೧೨ ರೂಪಾಯಿ ಇರುತ್ತದೆ.

೫ ಗದಗ ಬೆಟಗೇರಿ ನಾಯಿಟಸ್ಕೂಲ - (ಹೊಸ ಸಾಲಿ) ಈ ಸಾಲಿಯ ಮಾಸ್ತರ ಕೆಲಸಕ್ಕೆ ಅಂದಾನ್ನೆಯ್ಯಾ ಅಂದಾನ್ನೆಯ್ಯಾ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೬.

೬ ಇಂಗಳಗಿ (ಹೊಸ ಸಾಲಿ) ಇಲ್ಲಿಯ ಸಾಲಿಯ ಹೆಡ್ಡಮಾಸ್ತರ ಜಾಗಾದ ಮೇಲೆ ಹುಬ್ಬಳ್ಳೀ ಕಂನಡ ಮರಾಠಿ ಸಾಲಿಯ ೧ನೇ ಅ.ನಾದ, ಕಾಶೀನಾಥ ಮಹಾದೂಸಾ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೯.

೭ ಕಾರಡಗಿ (ಹೊಸ ಸಾಲಿ) ಇಲ್ಲಿಯ ಸಾಲಿಯ ಹೆಡ್ಡಮಾಸ್ತರ ಜಾಗಾದ ಮೇಲೆ ಗದಗ ಸಾಲಿಯ ಅ. ಮಾಸ್ತರರಾದ ನೀಲಕಂಠಯ್ಯಾ ಸಂಗಯ್ಯಾ ಇವರಂನು ನೇಮಿಸಿರುತ್ತದೆ. ಇವರಿಗೆ ಗದಗಿನಲ್ಲಿ ೯ ರೂ. ಶಿಗತಿದ್ದು ಕಾರಡಗಿಗೆ ೧೨ ರೂಪಾಯದ ಮೇಲೆ ನೇಮಿಸಿರುತ್ತದೆ.

೮ ಹಿರೇಬೆಂಡೀಗೇರಿ (ಹೊಸ ಸಾಲಿ) ಇಲ್ಲಿಯ ಮಾಸ್ತರ ಜಾಗದ ಮೇಲೆ, ಹಾವೇರೀ ಸಾಲಿಯ ಅ.ಮಾಸ್ತರರಾದ ಬಸಪ್ಪಾ ತಮ್ಮಪ್ಪಾ ಕನೋಜ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೧೧.

೯ ದುಂಡಸೀ ಗರ್ಲ (ಹೊಸ ಸಾಲಿ) ಈ ಸಾಲಿಯ ಹೆಡ್ಡ ಮಾಸ್ತರ ಜಾಗದ ಮೇಲೆ, ನಂದಯ್ಯಾ ಬಸಯ್ಯಾ ಸವಣೂರು ಇವರನ್ನು ನೇಮಿಸಿರುತ್ತದೆ. ಸಂಬಳ ರೂಪಾಯಿ ೧೦.

೧೦ ಹಾವೇರಿ - ಇಲ್ಲಿಯ ಸಾಲಿಯ ೧ನೇ ಅ.ನಾದ ಜಗಂನಾಥ ಶ್ರೀಧರ ಗೋಖಲೇ ಇವರನ್ನು ಕೋಡ ತಾ. ಕಚವಿ ಸಾಲಿಯ ಹೆಡ್ಡಮಾಸ್ತರ ಕೆಲಸಕ್ಕೆ ನೇಮಿಸಿ, ಸದರೀ ಜಾಗಾದ ಮೇಲೆ, ಟ್ರೇನಿಂಗ ಕಾಲೇಜದ ವಿದ್ಯಾರ್ಥಿಯಾದ ಸುಬ್ಬಾಜೀ ಶಿವರಾಮ ಇವರನ್ನು ನೇಮಿಸಿರುತ್ತದೆ. ಸಂಬಳ (ಉಭಯತರದೂ) ರೂಪಾಯಿ ೧೫.

೧೧ ಹತ್ತಿಮತ್ತೂರ - ಈ ಸಾಲಿಯನ್ನು ಬ್ರೆಂಚ ಸ್ಕೂಲ ಮಾಡಿದ್ದರಿಂದ, ಇಲ್ಲಿಯ ಮಾಸ್ತರರಾದ, ದತ್ತಾತ್ರೀ ಶ್ರೀಪಾದ ವಡಣಗಿಕರ ಇವರನ್ನು ಕೋಡತಾಲೂಕ ಚಿನ್ನಮುಳಗುಂದ ಸಾಲಿಯ ಮಾಸ್ತರ ಕೆಲಸಕ್ಕೆ ನೇಮಿಸಿರುತ್ತದೆ. ಸಂಬಳ ರೂ. ೧೫ ಸದರೀ ಹತ್ತೀಮತ್ತೂರ ಸಾಲಿಯ ಮಾಸ್ತರ ಕೆಲಸಕ್ಕೆ ರಾಣೇಬಿನ್ನೂರ ತಾಲೂಕ ಮೋಟೇಬೆಂನೂರ ಸಾಲಿಯ ಅ.ಮಾಸ್ತರರಾದ ಫಕರೂವಲ್ಲದ ಬೂಢಣ ಇವರನ್ನು ನೇಮಿಸಿರುತ್ತದೆ. ಸಂಬಳ ರೂಪಾಯಿ ೮.

೧೨ ಕನವಳ್ಳಿ (ತಾ. ಕಜಿಲಿಗಿ) ಇಲ್ಲಿಯ ಮಾಸ್ತರರಾದ ಮುದವೀರಯ್ಯಾ ತೊಟ್ಟದೇವರಯ್ಯಾ ಇವರನ್ನು ರಾಣೇಬೆಂನೂರ ಗರ್ಲಸ್ಕೂಲಿನ ಮಾಸ್ತರ ಕೆಲಸಕ್ಕೆ ನೇಮಿಸಿರುತ್ತದೆ. ಪಗಾರ ರೂ. ೧೨ ಸದರೀ ಕನವಳ್ಳೀ ಸಾಲಿಯ ಮಾಸ್ತರ ಕೆಲಸಕ್ಕೆ ಕಲಘಟಗಿ ಸಾಲಿಯ ಅ. ಮಾಸ್ತರರಾದ, ಧೋಂಡೋ ನರಸಿಂಹ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೧೦.

೧೩ ಹಾನಗಲ್ಲ ಗರ್ಲ (ಹೊಸ ಸಾಲಿ) ಇಲ್ಲಿಯ ಮಾಸ್ತರ ಜಾಗಾದ ಮೇಲೆ ಆಲೂರ ಸಾಲಿಯ ಅ. ಮಾಸ್ತರರಾದ ಮಹದೇವ ನಾರಾಯಣ ಜಮಖಂಡಿಕರ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೧೦.

೧೪ ಹಾನಗಲ್ಲ ಬ್ರೆಂಚ (ಹೊಸ ಸಾಲಿ) ಇಲ್ಲಿಯ ಮಾಸ್ತರ ಕೆಲಸಕ್ಕೆ ಹಾನಗಲ್ಲ ಸಾಲಿಯ ಅ. ಮಾಸ್ತರರಾದ ಚಿದಂಬರ ಲಿಂಗೋ ಇವರನ್ನು ನೇಮಿಸಿರುತ್ತದೆ. ಪಗಾರ ರೂ. ೮.

೧೫ ಸಮಸಗಿ (ಹೊಸ ಸಾಲಿ) ಈ ಸಾಲಿಯ ಹೆಡ್ಡಮಾಸ್ತರ ಜಾಗಾದ ಮೇಲೆ, ಶಿಗ್ಗಾಂವೀ ಸಾಲಿಯ ೧ನೇ ಅ.ನಾದ ಕೃಷ್ಣಾಜೀ ವ್ಯೆಂಕಟೇಶ ಇವರನ್ನು ನೇಮಿಸಿರುತ್ತದೆ. ಪಗಾರ ರೂ.೧೦ ಸದರೀ ಶಿಗ್ಗಾಂವೀ ಸಾಲಿಯ ಅ. ಜಾಗಾದ ಮೇಲೆ ಹುಬ್ಬಳ್ಳೀ ೨ನೇ ನಂಬರದ ಸಾಲಿಯ ಅ. ಮಾಸ್ತರರಾದ ಶಿವನಗೌಡಾ ಇವರನ್ನು ನೇಮಿಸಿರುತ್ತದೆ. ಸಂಬಳ ರೂ. ೧೦.

(Signed) Chanabussappa B. Dharwar.
ಡಿಪೂಟ ಇ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೧೦-೭, ಪುಟ.೧೭೩-೧೭೭ - ಅಕ್ಟೋಬರ ೧೮೭೪)

## ೭೮

## ಧಾರವಾಡ ಜಿಲ್ಲೇದೊಳಗಿನ ನೇಮಣೂಕುಗಳು ಫೇಬರವರಿ ೧೮೭೫

೧ ಅಂದಾನ್ನೆಯ್ಯಾ ಚನಬಸಯ್ಯಾ ಹೆಡ್ಡಮಾಸ್ತರ ತಿರ್ಲಾಪೂರ ತಾ. ನವಲಗುಂದ ಇವರನ್ನು ಬೆಳಗಾವೀ ಟ್ರೇನಿಂಗ ಕಾಲೇಜಕ್ಕೆ ಕಳುಹಿಸಿ ಇವರ ಜಾಗಾದ ಮೇಲೆ ಅಡಿವೆಯ್ಯಾ ರುದ್ರಯ್ಯಾ ಟ್ರೇನಿಂಗ ಕಾಲೇಜ ವಿದ್ಯಾರ್ಥಿ ಇವರನ್ನು ನೇಮಿಸಿರುತ್ತದೆ.

೨ ರಾಮಚಂದ್ರ ಸ್ವಾಮಿರಾವ ಹೆಡ್ಡಮಾಸ್ತರ ಅಳಗವಾಡಿ ತಾ. ನವಲಗುಂದ ಇವರನ್ನು ಮೆ. ಇ. ಇನಸ್ಪೆಕ್ಟರ ಸಾ. ಬಹದ್ದೂರರವರ ಅಪ್ಪಣೆಯ ಮೇಲಿಂದ, ೩ ರೂಪಾಯಿ ಪಗಾರ ಕಡಿಮೆ ಮಾಡಿ ೧೨ ರುಪಾಯಿಯ ಮೇಲೆ ಹುಬ್ಬಳ್ಳಿ ತಾಲೂಕ ಕೂಸೂಗಲ್ಲ ಸಾಲಿಯ ಹೆಡ್ಡಮಾಸ್ತರ ಕೆಲಸಕ್ಕೆ ನೇಮಿಸಿರುತ್ತದೆ.

೩ ಮುರಾರ ರೂದ್ರೋ ಕುರ್ತಕೋಟೀ ಹೆಡ್ಡಮಾಸ್ತರ ಕುಸುಗಲ್ಲ ಇವರನ್ನು ಅಷ್ಟೇ ಪಗಾರದ ಮೇಲೆ (೧೨ ರು.) ಅಳಗವಾಡೀ ಸಾಲಿಯ ಮಾಸ್ತರ ಕೆಲಸಕ್ಕೆ ನೇಮಿಸಿರುತ್ತದೆ.

೪ ಶಿವನಯ್ಯಾ ಚನಬಸಯ್ಯಾ ಹೆಡ್ಡಮಾಸ್ತರ ಕುರಹಟ್ಟಿ ಇವರನ್ನು ಟ್ರೇನಿಂಗ ಕಾಲೇಜಕ್ಕೆ ಕಳುಹಿಸಿ ಇವರ ಜಾಗಾದ ಮೇಲೆ ಟ್ರೇನಿಂಗ ಕಾಲೇಜ ವಿದ್ಯಾರ್ಥಿಯಾದ ಶಿವಬಸಯ್ಯಾ ರಾಚಯ್ಯಾ ಇವರನ್ನು ನೇಮಿಸಿದ್ಧೇವೆ. ಪಗಾರ ರುಪಾಯಿ ೧೨.

೫ ಸಾತಯ್ಯಾ ಶಂಕರಯ್ಯಾ ಹೆಡ್ಡಮಾಸ್ತರ ಗರ್ಲಸ್ಕೂಲ ನವಲಗುಂದ ಇವರನ್ನು ಟ್ರೇನಿಂಗ ಕಾಲೆಜಕ್ಕೆ ಕಳುಹಿಸಿ, ಕಾಲೇಜದ ವಿದ್ಯಾರ್ಥಿಯಾದ ಬಾಳಪ್ಪಾ ಮುಸೆಪ್ಪಾ ಇವರನ್ನು ನೇಮಿಸಿರುತ್ತದೆ. ಪಗಾರ ರುಪಾಯಿ ೧೨.

೬ ಷಣ್ಮುಖಯ್ಯಾ ಬಸಲಿಂಗಯ್ಯಾ ಹೆಡ್ಡಮಾಸ್ತರ ಬೆಳವಣಿಕಿ ತಾ. ರೋಣ ಇವರಂನು ೧ ರುಪಾಯಿ ಹೆಚ್ಚು ಮಾಡಿ ನವಲಗುಂದ ತಾ. ಭದ್ರಾಪೂರ ಹೊಸ ಸಾಲಿಯ ಹೆಡ್ಡ ಮಾಸ್ತರ ಕೆಲಸಕ್ಕೆ ನೇಮಿಸಿದ್ಧೇವೆ. ಪಗಾರ ರುಪಾಯಿ ೧೨.

೭ ಬಸಪ್ಪಾ ಸಿವಲಿಂಗಪ್ಪಾ ಹೊಂನೀದಿಬ್ಬ ಹೆಡ್ಡಮಾಸ್ತರ ಗುಡಿಸಾಗರ ತಾ. ನವಲಗುಂದ ಇವರನ್ನು ಟ್ರೇನಿಂಗ ಕಾಲೇಜಕ್ಕೆ ಕಳುಹಿಸಿ ಇವರ ಜಾಗಾದ ಮೇಲೆ ಟ್ರೇನಿಂಗ ಕಾಲೇಜದ ವಿದ್ಯಾರ್ಥಿಯಾದ ವೀರಪ್ಪಾ ಶಿವಲಿಂಗಪ್ಪಾ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೧೨.

೮ ವೀರಪ್ಪಾ ಬಸೆಟ್ಟೆಪ್ಪಾ ವಾಲಿ ಅ. ಮಾಸ್ತರ ಬೆಟಗೇರಿ ಇವರಿಗೆ ೧ ರೂಪಾಯಿ ಪಗಾರ ಹೆಚ್ಚು ಮಾಡಿ ನವಲಗುಂದ ತಾ. ಚಿಕ್ಕ ನರಗುಂದ ಸಾಲಿಯ ಹೆಡ್ಡ ಮಾಸ್ತರ ಕೆಲಸಕ್ಕೆ ನೇಮಿಸಿರುತ್ತದೆ. ಪಗಾರ ರೂಪಾಯಿ ೧೨.

೯ ಸದರಿ ಬೆಟಗೇರಿ ಅ. ಜಾಗಾದ ಮೇಲೆ ಶಂಕರಯ್ಯಾ ಗುರಬಸಯ್ಯಾ ಮಾಜೀ ಅ. ಮಾಸ್ತರ ಇಂಗ್ಲಿಷ ಸ್ಕೂಲ ಗದಗ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೧೧.

೧೦ ಶಿದ್ದಪ್ಪಾ ಸಂಗಪ್ಪಾ ಟ್ರೇನಿಂಗ ಕಾಲೇಜ ವಿದ್ಯಾರ್ಥಿ ಇವರನ್ನು ರೋಣ ತಾ. ಬೆಳವಣಿಕಿ ಸಾಲಿಯ ಹೆಡ್ಡಮಾಸ್ತರ ಕೆಲಸಕ್ಕೆ ನೇಮಿಸಿರುತ್ತದೆ. ಪಗಾರ ರೂ. ೧೧.

೧೧ ರೋಣ ತಾ. ಹಿರೆಹಾಳದ ಹೊಸ ಸಾಲಿಯ ಹೆಡ್ಡ ಮಾಸ್ತರ ಕೆಲಸಕ್ಕೆ ಬೆಳಗಾವೀ ಟ್ರೇನಿಂಗ ಕಾಲೇಜದ ವಿದ್ಯಾರ್ಥಿಯಾದ ಗದಿಗೆಯ್ಯಾ ಗುರುವಯ್ಯಾ ಇವರನ್ನು ನೇಮಿಸಿರುತ್ತದೆ. ಪಗಾರ ರೂ.೧೨.

೧೨ ಧಾರವಾಡ ಕನ್ನಡ ನಂಬರ ೩ನೇ ಸಾಲಿಯ ಅ. ಮಾಸ್ತರರಾದ ಜಯವಂತ ಬಾಬೂರಾವ ದಿವೇಕರ ಇವರು ಟಪಾಲ ಖಾತೇದೊಳಗೆ ಪೋಷ್ಟಮಾಸ್ತರ ಜಾಗಾಕ್ಕೆ ಹೋದ್ದರಿಂದ ಇವರ ಜಾಗಾದ ಮೇಲೆ ಹುಬ್ಬಳ್ಳೀ ೧ನೇ ನಂಬರದ ಸಾಲಿಯ ಅ. ನಾದ ತಂಮಾಜಿ ತಿಂಮಾಜಿ ಇವರನ್ನು ನೇಮಿಸಿರುತ್ತದೆ. ಪಗಾರ ರುಪಾಯಿ ೧೦.

೧೩ ಕಲಘಟಗಿ ತಾ. ಮಿಶ್ರಿಕೋಟಿ ಸಾಲಿಯ ೧ನೇ ಅ.ಜಾಗಾದ ಮೇಲೆ ಹಜರತ ರಹಿಮಾನ ಟ್ರೇನಿಂಗ ಕಾಲೇಜ ಇವರನ್ನು ನೇಮಿಸಿರುತ್ತದೆ. ಪಗಾರ ರು.೧೨.

೧೪ ಶಿಗ್ಗಾವಿ ಸಾಲಿಯ ೧ನೇ ಅ. ರಾದ ಶಿವಣಗವಡಾ ಇವರನ್ನು ಬೆಳಗಾವಿ ಟ್ರೇನಿಂಗ ಕಾಲೇಜಕ್ಕೆ ಕಳುಹಿಸಿ ಇವರ ಜಾಗಾದ ಮೇಲೆ ಟ್ರೇನಿಂಗ ಕಾಲೇಜದ ವಿದ್ಯಾರ್ಥಿಯಾದ ಗೋವಿಂದ ಭಾವೂನಾಯೀಕ ಇವರನ್ನು ನೇಮಿಸಿರುತ್ತದೆ. ಪಗಾರ ರೂ. ೧೧.

೧೫ ಶಿಗ್ಗಾವಿ ತಾ. ಕಾರಡಗೀ ಸಾಲಿಯ ಮಾಸ್ತರರಾದ ನೀಲಕಂಠಯ್ಯಾ ಸಂಗಯ್ಯಾ ಇವರನ್ನು ಕಾಲೇಜಕ್ಕೆ ಕಳುಹಿಸಿ ಇವರ ಜಾಗಾದ ಮೇಲೆ ಕಾಲೇಜದ ವಿದ್ಯಾರ್ಥಿಯಾದ ಚನಬಸಪ್ಪಾ ದುಂಡಪ್ಪಾ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೧೨.

೧೬ ಹಾನಗಲ್ಲ ತಾ. ತಿಳವಳ್ಳಿ ಸಾಲಿಯ ಮಾಸ್ತರರಾದ ಕೃಷ್ಣಾಜಿ ರಾಮಚಂದ್ರ ಇವರನ್ನು ಕಾಲೇಜಕ್ಕೆ ಕಳುಹಿಸಿ ಇವರಜಾಗಾದ ಮೇಲೆ ಕಾಲೇಜದ ವಿದ್ಯಾರ್ಥಿಯಾದ ಮಹಾದೇವ ನಾರಾಯಣ ಇವರನ್ನು ನೇಮಿಸಿರುತ್ತದೆ. ಪಗಾರ ರೂಪಾಯಿ ೧೨.

**Chanabussappa B. Dharwar.**
ಡಿಪೂಟ ಇ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೧೧-೧, ಪುಟ.೧೬-೨೦ - ? ೧೮೭೫)

೬೯

ಧಾರವಾಡ ಜಿಲ್ಹೆದೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ ತಿಳುಹಿಸುವದೇನಂದರೆ ;- ಯೆರಡನೇ ಪುಸ್ತಕಗಳು ಡಿಪೋದಲ್ಲಿ ಶಿಲಕು ಇಲ್ಲಾ. ಆದರಿಂದ ಆ ಪುಸ್ತಕಗಳ ಬದಲು ೧ನೇ ಪುಸ್ತಕದ ೧ನೇ ಭಾಗದ ಉಪಯೋಗವನ್ನು ಮಾಡಬೇಕು.

ತಾರಿಖ ೨೨ನೇ ಮಾಹೆ ಮೇ ಸಂನ್ ೧೮೭೫ ಇ||
ಧಾರವಾಡ.

Chanabussappa B. Dharwar.
ಡಿ. ಎ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೧೧-೨, ಪುಟ.೬೯ - ಮೇ ೧೮೭೫)

೭೦

Notice
ನೋಟೀಸು
ಧಾರವಾಡ ಜಿಲ್ಲೆದೊಳಗಿನ ನೇಮಣೂಕುಗಳು

೧ ಹಣಮಂತ ರಾಮಚಂದ್ರ ಬಾಗಲವಾಡಿ ಅ. ಮಾಸ್ತರ ಮರಾಠಿ ಸ್ಕೂಲ ಧಾರವಾಡ ಇವರನ್ನು ನವಲಗುಂದ ತಾ. ಪೈಕಿ ಚಿಕ್ಕನರಗುಂದ ಸಾಲಿಯ ಹೆಡ್ಡಮಾಸ್ತರ ಕೆಲಸಕ್ಕೆ ನೇಮಿಸಿರುತ್ತದೆ. ಸಂಬಳ ರೂ. ೧೨.

೨ ಸದರಿ ಬಾಗಲವಾಡಿ ಇವರ ಜಾಗಾಕ್ಕೆ ಧಾರವಾಡ ಕನ್ನಡ ಸಾಲಿಯ ಅ.ನಾದ ರಾಮಚಂದ್ರ ಕಾಶೀನಾಥ ಪಟವರ್ಧನ ಇವರನ್ನು ನೇಮಿಸಿರುತ್ತದೆ. ಸಂಬಳ ರೂಪಾಯಿ ೧೨.

೩ ಸದರಿ ಪಟವರ್ಧನ ಇವರ ಜಾಗೇದ ಮೇಲೆ ಸಖಾರಾಮ ಶಂಕರ ಮೈಸಕರ ಮಾಜಿ ಅ. ಮಾಸ್ತರ ನರಗುಂದ ಇವರನ್ನು ನೇಮಿಸಿರುತ್ತದೆ. ಸಂಬಳ ರೂ. ೧೨.

೪ ಬಂಮಿಗಟ್ಟಿ ತಾ. ಕಲಘಟಗಿ ಈ ಸಾಲಿಯ ಮಾಸ್ತರರಾದ ಹಜರತ ರಹಿಮಾನ ಇವರಿಗೆ ಪೋಲೀಸ ಖಾತೇಯಲ್ಲಿ ನಾಯಿಕಿ ಜಾಗಾ ಶಿಕ್ಕಿದ್ದರಿಂದ, ಅವರು ತಮ್ಮ ಜಾಗಾಕ್ಕೆ ಹೊರಟುಹೋದರು. ಸದರಿಯವರ ಜಾಗಾದ ಮೇಲೆ ಹಾನಗಲ್ಲ ತಾ. ಪೈಕಿ ನರೆಗಲ್ಲ ಸಾಲಿಯ ಮಾಸ್ತರಾದ ತವನಾಜಿ ಸೋಮನಾಥ ಇವರ ನೇಮಣೂಕು ಮಾಡಿರುತ್ತದೆ. ಸಂಬಳ ರೂ. ೧೫.

೫ ಸದರ ತವನಾಜಿ ಸೋಮನಾಥ ಇವರ ಜಾಗಾದ ಮೇಲೆ ಮೊರಬದ ಸಾಲಿಯ ೧ನೇ ಅ. ಮಾಸ್ತರರಾದ ವೇಣು ವಾಸುದೇವ ತಡಕೊಡ ಇವರ ನೇಮಣೂಕು ಮಾಡಿರುತ್ತದೆ. ಪಗಾರ ರೂ. ೧೨.

೬ ರೋಣ ತಾಲೂಕ ಸೂಡಿಸಾಲಿಯ ಮಾಸ್ತರರಾದ ಯೋಗೇಶ್ವರ ಧೋಂಡದೇವ ಲಿಮಯೆ ಹಾಂಗೂ ಹುಬ್ಬಳ್ಳಿ ತಾ. ಪೈಕಿ ಯರಗುಪ್ಪಿ ಸಾಲಿಯ ಮಾಸ್ತರರಾದ ರಾಜಾರಾಮ ಪಿರಾಜಿ ಇವರು ನಾವು ಸಮಕ್ಷ ಹೋದಾಗ್ಯೆ ತಮ್ಮ ತಮ್ಮ ಸಾಲಿಯ ರಜಿಷ್ಟರ ತುಂಬಿದ್ದಿಲ್ಲಾ ಈ ಮಜಕೂರು ನಾವು ಮೆಹರ್ಬಾನ ಇಜ್ಯುಕೇಶನಲ್ ಇನಸ್ಪೆಕ್ಟರ ಸಾಹೇಬ ಬಹದ್ದೂರವರಿಗೆ ತಿಳುಹಿಸಲು, ಸದರೀ ಮಾಸ್ತರರಿಗೆ ಒಂದೊಂದು ತಿಂಗಳದ ಪಗಾರ ದಂಡಮಾಡಬೇಕೆಂದು ಬರದು ಬಂದದರಿಂದ ಸದರೀ ಮಾಸ್ತರರಿಗೆ ದಂಡ ಮಾಡಿರುತ್ತದೆ.

೭ ಹಿರೇಕಿರೂರ ಸಾಲಿಯ ಮಾಸ್ತರರಾದ ನರಸೋ ಗಣೇಶ ಇವರು ಹಿರೇಕೆರೂರ ಸಾಲಿಯ ಪಗಾರ ತಗೊಂಡು ರಟ್ಟೆಹಳ್ಳಿಯಲ್ಲಿ ಹಾಂಗೂ ರಟ್ಟೆಹಳ್ಳಿ ಮಾಸ್ತರರಾದ ಕಲ್ಲೋ ಶಿವಾಜಿ ಇವರು ರಟ್ಟೆಹಳ್ಳಿ ಪಗಾರ ತಗೊಂಡು ಹಿರೇಕೆರೂರಲ್ಲಿ, ಕೆಲಸ ಮಾಡಬೇಕೆಂದು ಗೊತ್ತಾಗಿ ಆ ಪ್ರ|| ಪರಸ್ಪರ ವರ್ಗಾವರ್ಗಿಗಳಾಗಿರುತ್ತವೆ.

೮ ಹುಲಗೂರ ಸಾಲಿಯ ಹೆಡ್ಡಮಾಸ್ತರರಾದ ಹಣಮಂತ ಜೀವಾಜೀ ಮಂಟೂರ ಇವರಿಗೆ ಅಷ್ಟೇ ಪಗಾರದ ಮೇಲೆ, ಕೋಡ ತಾ. ಪೈಕೀ ಕೋಡಸಾಲಿಯ ಹೆಡ್ಡಮಾಸ್ತರ ಕೆಲಸಕ್ಕೆ ನೇಮಣೂಕು ಮಾಡಿ, ಹುಲಗೂರ ಸಾಲಿ ಮಾಸ್ತರ ಜಾಗಾದ ಮೇಲೆ ಕೋಡಸಾಲಿಯ ಮಾಸ್ತರರಾದ ನರಸಿಂಹ ಶೇಷೋ ಇವರ ನೇಮಣೂಕು ಮಾಡಿರುತ್ತದೆ.

೯ ಕೋಡ ತಾಲೂಕ ಮಾಸೂರ ಸಾಲಿಯ ಹೆಡ್ಡ್ ಮಾಸ್ತರರಾದ ಮಾನಾಜಿ ತೇಜೋ ಶಿರಸಂಗಿ ಇವರನ್ನು ಹುಬ್ಬಳ್ಳಿ ಸಾಲಿಯ ಮಾಸ್ತರ ಜಾಗಾಕ್ಕೆ ಹಾಂಗು ಅಮರಗೊಳ್ಳ ಸಾಲಿಯ ಮಾಸ್ತರರಾದ ಕೃಷ್ಣಾಜಿ ನಾಮದೇವ ನಾಝುರೆ ಇವರನ್ನು ಮಾಸೂರ ಸಾಲಿಯ ಹೆಡ್ಡ ಮಾಸ್ತರ ಜಾಗಾಕ್ಕೆ ಈ ಪ್ರಕಾರ ಪರಸ್ಪರ ವರ್ಗಾವರ್ಗಿಗಳನ್ನು ಮಾಡಿರುತ್ತದೆ.

೧೦ ಗದಗ ತಾಲೂಕಿನ ಪೈಕಿ ಕಲಕೇರಿ ಸಾಲಿಯ ಮಾಸ್ತರರಾದ ಗಣೇಶ ಗಂಗಾಧರ ಥೋಪೇಶ್ವರ ಇವರಿಗೆ ಬೆಳಗಾವಿ ಜಿಲ್ಹೇದ ಪೈಕಿ ಚಿಕ್ಕೋಡಿ ತಾಲೂಕ ಭೋಜಸಾಲಿಯ ಮಾಸ್ತರ ಜಾಗಾ ಶಿಕ್ಕದ್ದರಿಂದ ಅವರು ಹೊರಟು ಹೋದರು. ಮತ್ತು ಅವರ ಜಾಗಾದ ಮೇಲೆ, ಸದರಿ ಭೋಜ ಸಾಲಿಯ ಮಾಸ್ತರರಾದ ಶಿವಾಜಿ ಅಪ್ಪಾಜಿ ಶಿರಸಂಗಿ ಇವರ ನೇಮಣೂಕಾದ್ದರಿಂದ ಸದರಿಯವರು ಬಂದು ತಮ್ಮ ಕೆಲಸದ ಮೇಲೆ ಹಜರಾದರು.

Chanabassappa B. Dharwar.
ಡಿಪೂಟಿ ಇ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೧೧-೭, ಪುಟ.೧೬೭-೧೬೮ - ಆಕ್ಟೋಬರ ೧೮೭೫)

೭೧

ಧಾರವಾಡ ಜಿಲ್ಹೇದೊಳಗಿನ ಯಾವತ್ತು ಸ್ಕೂಲ ಮಾಸ್ತರರಿಗೆ -

ಧಾರವಾಡ ಜಿಲ್ಹೇದ ಡಿಪೂಟಿ ಎಜ್ಯುಕೇಶನಲ್ ಇನಸ್ಪೆಕ್ಟರ ಇವರ ಕಡಿಂದ ಬರೆದು ತಿಳಿಸುವದೇನಂದರೆ ;- ಈಗ ನೀವು ದರ ತಿಂಗಳಿಗೆ ಕಳುಹಿಸುವ ಮಾಶಿಕ ಪತ್ರಿಕೆಗಳು ಮತ್ತು ಹಜರೀ ರಿಜಿಷ್ಟರ ಇವುಗಳ ನಮೂನೆಗಳು ಧಾರವಾಡ ವೃತ್ತಛಾಪಖಾನೆಯಲ್ಲಿ ಛಾಪಿಸಿದ್ದವು ಶಿಗುವವು. ಆದರೆ ನಿಮಗೆ ಬರೆಯುವ ಮುಂತಾದ ಶ್ರಮವಿಲ್ಲದೆ ಸ್ವಲ್ಪ ಕಿಮ್ಮತ್ತಿನಲ್ಲಿ ಈ ಪ್ರತಿಗಳು ಶಿಗುವವು. ಆದ್ದರಿಂದಾ ನೀವು ಧಾರವಾಡ ವೃತ್ತಛಾಪಖಾನೇದ ಮ್ಯಾನೇಜರ ಇವರ ಕಡಿಗೆ ನಿಮ್ಮ ಸಾಲಿಯ ಸಾದೀಲವಾರ ಹಣದ ಪೈಕಿ ಹಣ ಕಳುಹಿಸಿ ಸದರಿ ನಮೂನೆಗಳನ್ನು ತರಸಿಕೊಳ್ಳುವ ತಜವೀಜು ಮಾಡರಿ. ತಿಳಿಯುವದು.

ತಾ. ೨೬ ನವಂಬರ
ಸನ್ನ ೧೮೭೫ ಇಸವಿ

Chanabassappa B. Dharwar.
ಡಿ. ಎ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೧೧-೯, ಪುಟ.೨೦೫ - ಡಿಸೆಂಬರ ೧೮೭೫)

## ೭೨

### ಸರಕ್ಯುಲರ ನಂಬರು ೬೬೭

ಧಾರವಾಡ ಜಿಲ್ಹೆಯೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ.

ತಿಳಿಸುವದೇನಂದರೆ : ಇನ್ನು ಮೇಲೆ ಸಂಬಳ ಬಟವಡೆದ ಕೆಲಸಾ ಮುಗಿದ ನಂತರಾ ಫೀ ತರುವದಕ್ಕೆ ಶಿಪಾಯಿಯಂನು ಕಳಸುತ್ತಿರಬೇಕು. ತಿಳಿಯುವದು.

ತಾ. ೧೬ ಮಾಹೆ ನವೆಂಬರ ಸಂನ ೧೮೭೬ ಇಸವಿ.

Chanabussappa B. Dharwar.
ಡಿ. ಎ. ಇ. ಜಿ. ಧಾರವಾಡ.

(ಶಾಲಾಪತ್ರಿಕೆ : ೧೨-೮, ಪುಟ.೪೬೭ - ನವ್ಹೆಂಬರ ೧೮೭೬)

## ೭೩

### ಸರಕ್ಯುಲರ ನಂಬರು ೬೬೪

ಧಾರವಾಡ ಜಿಲ್ಹೇಯೊಳಗಿನ ಯಾವತ್ತು ಸ್ಕೂಲ ಮಾಸ್ತರರಿಗೆ ತಿಳಿಪಡಿಸುವದೇನಂದರೆ- ಅಶಿಷ್ಟಂಟ ಮುಂತಾದವರು ರಜೇದ ಮೇಲಿಂದ ತಿರಿಗಿ ಹಾಜರಾದ ಕೂಡ್ಲೆ ರಿಪೋರ್ಟ ಮಾಡತಕ್ಕದ್ದಿದ್ದು, ಕೆಲವು ಮಾಸ್ತರರು ಹೀಗೆ ಮಾಡದೆ ಅಖ್ಯೆರ ತಾರೀಖಿಗೆ ಆಗರ ಯರಡನೇ ತಿಂಗಳದ ೧ನೇ ತಾರೀಖಿಗೆ ರಿಪೋರ್ಟು ಕಳಿಸುತ್ತಾರೆ. ಹೀಗೆ ಕಳಿಸುವದರಿಂದ ಅಭಿಸ್ರಾಕಟಿನ ಕೆಲಸಕ್ಕೆ ಬಹಳೇ ತೊಂದರೇ ಯುಂಟಾಗುತ್ತದೆ. ಇನ್ನು ಮೇಲೆ ಹೀಗೆ ಮಾಡದಲೇ ಯಾವಾಗಿಂದಾಗಲೇ ರಿಪೋರ್ಟು ಮಾಡುತ್ತಿರಬೇಕು. ಹೀಗೆ ಮಾಡದಿದ್ದರೆ ವಂದುವೇಳೆ ರಜೇದ ಮೇಲಿಂದ ಹಾಜರಾದ ಇಸಮಿನ ಸಂಬಳ ದೋರೆಯದೆ, ಸರಕಾರಕ್ಕೆ ಶೇಷ್ಟಿಂಗ ಆಗುವ ಸಂಭವ ಬರುವದು. ಈ ಲುಕಸಾನಿಯ ಜವಾಬದಾರಿ ಯಾರು ರಿಪೋರ್ಟು ಕಳಸಲಿಕ್ಕೆ ಸುಸ್ತಿ ಮಾಡುವರು. ಅವರ ಮೇಲೆ ಉಳಿಯುವದು, ತಿಳಿಯುವದು.

ತಾರೀಖು ೧೫ ಮಾಹೆ ನವಂಬರ ೧೮೭೬ ಇ.

Chanabussappa B. Dharwar.
ಡಿ. ಎ. ಇ. ಜಿ. ಧಾರವಾಡ.

(ಶಾಲಾಪತ್ರಿಕೆ : ೧೨-೮, ಪುಟ.೪೬೮ - ನವ್ಹೆಂಬರ ೧೮೭೬)

## ೭೪

### ಧಾರವಾಡ ಜಿಲ್ಹೆಯೊಳಗಿನ ನೇಮಣೂಕುಗಳೂ ವರ್ಗಾವರ್ಗಿಗಳೂ.

೧ ಶೇಷೊ ಶಿವಾಜಿ ಗು|| ದೇಸಾಯಿ ಹೆಡಮಾಸ್ತರ ಹಾನಗಲ್ಲ ಹೆಂಣು ಹುಡುಗರ ಸಾಲಿ, ಇವರನ್ನು ಅಷ್ಟೇ ಪಗಾರದ ಮೇಲೆ ಕೋಡ ತಾ. ಹಾಂವಸಭಾವೀ ಸಾಲಿಯ ಹೆಡಮಾಸ್ತರ ಕೆಲಸಕ್ಕೆ ನೇಮಿಸಿಧೆ.

೨ ಸ್ವಾಮಿ ತಿಮ್ಮಾಜಿ ಹೆಡಮಾಸ್ತರ ಹಾವಸಬಾಂವಿ ಇವರನ್ನು ಅಷ್ಟೇ ಪಗಾರದ ಮೇಲೆ ಹಾನಗಲ್ಲ ಹೆಂಣು ಹುಡುಗರ ಸಾಲಿಯ ಮಾಸ್ತರ ಜಾಗೆಕ್ಕೆ ನೇಮಿಸಿಧೆ.

೩ ಗುರುನಾಥ ತಿಮ್ಮಾಜಿ ಅ. ಮಾಸ್ತರ ಮಿಶ್ರಿಕೋಟ ಇವರನ್ನು ಅಷ್ಟೇ ಸಂಬಳದ ಮೇಲೆ ಹಬ್ಬಳ್ಳಿ ಕನಡು ಮರಾಠಿ ಸಾಲಿಯ ಮಾಸ್ತರ ಜಾಗಕ್ಕೆ ನೇಮಿಸಿಧೆ.

೪ ಆತ್ಮಾರಾಮ ಗೋವಿಂದ ಘೂಣೆಕರ ಹುಬ್ಬಳ್ಳೀ ಕನಡು ಮರಾಠಿ ಸಾಲಿಯ ಹೆಡಮಾಸ್ತರ ಇವರಿಗೆ ಅಷ್ಟೇ ಪಗಾರದ ಮೇಲೆ ಮಿಶ್ರಿಕೋಟ ಸಾಲಿಯ ಆಶಿಷ್ಟಂಟ ಜಾಗೆಕ್ಕೆ ನೇಮಿಸಿಧೆ.

೫ ಲಿಂಗಣಗವಡಾ ಬಸ್ಸಣಗವಡಾ ಅಟ್ರೆಂಡಮಾಸ್ತರ ಟ್ರೇನಿಂಗ ಕಾಲೇಜ ಧಾರವಾಡ ಇವರನ್ನು ೧೨ ರೂ. ಸಂಬಳದ ಮೇಲೆ ಚಿಕ್ಕ ನರಗುಂದ ಸಾಲಿಯ ಮಾಸ್ತರ ಜಾಗೆಕ್ಕೆ ನೇಮಿಸಿಧೆ.

೬ ಹಣಮಂತ ರಾಮಚಂದ ಬಾಗಲವಾಡಿ ಮಾಸ್ತರ ಚಿಕ್ಕ ನರಗುಂದ ಇವರನ್ನು ಅಷ್ಟೇ ಪಗಾರದ ಮೇಲೆ ಕುಸುಗಲ್ಲ ಸಾಲಿಯ ಮಾಸ್ತರ ಜಾಗೆಕ್ಕೆ ನೇಮಿಸಿಧೆ.

೭ ರಾಮಚಂದ್ರ ಸ್ವಾಮಿರಾವ ಹೆಡಮಾಸ್ತರ ಕುಸುಗಲ್ಲಿ ಇವರನ್ನು ಲಕ್ಷ್ಮೇಶ್ವರ ೨ನೇ ನಂಬರ ಬ್ರಾಂಚಸ್ಕೂಲ ಮಾಸ್ತರ ಜಾಗೆದ ಮೇಲೆ ನೇಮಸಿಧೆ. ಪಗಾರ ರು.೧೧.

ತಾರೀಖು ೧೭ ನವಂಬರ ೧೮೭೭ ಇಸವಿ.

Chanabussappa B. Dharwar.
ಡಿ. ಎ. ಇ. ಜಿ. ಧಾರವಾಡ.

(ಶಾಲಾಪತ್ರಿಕೆ : ೧೨-೮, ಪುಟ.೪೭೮-೭೯ - ನವ್ಹೆಂಬರ ೧೮೭೭)

೭೫

ಜಾವಕನಂಬರು ೧೩೪೦
ನೋಟೀಸು

ಧಾರವಾಡ ಜಿಲ್ಹೇದಲ್ಲಿರುವ ಯಾವತ್ತು ಸ್ಕೂಲಮಾಸ್ತರರಿಗೆ ಧಾರವಾಡ ಜಿಲ್ಹೇದ ಡಿಪೂಟಿ ಇಜ್ಯೂಕೇಶನಲ್ ಇನಸ್ಪೆಕಟರವರ ಕಡಿಂದ ತಿಳುಹಿಸುವದೇನಂದರೆ - ನಾವು ಬಂಕಾಪುರ ತಾ. ಪೈಕಿ ಹುಲಗೂರ ಸಾಲಿಯ ತಪಾಸಣೆಗೆ ತಾ. ೧೮ನೇ ಮಾಹೆ ಆಗಷ್ಟ ೧೮೭೭ ದಿವಸ ಹೋದ ಸಮಯದಲ್ಲಿ ಅಲ್ಲಿಯ ಸಾಲಿಯ ಹೆಡ್ಡಮಾಸ್ತರರಾದ ನರಸಿಂಹ್ವ ಶೇಷೋ ಇವರು ತಾ. ೧೫ ರಿಂದ ಹಜರಿ ತುಂಬದೇ ಇದ್ದದ್ದು ಕಂಡು ಬಂದದರಿಂದ, ಸದರ ಮಾಸ್ತರರಿಗೆ ಈ ತಪ್ಪಿನ ದಸಿಂದ ೩ ಮೂರು ರೂಪಾಯಿ ದಂಡ ಮಾಡಬೇಕೆಂದು ಮೆಹರ್ಬಾನ ಇಜ್ಯೂಕೇಶನಲ್ ಇನಸ್ಪೆಕಟರ ಸಾ. ಬಹದ್ದೂರ ಪ್ರಾಂತ ದಕ್ಷಿಣಭಾಗ ಇವರ ಕಡಿಗೆ ಬರೆದು ಕಳುಹಿಸಲು ಆ ಸಾಹೇಬರವರು ಮಂಜೂರು ಮಾಡಿರುತ್ತಾರೆ.

೨ ಈ ಪ್ರಕಾರದ ತಪ್ಪುಗಳು ಆಗದಂತೆ ಎಲ್ಲ ಮಾಸ್ತರರು ಜಾಗ್ರತೆಯನ್ನಿಡಬೇಕು.

ತಾ. ೨ನೇ ಮಾಹೆ ಸಪ್ತಂಬರ ೧೮೭೭ ಇ.
ಧಾರವಾಡ.

Chanabassappa B. Dharwar.
ಡಿ. ಎ. ಇ. ಜಿ. ಧಾರವಾಡ.

(ಶಾಲಾಪತ್ರಿಕೆ : ೧೨-೧೨, ಪುಟ.೧೪-೧೫ - ಡಿಸೆಂಬರ ೧೮೭೭)

## ೭೬

### ಸರಕ್ಯೂಲರ ನಂಬರು. ೮೦೩

ಧಾರವಾಡ ಜಿಲ್ಹೆಯೊಳಗಿನ ಯಾವತ್ತು ಸ್ಕೂಲಮಾಸ್ತರರಿಗೆ ತಿಳಿಸುವದೇನಂದರೆ, ದರ ತಿಂಗಳಿಗೆ ಪಗಾರ, ಮಾಸ್ತರ ಮುಂತಾದವರಿಗೆ ಯಾವ ತಾರೀಖಿಗೆ ಮುಟ್ಟುತ್ತದೆ ಆ ತಾರೀಖು, ಅಭಿಸ್ರಾಕಟಿನ ಶೆರೆಕೋಷ್ಟಕಿನಲ್ಲಿ ಬರದು ಸಹಿ ಮಾಡುತ್ತಿರಬೇಕು. ಅಂದರೆ ಅದರಿಂದ ಮಾಸ್ತರರಿಗೆ ಪಗಾರ ತಡವಾಗಿ ಮುಟ್ಟಿತೋ ಅಥವಾ ತೀವ್ರ ಮುಟ್ಟಿತೋ ಈ ಬಗ್ಗೆ ನಮಗೆ ತಿಳಿಯುವದಕ್ಕೆ ಮಾರ್ಗವಾಗಿ ತಡವಾಗಿ ಮುಟ್ಟಿದ್ದು ನಜರರಿಗೆ ಬಂದರೆ ಅದರ ಬಗ್ಗೆ ಬಂದೊಬಸ್ತ ಮಾಡಲಿಕ್ಕೆ ನೆಟ್ಟಗಾಗುವದು. ಇನ್ನು ಮೇಲೆ ಯಾವತ್ತರು ನೆನಪಿನಲ್ಲಿಟ್ಟು ಮೇಲೆ ಬರದಂತೆ ಮಾಡಲಿಕ್ಕೆ ಯಾರು ತಪ್ಪಬಾರದು. ತಿಳಿಯುವದು.

ತಾರೀಖು ೯ನೇ ಮಾಹೆ ಜೂನ ೧೮೭೭ ಯಿಸವಿ.

Chanabassappa B. Dharwar.
ಡಿ. ಇ. ಇ. ಜಿಲ್ಹಾ ಧಾರವಾಡ.

(ಶಾಲಾಪತ್ರಿಕೆ : ೧೨-೧೨, ಪುಟ.೧೫ - ಡಿಸೆಂಬರ ೧೮೭೭)

## ೭೭

### ಧಾರವಾಡ ಜಿಲ್ಹೆಯೊಳಗಿನ ವರ್ಗಾವರ್ಗಿ ವ ನೇಮಣೂಕುಗಳು

#### ವರ್ಗಾವರ್ಗಿಗಳು.

೧ ರಾಮಚಂದ್ರ ಕಾಶಿನಾಥ ಪಟವರ್ಧನ ಅಶಿಷ್ಟಾಂಟ ಮಾಸ್ತರ ಧಾರವಾಡ ಮರಾಠಿಸಾಲಿ ಇವರನ್ನ ಅಷ್ಟೇ ಪಗಾರದ ಮೇಲೆ ತಿರಲಾಪೂರ ಸಾಲಿಯ ಮಾಸ್ತರ ಕೆಲಸಕ್ಕೆ ಬದಲಿ ಮಾಡಿರುತ್ತೇವೆ, ಪಗಾರ ರು. ೧೨.

೨ ಹಣಮಂತ ರಾಮಚಂದ್ರ ಬಾಗಲವಾಡಿ ಸ್ಕೂಲಮಾಸ್ತರ ಕುಸುಗಲ್ಲ ಇವರನ್ನು ಅಷ್ಟೇ ಪಗಾರದ ಮೇಲೆ ನರೇಂದ್ರ ಸ್ಕೂಲಮಾಸ್ತರ ಕೆಲಸಕ್ಕೆ ಬದಲಿ ಮಾಡಿರುತ್ತೇವೆ. ಪಗಾರ ರು.೧೨.

೩ ಅಡವ್ಯೆಯ್ಯಾ ರುದ್ರಯ್ಯಾ ಸ್ಕೂಲಮಾಸ್ತರ ತಿರಲಾಪೂರ ಇವರಿಗೆ ಅಲ್ಲಿ ರು. ೧೭ ಪಗಾರ ಇದ್ದು ಅವರನ್ನು ೨೦ ರು. ಪಗಾರ ಮಾಡಿ ಕರ್ಜಗಿ ಸಾಲಿಯ ಮಾಸ್ತರ ಕೆಲಸಕ್ಕೆ ಬದಲಿ ಮಾಡಿರುತ್ತೇವೆ.

೪ ಮರಿಯಪ್ಪಾ ಹಣಮಪ್ಪಾ ಸ್ಕೂಲಮಾಸ್ತರ ಶಿರೂರ ಇವರನ್ನು ಅಷ್ಟೇ ಪಗಾರದ ಮೇಲೆ ಕಚವಿ ಸಾಲಿಯ ಮಾಸ್ತರ ಕೆಲಸಕ್ಕೆ ಬದಲಿ ಮಾಡಿರುತ್ತೇವೆ. ಪಗಾರ ರು. ೧೫.

೫ ಧೊಂಡೊ ಶ್ರೀಧರ ಗೋಖಲೆ ಸ್ಕೂಲಮಾಸ್ತರ ಕಚವಿ ಇವರನ್ನು ಅಷ್ಟೇ ಪಗಾರದ ಮೇಲೆ ಶಿರೂರ ಸಾಲಿಯ ಮಾಸ್ತರ ಕೆಲಸಕ್ಕೆ ಬದಲಿ ಮಾಡಿರುತ್ತೇವೆ. ಪಗಾರ ರು. ೧೫.

#### ನೇಮಣೂಕಗಳು

೧ ಶೇಷಗಿರ ಅಣ್ಣಾಜಿ ಪಾಚಲಾಖ ಟ್ರೇನಿಂಗ ಕಾಲೇಜ ಇವರನ್ನು ಮೊರಬ ಸಾಲಿಯಲ್ಲಿ ಅಶಿಷ್ಟಾಂಟ ಮಾಸ್ತರ ನೇಮಿಸಿರುತ್ತೇವೆ. ಪಗಾರ ರು.೧೦.

